ಹುಟ್ಟಿಸುವ ಗುಣವೊಂದು ಬ್ರಹ್ಮಗೆ |
ಹುಟ್ಟಿಸುವ ರಕ್ಷಿಸುವ ಗುಣವನು |
ನೆಟ್ಟನಾ ವಿಷ್ಣುವಿಗೆ ರುದ್ರನೆನಿಪ್ಪ ಮಹಿಮಂಗೆ ||
ಹುಟ್ಟಿಸುವ ರಕ್ಷಿಸುವ ಭಕ್ಷಿಪ |
ಕಟ್ಟಳೆಯನಳವಡಿಸಿ ಪಟ್ಟವ |
ಕಟ್ಟಿ ಕರುಣಿ[೧]ಸಿ ಮೆರೆದನೆಮ್ಮಯ ಗುರು ಗುಹೇಶ್ವರನು || ೨೧ ||

**ಅಂತು ಗತಿ ೧ಕ್ಕಂ ಪದ ೨೧ಕ್ಕಂ ಮಂಗಳಂ**

---

೧ ಪಾಲಿ ( ಇ. )

# ಪಾರ್ವತೀಪರಮೇಶ್ವರಸಂವಾದದ ಗತಿ

**ವಚನ**

ಬ್ರಹ್ಮವಿಷ್ಣುಗಳ ಮಾಯೆ ತೊತ್ತುಳದುಳಿವಂದು ।
ದೇವದಾನವರ ಮಾಯೆ ಅಗಿದಗಿದು ತಿಂಬಂದು ।
ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ ಕಾಡುವಂದು ॥
ನೊಸಲಕಣ್ಣು ಪಂಚಮುಖ ದಶಭುಜದವರಿಗೆ ಮಾಯೆ ಅರ್ಧಾಂಗಿಯಾದಂದು ।
ಅಷ್ಟಾಶೀತಿ ಸಹಸ್ರ ಋಷಿಗಳ ಮಾಯೆ ತಪೋಮದದಲಿ ಕೆಡಹುವಂದು ।
ನಾನು ಮಾಯಾಕೋಳಾಹಳನಾಗಿರ್ದೆ ಕಾಣಾ ಗುಹೇಶ್ವರಾ ॥ ೧ ॥

**ಸೂಚನೆ**

ಪರಮ ನಿತ್ಯಾನಂದಸುಖವಹ[೧] ।
ಪರಿಯ ಕೇಳಿದೊಡೀಶ ಹೇಳಲು ।
ಗಿರಿಜೆ ಮಾಯೆಯನಿಳೆಗೆ ಕಳುಹಿದಳಱಿವೊಡಲ್ಲಮನ ॥

ಪರಿಭವಂಗಳನೀಗಿಯಂತಃ ।
ಕರಣವನು ಶುದ್ಧೈ[೨]ಸಿ ಮುಂದಣ ।
ಮರಣಬಾಧೆಯನೊದೆ[೩]ದು ನಿಶ್ಚಿಂತೆಯಲಿ ಸುಖದಿಂದೆ ॥
ಪರಮ ಸುಜ್ಞಾನಾಮೃತವನಾ ।
ವ[೪]ರಿಸಿ ನಿತ್ಯವನಱಿವವರು ಸ ।
ತ್ಕರಿಸಿ ಕೇಳುವುದೀ ಮಹಾ ಪ್ರಭುಲಿಂಗಲೀಲೆಯನು ॥ ೧ ॥

ವರ ಸರಸ್ವತಿ ಕಮಲಸಂಭವ ।
ರಿರವಿನಿಂದೆ ಸಮಸ್ತ ಸಚರಾ ।
ಚರದ ನಾನಾ ಯೋನಿಜ ಸ್ತ್ರೀಪುರುಷರೆಂದೆಂಬ ॥
ಪರಿಪರಿಯಲಿಹ ಜೀವಜಾಲದ ।
ಹೊರಳಿ ಹುಟ್ಟಿತು ಕಮಲಜಾಂಡದ ।
ಹೊ[೫]ರೆಹೊರೆಗಳೆಡೆಗಳಲಿ[೫] ಕಿಕ್ಕಿಱಿಗಿಱಿದು ಸಂದಣಿಸಿ ॥ ೨ ॥

---

೧ ಪದವಿಯ ( ಗ. ) ೨ ಸಂದ್ಧೈ ( ಅ. ) ೩ ಗೆಲಿ ( ಗ. ) ೪ ದ ( ಅ, ಎ, ಗ, ಜ. ) ೫-೫ ರಗಳೆಡೆಗಳಲಿಕ್ಕಿ ( ಇ. )

ಹರಿ ಸುರೇಂದ್ರಾದಿಗಳು ಮೊದಲಾ |
ದರಿಗೆ ನಿರ್ಮಿತವಾಗಿ ಬಹು ವಿ |
ಸ್ತರದಲವ[೧]ರವರಿಗೆ[೧] ಚತುರ್ದಶ ಭುವನ ಭವನದಲಿ ||
ಸುರನರೋರಗಮುಖ್ಯ ಸಚರಾ |
ಚರರಿ[೨]ಗಿರಲ[೨]ಳವಡಿಕೆ[೩] ಮಾಡಿದ |
ಪರುಠವಣೆ ಚೆನ್ನಾಯ್ತು ಚತುರಾನನನ ಚದುರಿನಲಿ || ೩ ||

ಆ ಸರೋಜಭವಾಂಡದೊಳಗತಿ |
ಲೇಸೆನಿಸುವನುಪಮದ ಪರಶಿವ |
ನಾ ಸದಾಶಿವನಾ ಶಿವನ ಮಹಿ[೪]ಮಾಭಿಧಾನಗಳ ||
ಭಾಸುರವೆ ಸಾಕಾರವಾದ ವಿ |
ಳಾಸತೆಯಲಿಪ್ಪಾದಿರುದ್ರಗೆ |
ವಾಸವಾದುದು ತನಗೆ ತಾನೆ ಮಹಾ ಮಹತ್ವದಲಿ || ೪ ||

ಮಿಸುಪ ಸತ್ವಗುಣಸ್ವ[೫]ಭಾವ |
ಪ್ರಸರವೇ ರಜತಾದ್ರಿಯೆಂಬೀ |
ಹೆಸರ ಪೆತ್ತು ನವೀನ ವಿಮಲಾಕಾರ ವೃತ್ತಿಯಲಿ ||
ದೆಸೆದೆಸೆಗೆ ದೇದೀಪ್ಯ[೬]ಮಾನದ |
ಲೆಸೆದುದಂತಿಂತೆಂದು ಮಿಗೆ ಬ |
ಣ್ಣಿಸಲು ಬಲ್ಲವನಾವನ್ಯೈ[೭] ಕೈಲಾಸ ಪರ್ವತ[೮]ವ || ೫ ||

ನಿಗಮನಿಕರದ ಸುತ್ತುವಳಯದ |
ಬಿಗಿದ ಕೋಂಟೆಯ ಶಾಸ್ತ್ರಸಂಚಯ |
ದಗಳಿನಾಗಮ ಸಮುದಯಂಗಳ ದಾರವಟ್ಟಗಳ ||
ಹಗಲಿಉಳ ಹಂಗಿಲ್ಲದತಿ ಮಹಿ |
ಮೆಗಳಿಗಾಸ್ಪದಮಾಗಿ ಮಿಗೆ ಝುಗ |
ಝುಗಿಸುತಿರ್ದುದು ರ[೯]ಮ್ಯವೆನೆ ರಚನೆಯಲಿ ರಜತಾದ್ರಿ || ೬ ||

---

೧-೧ ರಿಗೆ ನೆರೆ ( ಇ. ); ರಿಗೆ ಮಿಗೆ ( ಜ. ) ೨-೨ ಗೆಲ್ಲ ( ಜ. ) ೩ ಸಿ ( ಆ, ಜ. ) ೪ ಪರ ( ಒ. ) ೫ ಪ್ರ ( ಇ. ) ೬ ಯೀಶ್ವರಸ ( ಗ. ) ೭ ನಾ. ( ಎ, ಒ, ಖ, ಚ, ಮು. ) ೮ ಮಂದಿರ ( ಒ.) ೯ ಕಾ ( ಜ. )

ಶಕ್ತಿಸಂಚವನವಱದ ಸದಮಲ |
ಭಕ್ತಿಮಾರ್ಗದ ರಾಜಬೀದಿಯ |
ಯುಕ್ತಿಗೊಪ್ಪುವ ಸೋಹಮೆಂಬೀ ಗುಡಿಯ ತೋರಣದ ||
ವ್ಯಕ್ತಮಲ್ಲದ ತತ್ವಮಸಿಯೆಂ |
ಬುಕ್ತಿಯುಪ್ಪರಿಗೆಯಲಿ ನೆಱೆ ನಿ |
ರ್ಮುಕ್ತ ಮಹಿಮೆಯ ಮನೆಗಳಲಿ ಮೆಱೆಯಿತ್ತು ಕೈಲಾಸ[೧] || ೭ ||

ನಿರುತ ನಿಜ ಸುಖ ದೇವತಾವಾಂ |
ದಿರದ ಚಿತ್ತಸ್ಥಿರದ ಬಾಗಿಲ |
ಸಿರಿದು ಪರಮಾನಂದದೊಡ್ಡೋಲಗದ ಚಾವಡಿಯ ||
ನೆರೆದು ಶೋಭಿಸುವಷ್ಟಮಹದೈ |
ಸಿರಿಯ ಮೊದಲಾಗಿರ್ದ ನಾನಾ |
ಪರಿಯ ಸಂಪದ ಸಂದಣಿಸಿದುದು ಶಿವನ ಭವನದಲಿ || ೮ ||

ಹೊಳೆವ ಸಮ್ಯಗ್ಜ್ಞಾನಸೀಠ |
ಸ್ಥಲದ ನಿತ್ಯಾನಂದ ನಿಜ ನಿ |
ಶ್ಚಲ ನಿರಾಕುಳ ನಿರ್ವಿಕಾರ ನಿರಾಳ ನಿಶ್ಚಿಂತ ||
ಬಳಸಬಾರದ ಬಱಯ ಬೊಮ್ಮದ |
ಹೊಳಹು ಸಾಕ್ಷಾತ್ಕರಿಸಿ ನೆಱೆ ನಿ |
ರ್ಮಲತೆವೆತ್ತಾ[೨] ರುದ್ರನಿರುತಿರ್ಪನು ವಿನೋದದಲಿ || ೯ ||

ಮೂಲತತ್ವವೆ ಮೋಱೆ ವಾಯುವೆ |
ತೋಳುವಾದಿಯನಾದಿಯೆಂಬವೆ |
ಕಾಲು ಪಾವಕ ದಿವಸಪತಿ ಹಿಮಕರರೆ ಕಣ್ಣುಗಳು ||
ಕೀಲಿಸಿದ ಹೃದ್ಬೀಜ ಬಿಂದು ಚ |
ಘಾಳಿಸಿದ ಶೀತಾಂಶುವಾಗಲು |
ಮೇಳವಿಸಿ ತನುವೊಪ್ಪುತಿರ್ದುದು ಪಾರ್ವತೀಪತಿಯ || ೧೦ ||

೧ ರಜತಾದ್ರಿ ( ಗ. ) ೨ ವೆನಿಪ್ಪಾ ( ಜ. )

ಕಾಲು ಕಲ್ಪವಿಕಲ್ಪಗಳು ನಳಿ |
ತೋಳು ಮೋಹಸ್ನೇಹಗಳು ನಡು |
ವೇ ಲ[೧]ಸನ್ಮದ ವೃತ್ತಕುಚವೇ[೨] ಕಾಮಲೋಭಗಳು ||
ಲಾಲಿತಾಸ್ಯವೆ ಮಮತೆ ತೊಳಗುವ |
ಲೋಲಲೋಚನವಱುಹು ಕುಱುಹು ಸ |
ಮೇಳವಾಗಿಹ ಗಿರಿಜೆ ಮೆಱೆ[೩]ದಳು ಶಂಕರಾಂಕ[೪]ದಲಿ || ೧೧ ||

ಉರಗನಾಭರಣದ ಲಸನ್ಮಣಿ |
ವಿರಚಿಸುವ ಭೂಷಣದ ಕಾಯದ |
ಪರಮ ಶುದ್ಧ ಸ್ಫಟಿಕಕಾಂತಿಯ ದಿವ್ಯ ತನುರುಚಿಯ ||
ಗಿರಿಸುತೆಯನೀಕ್ಷಿಸುವ ನೋಟದ |
ಹರನ ನೋಡುವ ವರ ಕಟಾಕ್ಷದ |
ಬೆರಕೆಯೊ[೪]ಪ್ಪಿನ ದೇವ ದೇವಿಯರಿರ್ದರೊಲವಿನಲಿ || ೧೨ ||

ಸಸಿಯು ಶೀತಳದಂತೆ ಕಪ್ಪುರ |
ದೆಸೆವ ಕಂಪುಗಳಂತೆ ಕನಕದ |
ಮಿಸುಪ ಲೋಹಸುವರ್ಣದಂತೆ ಸುಧಾಂಶು ರುಚಿಯಂತೆ ||
ಲಸಿತ ಮಿಥುನಾಳಾಪ ಹೊರಗಾ |
ಣಿಸದೆ ಶಕ್ತಿಸಮೇತ ಶಂಕರ |
ನೊಸೆದು ಕುಳ್ಳಿತು ಮೆಱೆ[೩]ವುತಿರ್ದನು ದಿವ್ಯತೇಜದಲಿ || ೧೩ ||

ಜಡೆಗಳೇ ಬೇರುಗಳು ಗಂಗೆಯು |
ಮಡುವೆ ಬೆಳೆನೀರಂಗವೇ ತರು |
ತೊಡವೆ ಪರ್ಣಗಳಭಯವರದವೆ ಕುಸುಮಸಂಘ[೫]ಲವು ||
ಒಡಲನಪ್ಪಿ[೬]ದ ಮಡದಿಯೇ ಬಿಡ |
ದಡರಿ ಹಬ್ಬಿದ ಲತೆಯೆನಲ್ಕಾ |
ಮೃಡನೆನಿಪ ಮೂಲಾತ್ಮವೃಕ್ಷ ಮಹಾ ವಿರಾಜಿಸಿತು || ೧೪ ||

---

೧ ಲೋಲ ( ಗ. ) ೨ ಗಳು ( ಇ. ) ೩ ಗ ( ಅ, ಇ, ಉ, ಎ, ಒ, ಖ, ಚ, ಜ. ) ೪ ಯ ( ಅ. ಉ, ಎ, ಒ, ಕ, ಖ, ಚ, ಜ, ಮ. ) ೫ ಸತ್ವ ( ಜ. ) ೬ ನಂಟ ( ಮ. ) ; ನಡರಿ ( ಗ. )

ವರ ಸುಗಂಧದ ಭೂಷಣದ ಸೀ |
ಗುರಿಯ ವಸ್ತ್ರದ ಪಾದುಕೆಯ ಚಾ |
ಮರದ ಹಡಪದ ಕನ್ನಡಿಯ ಪರಿಚರ್ಯದೊಳಗದ ||
ಪರಮ ಸುಕೃತಿಗಳಿದ್ದರಾ ಶಂ |
ಕರನ ಶರ್ವಾಣಿಯ ಸಮೀಪದ |
ಹೊರೆಯಲಗ್ಗದ[1] ರುದ್ರಗಣಗಳು ರುದ್ರಕನ್ಯೆಯರು || ೧೫ ||

ಬೆಸನ ಹಾರುವ ಪಾರ್ವತಿಯ ತಾ |
ಮಸ ರಜಃ ಸಾತ್ವಿಕ ಗುಣಂಗಳು |
ಪೆಸರುವಡೆದಬಲಾಕೃತಿಯಲೋಲೈಸಿಕೊಂಡಿಹವು ||
ಎಸೆವ ಮಾಯಾನಾಮವೇ ತಾ |
ಮಸಗುಣಾನ್ವಿತೆಯಾಗಿ ಮಿಗೆ ರಂ[2] |
ಜಿಸಿದಳವರೊಳು ಮಂಗಳೆಯ ಮನ್ನಣೆಯ ಮಹಿಮೆಯಲಿ || ೧೬ ||

ಕೆಂಜೆಡೆಯ ಮಕುಟಗಳ ತನುವಿನ |
ರಂಜಿಸುವ ಚಾತುರ್ಭುಜಂಗಳ |
ಕೆಂಜುರಿಯ ಹಣೆಗಣ್ಣುಗಳ ವಾಮಾಂಗಶಕ್ತಿಗಳ ||
ಕುಂಜರನ ಚರ್ಮಾಂಬರದ ಭವ |
ಭಂಜನರು ಮುಂಬಿನಲಿ ತೇಜಃ |
ಪುಂಜನೊಡ್ಡೋಲಗದೊಳಿರ್ದರು ರುದ್ರಕೋಟಿಗಳು || ೧೭ ||

ಪ್ರೇಮದಿಂದಲಿ ನೀಲಮೇಘ |
ಶ್ಯಾಮಕಾಯರು ಸಾತ್ವಿಕಸ್ಥಿತ |
ನಾಮಧೇಯರು ಕೌಸ್ತುಭೋರಸ್ಥಳದ ಚೆನ್ನಿಗರು ||
ಶ್ರೀ ಮಹಾಲಕ್ಷ್ಮೀಸಮೇತರು |
ಕಾಮಜನಕರು ಕಮಲನೇತ್ರರು |
ವಾಮದಲಿ ಶಿವಸಭೆಯೊಳಿರ್ದರು ವಿಷ್ಣುಕೋಟಿಗಳು || ೧೮ |

---

೧ ಗಣಿತ ( ಮ. ) ೨ ರಾ ( ಇ, ಜ. )

ಚತುರತೆಯ ಚತುರಾನನದ ಶಾ |
ಶ್ವತ ರಜೋಗುಣರಚಿತ ಮೂರ್ತಿಯ |
ನುತ ಸುವರ್ಣಚ್ಛವಿಯ ನಿರ್ಮಲಕಾಯಕಾಂತಿಗಳ ||
ಅತಿಶಯದ ಸಾಕ್ಷಾನ್ಮಹಾ ಭಾ |
ರತಿ ಸಮೇತದ ಮಹಿಮರಾ ಪಶು |
ಪತಿಯ ಬಲದಲಿ ನೆರೆದುದ[೧]ತುಳ ಬ್ರಹ್ಮಕೋಟಿಗಳು || ೧೯ ||

ಸುರರು ಖಚರರು ಸಿದ್ಧ ವಿದ್ಯಾ |
ಧರರು ಮನುಗಳು ಯಕ್ಷ ರಾಕ್ಷಸ
ಗರುಡ ಗಂಧರ್ವಾದಿ ನಾನಾ ದೇವಯೋನಿಜರು ||
ಉರಗ ನರರೊಡಗೂಡಿ ದೇವೇಂ |
ದ್ರರುಗಳಗಣಿತ ಕೋಟಿ ನೆರೆದುದು |
ಸರಸಿಜಾಸನನಪರ ದೆಸೆಯಲಿ ಶಿವನ ಸಭೆಯೊಳಗೆ || ೨೦ ||

ಚಂದ್ರಕಳೆಗಳನೆಯ್ದೆ ಕರಗಿಸಿ |
ತಂದು ಕಱುವಿ[೨]ನೊಳೆಱೆ[೨]ದರೋ ಮೇ |
ಣಿಂದುಮೌಳಿಯ ದರಹಸಿತವೇನೊಂದು ರೂಪಾಯ್ತೊ ||
ಎಂದೆನಲು ಪರಮೇಶ್ವರಂಗಾ |
ನಂದದಾಶ್ರಯ[೩]ವೆನಿಪ ಮಹಿಮೆಯ |
ನಂದಿಕೇಶ್ವರನಿರ್ದ[೪]ಸಮ್ಮುಖದಲ್ಲಿ ಶಂಕರನ[೪] || ೨೧ ||

ಜವನ ಜವಗೆಡಿಸುವ ಮಹಾ ಮೃ |
ತ್ಯ[೫]ವಿನ [೬]ಮಿತ್ತುವ[೫] ಮಿಡಿದ[೬] ಕಾಲ[೭]ನ |
ಠ[೭]ವಣೆಯನು ತಕ್ಕಿ[೮]ಸುವ ಕರ್ಮಭ್ರಮೆಯ ಭಂಗಿಸುವ ||
ಶಿವಪದದ್ರೋಹಿಗಳ ಸಱ್ರನೆ |
ಸವಱಿ ಸೀಳ್ದಪ್ಪಳಿಸುವಧಟನ |
ತವಕ ತಕ್ಕೆ[೯]ಯ ವೀರಭದ್ರನು ಮುಂದೆ ಮೋಹಿಸಿದ || ೨೨ ||

೧ ಮೆರೆದರ ( ಇ. ) ೨ ರೂವಿ ( ಕ. ) ೩ ಮ ( ಎ, ಒ, ಖ, ಗ, ಚ, ಜ. ) ೪-೪ ನಭವನ ದೃಷ್ಟಿ ವಾರಿಯಲಿ ( ಅ. ) ೫-೫ ವನು ಮೊಂಟುವ ( ಉ, ಒ, ಕ ಖ, ಜ, ಮು. ); ವನು ಮೆಟ್ಟುವ ( ಇ. ) ೬-೬ ಗಂಟಲ ಮಿಡಿವ ( ಗ. ); ಬೇಟವ ಮುರಿವ ( ಅ. ); ಮಕುಟವನೊದೆವ ( ಎ. ); ಮೀಸೆಯ ಹಿಡಿವ ( ಒ. ) ೭-೭ ನುಱ ( ಕ. ) ೮ ತಗ್ಗಿ ( ಅ. ) ೯ ದೇಳ್ಗಿ ( ಅ. )

ಹರನ ಹರುಷದ ಹಕ್ಕೆ ಪರಮೇ |
ಶ್ವರನ ಪರಿಣಾಮದ ಪಸರ ಶಂ |
ಕರನ ಸೌಖ್ಯದ ಸಾಲೆ ಮೃಡನೀಕ್ಷಿಸುವ ಮುಖಮುಕುರ ||
ಪರಮ ಭಕ್ತಿಯ ಭಾವ ಭಂಗಿಯ |
ಕರುವೆನಿಸುವಾ ಭೃಂಗಿನಾಥನ |
ಪರಿ ವಿರಾಜಿಸುತಿರ್ದುದಾ ಶಶಿಧರನ ಸಭೆಯೊಳಗೆ || ೨೩ ||

ಕಡಲನಾದೊಡೆ ಕಂಗಳಿಂದವೆ |
ಕುಡಿವ ತತ್ತಡೆ ಮೇರುಗಿರಿಯನು |
ಮಿಡಿದು ಮೀಂಟುವ ಮುಳಿದೊಡಬುಜಭವಾಂಡ ಮಂಡಲವ ||
ಹಿಡಿದು ಹಿಸುಕುವ ವೀರವೃತ್ತಿಯ |
ಕಡುಹಿನುಗ್ರ ಸಮುಗ್ರರಿರ್ದರು |
ಮೃಡನ [1]ಮುಂದೆಸೆಯಲ್ಲಿ ಭೂತಪ್ರೇತ[1]ಗಣನಿಕರ || ೨೪ ||

ವರ ವಿನಾಯಕ ದುರ್ಗೆ ಭೈರವ |
ನೆರೆದ ವೇತಾಳಿಯರು ಕರ ಭೀ |
ಕರದ ಶಾಕಿನಿ ಡಾಕಿನಿಯರುಗಳಾದಿಯಾಗಿರ್ದ ||
ಪರಿಪರಿಯ ಪೆಸರವರನೇಕರು |
ನೆರೆದರಾ ಶಂಕರನ ಸಭೆಯೊಳು |
ಹಿರಿದು ಹರುಷಂಗಳಲಿ ಸಚರಾಚರರು ಸಂದಣಿಸಿ || ೨೫ ||

ಅತ್ರಿ ಭಾರದ್ವಾಜ ವಿಶ್ವಾ |
ಮಿತ್ರ ಗೌತಮ ಗಾರ್ಗ್ಯ ನಿರ್ಮಳ |
ಗಾ[2]ತ್ರನಾರದ ಭೃಗು ಪುಲಸ್ತ್ಯ ವಶಿಷ್ಠ ದೂರ್ವಾಸ ||
ಚಿತ್ರತರವೆನಿಸುವ ಪವಿತ್ರ ಚ |
ರಿತ್ರರಾ ಶಿಖಿರವಿಸುಧಾರಕ |
ನೇತ್ರನೊಡ್ಡೋಲಗದೊಳಿರ್ದುದು ಪರಮ ಮುನಿನಿಕರ || ೨೬ ||

---

೧–೧ ಹಿಂದೆಸೆಯಲ್ಲಿಯಗಣಿತ ಪ್ರಮಥ ( ಗ. ) ೧ ಪ್ರಮಥ ( ಇ, ಉ, ಎ, ಕ, ಖ, ಚ, ಜ, ಮ. )
೨ ಸೂ ( ಅ. )

ಓಲಗಿಸುವ ನವ ಗ್ರಹಂಗಳ |
ಸಾಲುಗಳ ಸೌರಂಭಗಳ ದಿ |
ಕ್ಪಾಲಕರ ಸಂದಣಿಯು ಸಡಗರದಖಿಳ ಸಂಭ್ರಮದ ||
ಮೇಲೆ ಮೇಲುಘ್ಘಡಿಪ ಪಾತಕ[೧] |
ರೋಳಿಗಳ ಗಡಬಡೆಯು ಗಡಣದ |
ಮೇಳದಲಿ ಮೆಱೆದಿರ್ದುದಾ ಶಶಿಮೌಳಿಯಾಸ್ಥಾನ || ೨೭ ||

ನೋಡಿದೊಡೆ ಮುಕುಳಿತ ಕರಂಗಳು |
ಮೂಡುವವು ಮಣಿಮುಕುಟದಲಿ ಮಾ |
ತಾಡಿದೊಡೆ ತನತನಗೆ ಜೀಯ ಹಸಾದವೆಂದೆನುತ ||
ಕೂಡೆ ಮಣಿವರು ಮೌಳಿಗಳನಾ |
ರೂಢಿಯಾದ ವೃಷಧ್ವಜನ ಮನ |
ವಾಡಿದಂತಾಡುತ್ತಮಿರ್ದುದು ಸಭೆ ಸಘಾಟ[೨]ದಲಿ || ೨೮ ||

[೩]ಬೆಳಗುಮಣಿ ಭೂಷಣದಿನತಿ ಮೆ |
ಯ್ವೆಳಗು ಭೂಷಣ ಮೆಯ್ವೆಳಗಿನಿಂ |
ಬೆಳಗು ನಖನಯುಂಗಳಾಸ್ಥಾನದ ಮಹೋತ್ತಮರ[೩] ||
ಬೆಳಗು ಬೆಳೆದಾ ಶಿವನ ಮೂರ್ತಿಯು |
ಬೆಳಗಿನೊಳು ಬೆರಸಿದೊಡೆ ಸಭೆಯುದು |
ಬೆಳಗುತಿರ್ದುದು ಶುದ್ಧ ಜ್ಯೋತಿರ್ಲೋಕ[೪]ವೆಂಬಂತೆ || ೨೯ ||

ಇರುತಲೊಂದಾನೊಂದು ದಿನ ವಿ |
ಸ್ತರ ವಿನೋದಂಗಳಲಿ ಸಭೆಯೊಳು |
ಹರಿಕರಿ[೫]ಸಿ ದಂತಚ್ಛವಿಯ ಬೆಳುದಿಂಗಳನು ಸುರಿವ ||
ಕರ ಚೆಲುವ ಬಾಯ್ದುಱೆಯು ಪರಮೇ |
ಶ್ವರಿ ನಿಜಾಂತಃಕರಣಜನಿತ |
ಸ್ಮ[೬]ರಣೆಯನು ಬಿನ್ನೈಸಲುದ್ಯೋಗಿಸಿದಳಭವಂಗೆ * || ೩೦ ||

೧ ಪಡಿಹರ ( ಇ, ಉ, ಒ, ಕ. ) ೨ ಗಾನ ( ಎ, ಕ, ಖ, ಗ. ) ೩–೩ ಜಲಜಭವ ಮೊದಲಾದ ದೇವಾ । ವಳಿಯ ಮಣಿಭೂಷಣದ ಕಾಯದ । ಲಲಿತ ನಖನಯನಂಗಳಾ ಶಿಖಿರವಿ ಸುಧಾಕರರ || ( ಜ. ) ೩ ನ್ನತಿಯ ( ಉ. ) ೪ ಲಿಂಗ ( ಉ, ಜ. ) ೫ ರನರ ( ಅ, ಎ, ಜ. ) ೬ ಸ್ಫು ( ಎ. )
* ಈ ಪದ್ಯವು ( ಗ ) ಪ್ರತಿಯಲ್ಲಿಲ್ಲ.

ಹರನ ವಾಮಾಂಗದಲಿ ಕುಳ್ಳಿ |
ರ್ದಿರುತಲೊಂದಾನೊಂದು ದಿನ ಭೂ |
ಧರವರಾತ್ಮಜೆ ನಿಜ ಮನೋಜನಿತಪ್ರಪಂಚವನು ||
ವರದತನುರುಚಿಚಂದ್ರಿಕೆಯನಾ |
ದರಹಸಿತವದನೇಂದು ಬೀರು |
ತ್ತಿರೆ ಶಿವಗೆ ಬಿನ್ನೈಸಿದಳು ಭಯಭರಿತ ಭಕ್ತಿಯಲಿ || ೨೦ ಅ ||

ಶಿವನೆ ನಿನ್ನೊಡ್ಡೋಲಗದೊಳೊ |
ಪ್ಪುವ ಮಹಾ ಘನ ಮಹಿಮರೆಲ್ಲರು |
ಭವಕೆ ಬಾರದೆ ನಿತ್ಯ ಸುಖದಿಂದಿಪ್ಪರೋ ಮೇಣು ||
ಇವರಿಗೆಯು ನೆಲೆಯಿಲ್ಲವೋ ಪೇ |
ಳವರವಸ್ಥೆಯನೆನುತ ಕೇಳಲು |
ಶಿವೆಗೆ ತಿಳಿವಂದದಲಿ ಬಳಿಕಾ ಶಂಭುವಿಂತೆಂದ || ೨೧ ||

ಗಿರಿಜೆಯಹುದೌ ನಿನ್ನ ಬುದ್ಧಿಯ |
ಪರಿಯದೊಳ್ಳಿಹ ಪ್ರಶ್ನೆಯಾಯಿತು |
ಹರಿ ವಿರಿಂಚಿಗಳಾದಿಯಾದವರಾದೊಡೆಯು ತುದಿಗೆ ||
ವಿರಚಿಸುತ್ತಿಹ ನಾಮ ರೂಪಗ |
ಳೊರೆದ ಸ್ಥಿತ್ಯಿಯೆಯಿದ್ದರಾದೊಡೆ |
ದೊರಕಲಱಿಯದು ನಿತ್ಯ ಸುಖವಗಜಾತೆ ಕೇಳೆಂದ || ೨೨ ||

ಆಗಲಾದೊಡೆ ನಾಮ ರೂಪ |
ಕ್ರೀಗಳನು ಗೆಲಬಲ್ಲ ವಿಮಲೋ |
ದ್ಯೋಗವಾವುದು ಕರುಣಿಸದ ನಾನಱಿಯಬೇಕೆನಲು ||
ನಾಗಭೂಷಣ ದುರಿತಭೀಷಣ |
ರಾಗಶೋಷಣಾ ಭಜಕಪೋಷಣ |
ನಾಗಳಾ ಪಾರ್ವತಿಗೆ ಕರುಣಿಸಿ ಶಂಭುವಿಂತೆಂದ || ೨೩ ||

---

* ಈ ಪದ್ಯವು ( ಗ ) ಪ್ರತಿಯಲ್ಲಿ ಮಾತ್ರ ಇದೆ. ೧ ತ (ಅ, ಎ, ಕ, ಖ, ಗ, ಚ.) ೨ ಯಿಂದ ( ಉ, ಜ. ); ವಿವಿಧ ( ಗ. ) ೩ ಯೋಗಿವರದಾ ( ಇ.)

ಭೋಗಭೂಮಿಯ ಭೋಗತನುವಿನ |
ಲಾಗದನುಪಮ ಸಿದ್ಧಿ ಕರ್ಮೋ |
ದ್ಯೋಗ ಭೂಮಿಯ ಕರ್ಮತನುವಿನಲಲ್ಲದದಱಿಂದೆ ||
ಯೋಗಯೋಗ್ಯರು ಯೋಚಿಸುತ ಭೂ |
ಭಾಗದಲಿ ಮಾನವ ಶರೀರಿಗ |
ಳಾಗಿ ಸಾಧಿಸಿ ನಿಜವನಱಿವರು ಗಿರಿಜೆ ಕೇಳೆಂದ || ೩೪ ||

ಎನೆ ಹಸಾದವದಪ್ಪುದಾದೊಡೆ |
ಮನುಜಲೋಕದೊಳಾವ ಪರಿಯಿಂ |
ದನುಭವಸ್ಥಿತಿಗತಿಯನುಪದೇಶಿಸುವ ಗುರುವಾರು ||
ಎನಗೆ ತಿಳಿವಂದದಲಿ ಪೇಳಿನ |
ಲಿನೆಯುಳಿಗೆ ವಿಸ್ತರಿಸಬೇಕೆಂ |
ದನುಕರಿಸಿದನು ಶಂಭು ತತ್ಪ್ರೋದ್ಯೋಗದಾಯಿಗನ[1] || ೩೫ ||

ಏನ ಹೇಳುವೆನಾದಿಯಲಿ ಸು |
ಜ್ಞಾನ ನಿರಹಂಕಾರರೆಂಬರ |
ನೂನತಪವನು ಮಾಡಲೆನ್ನ ನಿಜಸ್ವರೂಪವರ ||
ಸೂನುವೆಂಬಂದದಲಿ ಸುಳಿದನು |
ತಾನೆಯಲ್ಲಮನೆಂಬ ಪೆಸರೊಳು |
ಮಾನಿನಿಯೆ ಕೇಳಾ ಮಹಾತ್ಮನೊಳಱಿ[2]ವುದಱಿವುಗಳ[2] || ೩೬ ||

ಅಲ್ಲಮಪ್ರಭುವೆನಿಪನಾತನ |
ಬಲ್ಲೆ ನಾನೀಗಱಿದೆ [3]ಬಳಿಕಿ |
ನ್ನ[3]ಲ್ಲಿ ನಿಜ ತತ್ವಸ್ವರೂಪವನಱಿವೊಡೇನರಿದು ||
ಒಳ್ಳಿತಾಯಿತು ತಿಳಿಯಬೇಕೆಂ |
ಬೆಲ್ಲರಿಗೆ ಕರ ಸುಲಭ[4]ವೆನುತಲಿ |
ಭುಲ್ಲವಿಸಿ ಗಿರಿಜಾತೆ ನುಡಿಯಲು ಶಂಭುವಿಂತೆಂದ || ೩೭ ||

೧ ಯತವ ( ಗ. ) ೨-೨ ನಿಜಸ್ಥಿತಿಯ ( ಗ. ) ೩-೩ ನೆನಗಿಂದ ( ಜ. ) ೪ ಕುಶಲ ( ಕ. )

ಖಾತಿಗೊಳ್ಳದಿರಾಡಿ ತೋಱಿದೊ |
ಡೀತ ನಿಷ್ಠುರನೆನ್ನದಿರು ಬಱು |
ಮಾತುಮಾತಿಗೆ ಸಿಕ್ಕನಾರಾರವರ[೧] ಭಕ್ತಿಗಳ ||
ರೀತಿಗಳಲಿಹರವರಿಗವರಾ |
ಪ್ರೀತಿಯಲಿ ರೂಪಾಗಿ ತೋಱುವ |
ನಾತನನುಪಮನಗಜೆ ಕೇಳ್ ಸಾಮಾನ್ಯನಲ್ಲೆಂದ || ೩೮ ||

ಇದು ಯಥಾರ್ಥದ ವಾಕ್ಯವ[೨]ದು ತ |
ಪ್ಪದು ವಿಚಾರಿಸಲುೞಿದವರಿಗಾ |
ದುದು ಮಹಾ ದುಸ್ತರತೆಯೆನ್ನಯ ಚಾರು[೩] ಚತುರ[೪]ತೆಗೆ ||
ಹೃದಯವನು ತೋಱಿಸದೆಯಲ್ಲಮ |
ಹದುಳ ಹೋಹನೆ ಕಾಂಬೆನೆನುತಲಿ |
ಮದಮತಿಯಲಾ ಗಿರಿಜೆ ನುಡಿದೊಡೆ ಶಂಭುವಿಂತೆಂದ || ೩೯ ||

ರಾಣಿಯಹುದೌ ನಿನ್ನ ಬುದ್ಧಿಯ |
ಕಾಣಬಹುದಿನ್ನಾದೊಡೀಪರಿ[೫] |
ಹೂಣಿಕೆಯ ನುಡಿದಿನ್ನು ಹೊಳೆದೊಡೆ[೬] ಸೋಲು ನಿನಗೆನಲು ||
ಮಾಣು ಬಱುಮಾತುಗಳನೆನುತಾ |
ಪ್ರಾಣವಲ್ಲಭಗೆಂದಳಾ ಶ |
ರ್ವಾಣಿಯೆನ್ನಯ ಪೈಜೆ[೭]ಯಿದೆಯ[೮]ಹುದೆಂದಳಧಟಿನಲಿ || ೪೦ ||

ಬಳಿಕಲಂಬಿಕೆ ತನ್ನ ತಾಮಸ |
ಕಳೆಯ ಮೂರುತಿಯಾದ ಮಾಯೆಯ |
ನಿಳಿಯೊಳುದಯಿಸಿಯಲ್ಲಮನ ನೀನಱಿದು ಬಾಯೆನಲು ||
ತಿಳಿವೆನಾತನ ನಿಜವನಥವಾ |
ಸೆಳೆದ[೯]ನಾದೊಡೆ ಮುಟ್ಟಿ ಹಿಡಿಕೊಂ |
ಡೆಳೆದು ತಹೆನಾನೆನುತ ಪೈಜೆಯ ನುಡಿದಳಾ ಮಾಯೆ || ೪೧ ||

೧ ರಾವ ( ಅ, ಕ, ಗ, ಚ. ) ೨ ಮಾತಹು ( ಗ. ) ೩ ಮಾಯೆ ( ಇ. ) ೪ ಚಪಳ ( ಎ. ) ೫ ಪೆನ್ನಲಿ ( ಮು. ) ೬ ಹೋದೊಡೆ ( ಚ, ಜ, ಮು. ) ೭ ವಾಕ್ಯ ( ಇ. ) ೮ ಯಹುದ ( ಗ. ) ೯ ಸೆಳೆದ ( ಜ. ); ಪೊಳೆದ ( ಕ. )

ಇಂತು ನುಡಿದುನ್ಮತ್ತವೃತ್ತಿ[೧] |
ಭ್ರಾಂತಿಯಲಿ ತನ್ನಳವನಱಿಯದೆ |
ಕಂತುಹರನಾಸ್ಥಾನದಲಿ ಬೀಳ್ಕೊಂಡು ಬಿಂಕದಲಿ ||
ಮುಂತೆ ಮಲೆವುತ ನಲಿದು ಭೂಲೋ |
ಕಾಂತರವ ನಿಶ್ಚೈಸಿ ಮಾಯಾ |
ಕಾಂತೆ ಕರಭರವಸದಲೈದಿದ[೨]ಳತಿ ವಿನೋದ[೩]ದಲಿ[೨] || ೪೨ ||

**ಅಂತು ಗತಿ ೨ಕ್ಕಂ ಪದ ೬೩ಕ್ಕಂ ಮಂಗಳಂ**

೧ ರೀತಿಯ ( ಗ. ) ೨-೨ ಳಂಪಳಾತ್ಪಳಕೆ ( ಜ. ) ೩ ವಿಲಾಸ ( ಇ, ಚ. )

# ಮಾಯೆ ಹುಟ್ಟಿದ ಗತಿ

**ವಚನ**

ದೇವರೆಲ್ಲರ ಹೊಡೆತಂದು ದೇವಿಯರೊಳಗೆ ಕೂಡಿತ್ತು ಮಾಯೆ ।
ಹರಹರ ಮಾಯೆ ಇದ್ದೆಡೆಯ ನೋಡಾ ।
ಶಿವಶಿವ ಮಾಯೆ ಇದ್ದೆಡೆಯ ನೋಡಾ ।
ಎರಡೆಂಬತ್ತು ಕೋಟಿ ಪ್ರಮಥಗಣಂಗಳು ಅಂಗಾಲ ಕಣ್ಣವರು ಮೈಯೆಲ್ಲ ಕಣ್ಣವರು
ನಂದಿವಾಹನ ರುದ್ರರು ಇವರೆಲ್ಲರು ಮಾಯೆಯ ಕಾಲುಗಾಹಿನ ಸರಮಾಲೆ ಕಾಣಾ ಗುಹೇಶ್ವರಾ ॥ ೧

ಬ್ರಹ್ಮನ ಘನವೆಂಬೆನೆ ಬ್ರಹ್ಮನ ನುಂಗಿತ್ತು ಮಾಯೆ ।
ವಿಷ್ಣುವ ಘನವೆಂಬೆನೆ ವಿಷ್ಣುವ ನುಂಗಿತ್ತು ಮಾಯೆ ।
ರುದ್ರನ ಘನವೆಂಬೆನೆ ರುದ್ರನ ನುಂಗಿತ್ತು ಮಾಯೆ ।
ತಾ ಘನವೆಂಬೆನೆ ತನ್ನ ನುಂಗಿತ್ತು ಮಾಯೆ ।
ಸರ್ವವು ನಿನ್ನ ಮಾಯೆ ಒಬ್ಬರನೊಳಕೊಂಡಿತ್ತೆ ಹೇಳಾ ಗುಹೇಶ್ವರಾ ॥

**ಸೂಚನೆ**

ಭೂವಳಯುದೊಳು ಜನಿಸಿ ಮಾಯಾ ।
ದೇವಿ ಬಳಿವೃತ್ತಿರ್ದಳೊಪ್ಪುವ ।
ಹಾವಭಾವವಿಲಾಸವಿಭ್ರಮದಿಂದೆ ಮಿಗೆ ಸೊಗಸಿ ॥

ಚಿತ್ತವಿಸುವುದು ಸಕಲ ಶಿವಭ ।
ಕ್ತೋತ್ತಮರು ಮುಂದಣ ಕಥಾಸದ್ ।
ಬಿತ್ತರವನಮರಾದ್ರಿಗೊಪ್ಪುವ ತೆಂಕದಿಕ್ಕಿನಲಿ ॥
ಸತ್ಯದಲಿ ಸದ್ಭಕ್ತಿಯುಲಿ ಸ ।
ದ್ವೃತ್ತಿಯುಲಿ ಸಚ್ಚರಿತದ[೧]ಲಿ ಸಂ ।
ಪತ್ತಿನಲಿ ಸಲೆ ಸೊಗಸಿ ಬೆಳುವಲ ದೇಶ ಮೆಱೆ[೨]ದಿಹುದು ॥ ೧

೧ ಸುಚರಿತ್ರದ ( ಇ. ) ; ಸದ್ಯುಕ್ತಿಯ ( ಜ. ) ೨ ವೆಸೆ ( ಇ. )

ಅದಱೊಳವನೀಕಾಂತೆಗೊಪ್ಪುವ |
ವದನವೋ ಶೃಂಗಾರಸಾರದ |
ಸದನವೊ [1]ಸೊಬಗಿನ ಸುಮಾನದ[1] ಸುಖದ ನೆಲೆವೀಡೋ ||
ಸುದತಿರತ್ನಗಳೊಗೆದ ಚೆಲುವಂ |
ಬುಧಿಯೊ ಪೇಳೆನೆ ಸಕಲ ಸೌರಂ |
ಭದಲಿ ಸೊಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು || ೨ ||

ಆವ ಕಾಲದಲಾದೊಡೆಯು ಫಲ |
ವೀವುತಿಹ ಪಲತೆರದ[2] ನೇಱಲು |
ಮಾವು ದಾಡಿಮ ತೆಂಗು ನಾರಂಗಾದಿ ತರುಲತೆಯು ||
ತೀವಿ ಚರಿಸುವ ಶುಕಪಿಕಭ್ರಮ |
ರಾವಳಿಯ ನಾನಾವಿಧದ ಶೋ |
ಭಾವಹವೆ ತಾನಾದುದಾ ಬನವಸೆಯಲುದ್ಯಾನ || ೩ ||

ಕೇರಿಕೇರಿಯ ತಳಿರಿಡಿದ ಗುಡಿ |
ತೋರಣಂಗಳ ಪರಿಮಳಿಸುತಿಹ |
ಸಾರಣೆಯ ಕಾರಣೆಯ ಗಂಧೋದಕದ ಚಳೆಯುಗಳ ||
ಸೌರಭದ ಪೂವಳಿಗಳಲಿ ಶೃಂ |
ಗಾರಿಸಿದ ಬೀದಿಗಳ ಸೊಬಗಿನ |
ಸಾರದಲಿ ಸಮನಿಸಿದುದತಿ ಸೌರಂಭ ಬನವಸೆಯು || ೪ ||

ವೇದ ಶಾಸ್ತ್ರಾಗಮ ಪುರಾಣವ |
ನೋದುವ ಧ್ವನಿಯಿಂದೆ ಕಳನೊಳು |
ಕಾದಿ ಗೆಲಿದತಿಬಳರ ಕೈವಾರಿಸುವ ಧ್ವನಿಯಿಂದೆ ||
ಬೀದಿಬೀದಿಗಳಲ್ಲಿ ನಿಗಡನಿ |
ರೋಧಮದಗಜತತಿಯ ಬೃಂಹಿತ |
ನಾದದಲಿ ಕಳಕಳತೆವೆತ್ತಿಹು[3]ದಾಗಳಾ ಪುರವು[3] || ೫ ||

---

೧-೧ ಶೃಂಗಾರಸೊಬಗಿನ ( ಜ. ) ೨ ಪನಸೀಳೆ ( ಎ, ಜ. ) ; ಹಲಸುಗಳ ( ಖ. ) ೩-೩ ದಲ್ಲಿ ಬನವಸೆಯು ( ಗ, ಜ. )

ನುಡಿದು[೧] ಜಾಣರು ಸಕಲ ಶಬ್ದವ |
ನಡೆದು[೨] ಜಾಣರು ನಿಖಿಳ ರೀತಿಯ |
ಕುಡಲು[೩] ಜಾಣರು ಕುಂದದಂತಿರಲರ್ಥಿಗರ್ಥವನು ||
ಪೊಡವಿಗಿದು ಪೊಸತೆಂಬ ಜನಪದ |
ವಿಡಿದು ಕಿಕ್ಕಿಱಿಗಿಱಿದ ಬನವಸೆ |
ಗೊಡೆಯನಾಗಿರುತಿರ್ಪನೈ[೪] ಮಮಕಾರ ಭೂಪಾಲ[೫] ||

ಆರು ಬಣ್ಣಿಸಬಲ್ಲರಾ ಮಮ |
ಕಾರನೃಪನ ಮಹಾ ಪ್ರತಾಪವ |
ಶೂರತೆಯ ಸಾಹಸವನಾತನ ಸಕಲ ಗುಣಗಣವ ||
ಧಾರುಣಿಯಲಪ್ರತಿಮನಾಗಿಯು |
ದಾರತೆಯಲಿರುತಿಪ್ಪನಾತಗೆ |
ನಾರಿಯಾಗಿಹಳೊಬ್ಬ ಮಾನಿನಿ ಮೋಹಿನೀದೇವಿ || ೭

ಕುಸುಮಬಾಣನೊ ರತಿಯೊ ಮೇಣಾ |
ಶಶಿಯೊ ರೋಹಿಣಿದೇವಿಯೋ ಮೇ |
ಎಸೆವ ಸುರಪನೊ ಶಚಿಯೊ ಮೇಣ್ಪುರುಷೋತ್ತಮನೊ ಸಿರಿ[೬]ಯೊ ||
ಹೆಸರಿಡಲು ಹವಣಲ್ಲವೆಂಬೊಂ |
ದಸಮ ಸಮ್ಮೇಳದ ಸಗಾಢದ |
ಬೆಸುಗೆಯಲಿ ಮಮಕಾರನೃಪ ಮೋಹಿನಿಯರೆಸೆದಿಹರು[೭] || ೮

ಅವರು ಮಕ್ಕಳ ಬಯಸಿ ಭರದಲಿ |
ವಿವಿಧ ಗೌರೀವ್ರತವು ಮೊದಲಾ |
ದವನು ನಾನಾಶಕ್ತಿದೇವತೆಗಳ ಸಮೂಹವನು ||
ಶಿವಪದಪ್ರಾಂತವನು ಸಾರದೆ |
ಕವಲುವಟ್ಟೆಗಳಲ್ಲಿ ಜಡದೈ |
ವವನು ಮಿಗೆ ಮಮಕಾರನೃಪ ಮೋಹಿನಿಯರರ್ಚಿಪರು || ೯

೧ ವ ( ಇ. ) ೨ ವ ( ಇ. ) ೩ ಡುವ ( ಇ. ) ೪ ನಾ ( ಚ. ) ೫ ಸೆಂಬ ನೃಪ ( ಚ.
೬ ರಮೆ ( ಇ. ) ೭ ರೊಪ್ಪಿದರು ( ಗ. )

ಭಾವಿಸಲು ಮಮಕಾರ ಮೋಹಿನಿ |
ದೇವಿಯರ ಬಸುಱಿನಲಿ ವರ ರಾ |
ಜೀವಲೋಚನೆ ರಚಿತರಂಜನೆ ಸಕಲಸಂಪನ್ನೆ ||
ದೇವ ದಾನವ ಮಾನವರುಗಳ |
ಡಾವಣಿಯು ದನವಾಗಿ[೧] ಕಟ್ಟುವ |
ಭಾವೆ ಮಾಯಾದೇವಿ ಹುಟ್ಟಿ[೨]ದಳಖಿಳ ವಿಭವದಲಿ || ೧೦ ||

ಸೂಳವಿಸಿದುವು ಗಡಣದಲಿ ನಿ |
ಸ್ಸಾಳ ಗಿಡಿಬಿಡಿ ಕೊಂಬು ಚಂಬಕ |
ಡೊಳ್ಳು ಡೌಡೆ ಡಮಾಣ ಜಾಗಟೆ ಮದ್ದಳಾದಿಗಳು ||
ಓಳಿಯಲಿ ಘೀಳಿ[೩]ಟ್ಟು ಚೀಱುವ |
ಕಾಳೆಗಳು ಮೊದಲಾದ ವಾದ್ಯದ |
ಮೇಳ ಮೊಱೆದಿರ್ದುದು ಕುಮಾರಿಯ ಹೆತ್ತ ಹರುಷದಲಿ || ೧೧ ||

ಹಲವು ಕಾಲಕೆ ಹರಸಿ ಹೆತ್ತರು |
ಲಲಿತಗಾತ್ರೆಯ ವಿಮಳನೇತ್ರೆಯ |
ವಿಳಸಿತವ್ಯಾಮೋಹ ನವರಸಭರಿತಪಾತ್ರೆಯನು ||
ಬಳಿಕ ಬುಧರಿಗೆ ಸಕಲರಿಗೆ ಪೊಂ |
ಗಳನು ಭೂಷಣ[೪]ವಸ್ತ್ರರತ್ನವ |
ನೊಲಿದು ದಾನವ ಮಾಡಿದನು ಮಮಕಾರಭೂಪಾಲ || ೧೨ ||

ಇತ್ತಲಿಂತೀ ಮಾಯೆ ಹುಟ್ಟಿದ |
ಡತ್ತ[೫]ಲಖಿಳಬುಧವ್ರಜಂ[೫]ಗಳ |
ಚಿತ್ತಗಳು ಪಲ್ಲಟಿಸಿಯಾಶಾಪಾಶ[೬]ವೆಗ್ಗಳಿಸಿ ||
ಮುತ್ತು ನೆರೆತಿಹ ಜೀವಜಾಳರಿ |
ಗೆತ್ತಿ[೭] ಕಾಮಗ್ರಹವಿಕಾರತೆ |
ಮುತ್ತಿ ಮುರುಟಿಸುತಿರ್ದುದೇನೆಂದೆಂಬೆನಚ್ಚರಿಯ || ೧೩ ||

೧ ಮಾಡಿ ( ಇ, ಮು. ) ೨ ಜನಿಸಿ ( ಮು. ) ೩ ಘುಗಿಲಿ ( ಗ. ) ೪ ಭೂಗೋ ( ಜ. )
೫-೫ ಲಾಬುಧವ್ರತಜನಂ ( ಇ. ) ೬ ವೇಶ ( ಅ, ಇ. ); ರೋಷಾವೇಶ ( ಗ. ) ೭ ತ್ತ ( ಮು. )

ಊರ ತೊಱೆದಡವಿಯೊಳು ಗಂಗಾ |
ತೀರದೊಳು ಗಿರಿಗಹ್ವರಂಗಳ |
ಘೋರತರಗುಹೆಗಳೊಳು ಜಲಪಂಚಾಗ್ನಿಮಧ್ಯದೊಳು ||
ಧೀರಮುನಿಗಳು ದಿಟ್ಟ ಸಿದ್ಧರು |
ದಾರ ಯೋಗೀಶ್ವರರು ಭಯದಲಿ |
ಭೋರನೆದೆಗುಂದಿದರು ಮಾಯೆಯ ಜನನಕಾಲದಲಿ || ೧೪

ಬೆತ್ತ ಬಿದಿರಿಡಿದಿರ್ದ[1] ತರುಲತೆ |
ಹುತ್ತ ಬೆಳೆದ[2] ಸಮಾಧಿವಂತರು |
ಚಿತ್ತ ಸಂಚಲವಾಗಿ[3] ನೆನಹಿನ ನೇಮ ನೆಲೆಗೆಡಲು ||
ಎತ್ತಲಿಂದೀ ಮಾಯೆ ಹುಟ್ಟಿತೆ |
ನುತ್ತ ಚಿಂತಾಕ್ರಾಂತರಾಗಿರೆ |
ಸತ್ಯನಿಧಿ ದೂರ್ವಾಸನಾ ಪ್ರಸ್ತಾವದಲಿ ಸುಳಿದ || ೧೫

ವಿನಯ ಮಿಗೆ ಬಳಿಕರ್ಘ್ಯಪಾದ್ಯಾ |
ಸನಗಳಿಂ ಸತ್ಕರಿಸಿ ಮುದದಲಿ |
ತನತನಗೆ ಸಾಧಕರು ಸಿದ್ಧರು ವರ ತಪೋಧನರು ||
ಇನಿತು ಕಾಲದೊಳಿಲ್ಲದೀಗಲು |
ಮನಸು ಸಂ[4]ಚಲವಾದುವೆಮಗೆಂ[5] |
ದೆನುತ ಪೇ[6]ಳಿದರವರುಗಳು ದೂರ್ವಾಸಮುನಿಪತಿಗೆ || ೧೬

ಹೂಣಿಸಿಯೆ[7] ಹುರಿಗೊಂಡು ನೆಱೆ ಗೀ |
ರ್ವಾಣರೆಲ್ಲರ ಮುಂದೆ ಮಿಗೆ ರು |
ದ್ರಾಣಿ ತನ್ನಯ ತಾಮಸಾಂಗದ ಮಾಯೆಯನು ಕಳುಹೆ ||
ಮಾಣದಿಳೆಯೊಳು ಜನಿಸಿ ಬಂದಳು |
ಕಾಣಿರೇ ಬಳಿಕಲಿ ಸಮಾಧಿ |
ಪ್ರಾಣಿಗಳಿಗೆಲ್ಲಿಯದು ತರಹರವೆಂದನಾ ಮುನಿಪ || ೧೭

೧ ಬೆಳೆದವನಿಯಲಿ ( ಗ. ) ೨ ವೇಳ್ದ ( ಅ, ಮು. ) ೩ ಚಿತ್ತಗಳು ಸಂಚಲಿಸೆ ( ಇ
೪ ಚಂ ( ಅ. ) ೫ ಗಿಂ ( ಮು. ) ೬ ಕೇ ( ಅ, ಜ. ) ೭ ಕೆಯ ( ಮು. )

ಅಲ್ಲದಿರ್ದೊಡೆ ನಮಗಿದೆತ್ತಣ[1] |
ತಲ್ಲಣವು ಬರಲೇನು ಕಾರಣ |
ವಿಲ್ಲ[2] ನಿಮ್ಮ ನಿರೂಪವಿದು ದಿಟವೆನುತ ಮುನಿನಿಕರ ||
ಒಳ್ಳಿತಾಯಿತು ನೀವು ಕೃಪೆಯಿಂ |
ದಿಲ್ಲಿಗೈತಂದುದು ನಿಮಿತ್ತದ |
ಲೆಲ್ಲ ಸಂಶಯುವಳಿದುದೆಂದರು ಮುನಿಗಳಾತಂಗೆ || ೧೮ ||

ಮತ್ತೆ ಮಾಣದೆ ಕೇಳಿದರು ಮುನಿ |
ಪೋತ್ತಮರು ದೂರ್ವಾಸ ಮುನಿಯನು |
ಚಿತ್ತವಿಸು ತನ್ಮಾಯೆ ಜನಿಸಿದಳೇನು ಕಾರಣವು ||
ಎತ್ತಣದು ಸಾಂಗತ್ಯ ನಮಗೀ |
ಬಿತ್ತರವನರುಪೆಂದೊಡವರಿಗೆ |
ತಥ್ಯವನು ವರ ಮುನಿಗಳಿಗೆ ದೂರ್ವಾಸನಿಂತೆಂದ || ೧೯ ||

ಮಾತು ಮಾತಿನೊಳೋಲಗದೊಳಗ |
ಜಾತೆ ಶಿವನೊಳು ಗೋಷ್ಠಿ ಮಾಡುತ |
ಲಾತನನು ನಿಜರೂಪ ಕೇಳಿದೊಡಲ್ಲಮಪ್ರಭುವ ||
ಭೂತಳದೊಳರಿದಲ್ಲ ತಿಳಿಯೆನೆ |
ಭೂತನಾಥನು ಬಳಿಕ ಪಾರ್ವತಿ |
ಪ್ರೀತಿಯಿಂದಟ್ಟಿದಳು ನಿಜ ತಾಮಸದ ಮಾಯೆಯನು || ೨೦ ||

ಇದುವೆ ಕಾರಣ ಮಾಯೆ ತಾ ಪು |
ಟ್ಟಿದಳು ಬಳಿಕಿನ್ನಾರಿಗಾದೊಡೆ[3] |
ವಿದಿತವಾಗಿಹುದಲ್ಲಮಪ್ರಭುಲಿಂಗ ಸಂಗವನು ||
ಹೃದಯದೊಳು ಹುರಿಗೊಳಿಸುವೊಡೆ ಬಳಿ |
ಕದರ ಮಹಿಮೆಯನೇನ ಹೇಳುವೆ |
ಸದಮಳಸ್ವಾತಂತ್ರ್ಯನಿಜವಹರೆಂದನಾ ಮುನಿಪ || ೨೧ ||

---

೧ ಲ್ಲಿಯ ( ಇ. ) ೨ ಲ್ಲಿ ( ಉ, ಎ, ಖ. ) ೩ ಗೆಯು ನಿಜ ( ಇ. )

ಎಂದು ಪೇಳ್ದೆಲ್ಲರಿಗೆ ಮನದ ತ |
ಮಂಧವನು ಪರಿಹರಿಸಿ ಬಳಿಕಾ |
ನಂದದಲಿ ದೂರ್ವಾಸಮುನಿ ಹೋದನು ನಿಜಾಶ್ರಮಕೆ ||
ಅಂದು ಮೊದಲಾಗಱವರು ಮನ |
ಬಂದ ಪರಿಯಲಿ ಭಕ್ತಿಯುಕ್ತಿಗ |
ಳಿಂದ ಸಾಧಿಸುತಿರ್ದರೆಮ್ಮಯ ಗುರು ಗುಹೇಶ್ವರನ || ೨೨ ||

ಮತ್ತೆ ಮನದಲಿ ತಮ್ಮತಮ್ಮಯ |
ಚಿತ್ತದೊಳಗಲ್ಲಮನ ನೆನೆವುತ |
ಸುತ್ತಿ ಸುಳಿಯದೆ ಮುನ್ನಿನಂತಿರ್ದರು ತಪೋಧನರು ||
ಇತ್ತಲೀ ಮಮಕಾರನೆಂಬ ನೃ |
ಪೋತ್ತಮನ ಸುಕುಮಾರಿ ಮಿಗೆ ಬಳೆ |
ವುತ್ತಲಿರ್ದಳು ಗಳಿಗೆ ಸಂಖ್ಯೆಗೆ ಸಕಲ ಸುಖದಿಂದೆ || ೨೩ ||

ಸಿಸುವ ನೋಡಿದ ಕಣ್ಗೆ ಮಾಯವೆ |
ಮುಸುಕುವುದು ಮನ ಮುಚ್ಚುವುದು ಮೋ |
ಹಿಸುವುದೀ ಪರಿ ಜನನಿಜನಕಾದ್ಯರುಗಳೆಲ್ಲರಿಗೆ ||
ವಸುಮತೀಪತಿ ಬಳಿಕಲತಿಸಂ |
ತಸದಲಾತ್ಮಜೆಗಖಿಲ ವಿಭವದಿ |
ಹೆಸರನಿಟ್ಟನು ಮಾಯೆಯೆಂಬ ನವೀನ ನಾಮವನು || ೨೪ ||

ಉಲಿವ ಗೆಜ್ಜೆಯ ಕಾಲ ಕಡಗದ |
ಘುಲಘುಲಿಸುವಂದುಗೆಯ ರತುನದ |
ಲುಳಿಂಪ ಕಟಿಸೂತ್ರದ ಝುಣತ್ಕಾರಿಸುವ ಕಂಕಣದ ||
ಹುಲಿಯುಗುರ ಬಂದಿಯ ಸು[೧]ಢಾಳದ |
ಲೊಲೆವ ಮಾಗಾಯಿಗಳ ಪೊಳೆವರ |
ಳೆಲೆಯ ಮಿಸುಗುವ ಬಾಲದೊಡಿಗೆಯ ಮಾಯೆಗಿಕ್ಕಿದರು || ೨೫ ||

೧ ಚ ( ಇ, ಮು. )

ಹೆಚ್ಚು ನೀರೆಱೆದಿಟ್ಟು ತೊಟ್ಟಿಲೊ |
ಳೊಚ್ಚೈಱಗ ದುಗುಲದಲಿ ಹೊಕ್ಕುಳ |
ಮುಚ್ಚಿ ಸೊಡರಕ್ಕಿನಲಿ ಬೊಟ್ಟಿಟ್ಟೊಲವಿನಲಿ ಹರಸಿ ||
ನಿಚ್ಚದಲಿ[೧] ತೂಪಿಱಿದು ತೂಗುವ |
ನಚ್ಚುಮಚ್ಚಿನ ದಾದಿಗಾಗಳು[೨] |
ಮೆಚ್ಚನೀವುತ ಹೆಚ್ಚುತಿರ್ದಳು ಮೋಹಿನೀದೇವಿ || ೨೬ ||

ಹಲಗೆ[೩]ಮಾಣಿಕದೊಟ್ಟಿಲಲಿ ಮ |
ಗ್ಗುಲಿಸಿ ಮಲಗಿ ನಿರೀಕ್ಷಿಸುತೆ ಮಾ |
ರ್ಪೊಳೆವ ತನ್ನನೆ ಕಂಡು ನಲಿವುತ ನಗುತ ಕೈದುಡುಕಿ ||
ಸೆಳೆದು ತೆಗೆದರೆ ಬಾರದಿರಲಾ |
ನೆಳಲನೊದೆವು[೪]ತ ಕಾಲ ಗೆಜ್ಜೆಗ |
ಳುಲುಹನಾಲಿಪ ಮಾಯೆ ಮೆಱೆದಳು ಬಾಲಲೀಲೆಯಲಿ || ೨೭ ||

ಹೊಡಮರ[೫]ಳ ಕಲಿತರೆ ವಿರಕ್ತರ |
ದೃಢತೆ ಹೊಡೆಗೆಡೆಯಿತ್ತು ದಟ್ಟಡಿ |
ಯಿಡಲು ಕೆಟ್ಟುವು ಶೌಚ ಬಾಲಬ್ರಹ್ಮಚಾರಿಗಳ ||
ನುಡಿಗಲಿಯೆ ಮೌನಿ[೬]ಗಳ ಬಾಯ್ಗಳ |
ಲಿಡಿದ ಮುದ್ರೆಗಳೊಡೆದುವೆಂದೆನೆ |
ನುಡಿವೆ ನಾನಿನ್ನೇನ ಮಾಯೆಯ ಬೆಳವಿಗೆಯ ಬಲುಹ[೭] || ೨೮ ||

ಆಡಿಸುವ ಕೆಳ[೮]ದಿಯರ ಸಂಜ್ಞೆಯ |
ಲಾಡಿ ಪರಿದಪ್ಪಪ್ಪೆ[೯]ನುತ್ತಲಿ |
ಕೂಡಿ ನಡೆತಂದಪ್ಪಿ[೧೦] ಮೇಲುದ ಸೆಱಗಿನೊಳಗಡಗಿ ||
ನೋಡುತಲಿ ದಾ[೧೧] ಎನುತ [೧೨]ಚ್ಚೈ ಮುಂ |
ಡಾಡಿ[೧೩] ಮುಂದಲೆವಿಡಿದು ಕುಣಿಕುಣಿ |
ದಾಡಿ ಸೌಖ್ಯವನೀಯುತಿರ್ದಳು ಮಾಯೆ ಮೋಹಿನಿಗೆ || ೨೯ ||

---

೧ ಮಿಗೆ ( ಚ. ) ೨ ಯರ ಮನ ( ಉ. ) ; ಯರ್ಗಂ ( ಎ. ) ; ಯರಿಗೆಯು ( ಗ. ) ೩ ಹೊಳೆವ ( ಗ. ) ೪ ನೋಡು ( ಅ. ) ೫ ಗು ( ಅ. ) ೬ ಯೋಗಿ ( ಅ. ) ೭ ಪರಿಯ ( ಇ. ) ; ಹದನ ( ಕ. ) ; ಹವಣ ( ಮು. ) ೮ ದಾ ( ಇ. ) ೯ ಬ್ಬಬ್ಬೆ ( ಜ. ) ೧೦ ಓಡಿ ಬಂದಮರ್ದಪ್ಪಿ ( ಅ. ) ೧೧ ಬಾ ( ಅ. ) ೧೨-೧೩ ಕೈಮುದ್ದಾಡಿ ( ಅ. )

ಒಮ್ಮೆ ಮಮಕಾರವನಿಪನನೊ |
ಮ್ಮೆಮ್ಮೆ ಮೋಹಿನಿದೇವಿಯನು ಮ |
ತ್ತೊಮ್ಮೆ ತನ್ನುವನಾಡಿಸುವ ತರುಣಿ[1]ಯರ ತಂಡವನು ||
ಹೆಮ್ಮೆಗೊಳಿಸುತ ಸುಖಮುಖವ ಹೊಱ |
ಹೊಮ್ಮಿಸುತ ನೆಱೆ[2] ಬಾಲಲೀಲೆಯ |
ಸೊಮ್ಮು[3] ಸೂಱೆ[3]ಯು ಕೊಡುತಲಿರ್ದಳು ಮಾಯೆ[4] ಮಹಿಯೊಳಗೆ || ೩೦ ||

ಬೀಱುತಿರ್ದಳು ಮುದ್ದುತನವನು[5] |
ಹೋಱುತಿರ್ದಳು ಸಕಲ[6] ಚೆಲುವನು[7] |
ತೋಱುತಿರ್ದಳು ಜಗದ ಜಂಗುಳಿಗಾಡುವೊಲನಾಗಿ[8] ||
ಸಾಱುತಿರ್ದಳು ಸಕಲ ಸೊಬಗನು |
ಮೀಱುತಿರ್ದಳು ದಿನದಿನಕೆ ಕಳೆ |
ಯೇಱುತಿರ್ದಳು ಮಾಯೆ ವಿವಿಧವಿಲಾಸವೃತ್ತಿಯಲಿ || ೩೧ ||

ಹಿಡಿ[9]ಹಿಡಿದುಕೊಂಡ[9]ತಿಜಯಲಿ ಬೆಂ |
ಬಿಡದೆ ಶಿಕ್ಷಾಚಾರ್ಯತನದಲಿ |
ಜಡಿದು ಜಂಕಿಸಿ ಮುದ್ದುತನ ಮಿಗೆ[10] ಮಾಯೆ ತನ್ನಂತೆ ||
ನಡೆಯ ಕಲಿಸಿದಳಂಚೆವಿಂಡಿಗೆ |
ನುಡಿಯ ಕಲಿಸಿದಳರಗಿಳಿಗೆ ಸರ |
ವಿಡಲು ಕಲಿಸಿದಳಾಕೆ[11] ತನ್ನರಮನೆಯ ಕೋಗಿಲೆಗೆ || ೩೨ ||

ಮನದ ಮಾತಿನ ರೀತಿಗಳು ಕ |
ಣ್ಣಿನಲಿ ಕೈಗಳ ಸಂಜ್ಞೆಗಳು ಹು |
ಬ್ಬಿನಲಿ ಸೊಬಗಿನ ಸೌಮ್ಯತೆಯು ಸಂಗ್ರಹವು ಮೊಲೆಗಳಲಿ ||
ಅನುಕರಿಸಿ ಮೊನೆದೋಱುತಿರ್ದುವು |
ದಿನದಿನಕೆ ಹೆಚ್ಚುತಲಿ ಮಾಯಾ |
ವನಿತೆಗಂಕುರಿಸಿತ್ತು ಜವ್ವನ ಜಗವ ಝೋಂಪಿಸುತ || ೩೩ ||

೧ ಕೆಳದಿ ( ಎ. ) ೨ ಯೊ | ಳೊಮ್ಮೆ ( ಜ. ) ೩ ಮಾಯಾದೇವಿ ( ಮು. ) ೪ ಮೋಹಿನಿ ( ಇ, ಜ, ಮು. ) ೫ ದಿನದಿನಕೆ ತನು ( ಇ. ) ೬ ನಿಖಿಳ ( ಇ, ಜ. ) ೭ ಕಳೆಗಳ ( ಇ. ) ೮ ವೋಜೆಯಲಿ ( ಒ. ) ; ವಂದದಲಿ ( ಗ. ) ೯-೯ ದುಯಿಳೆತಂದ ( ಇ. ) ೧೦ ದಲಿ ( ಅ. ) ೧೧ ಗ(ಅ.)

ಆ ನಟಣೆಯಾ ರೀತಿ[೧]ಯಾ ನಿಲ[೧] |
ವಾ ನಡೆವ ಗತಿ ಗಮಕವಾ ತೊಡೆ |
ಯಾ ನಿತಂಬಗಳಾ ನಡುವಿನಸಿದಾ ಮೊಲೆಯ ಚೆಲುವು ||
ಆ ನಯ[೨]ದ ತೋಳಾ ಮುಖಾಂಬುಜ |
ವಾ ನಯನ[೨]ವಾ ನೋಟವಾ ತುರು |
ಬಾ ನವೀನತೆಯುಡಿಗೆಯೋಂ ನೆಲಸಿದವೊ ಮಾಯೆಯಲಿ || ೩೪ ||

ಮಾಡಿಸಿದನು ಕುಮಾರಿತಿಗೆ ಮಣಿ |
ಮಾಡ ನಾನಾಪರಿಯ ಮಂಟಪ |
ಖೇಡಕುಳಿಯು[೩]ಪವನಗಳೋ[೩]ಲಗಶಾಲೆ ಮೊದಲಾದ ||
ರೂಢಿ[೪]ಸಿದ ವಿನಿಯೋಗ[೪] ಕೇಳಿಗೆ[೫] |
ಜೋಡಿಸಿದ ಮನೆ[೬]ಗಳನು ಕನ್ನೆಗೆ |
ಮಾಡವೊಂದನು ರಚನೆಯಲಿ ಮಮಕಾರಭೂಪಾಲ || ೩೫ ||

ಆಕೆ ಕನ್ಯಾಮಾಡದೊಳು ನಾ |
ನಾಕುಶಲಶಾಸ್ತ್ರವನು ವಿದ್ಯಾ |
[೭]ನೀಕವನು ಪರಿಚರಿಸಿ[೮] ಪರಿಣತೆಯಾಗಿ[೭] ಸುಖ[೯]ದಿಂದೆ ||
ಆ ಕುಮಾರಿತಿಯಿರುತಿರಲು ಬಳಿ |
ಕಾ ಕಳಾನಿಧಿ ನೃಪತಿ ಮಾಯೆಗೆ |
ಬೇಕೆನುತಲಾಳಾಪಿ[೧೦]ಸಿದ ಮದುವೆಯನು ಮನದೊಳಗೆ || ೩೬ ||

ಲಾಳ ಗುಜ್ಜರ ಬೋಟ ಕರಹಟ |
ಚೋಳ ಪಾಂಡ್ಯ ಕಳಿಂಗ ಚೀನ ಕ |
ರಾಳ ಕೊಂಕಣ ಮಲಹ ಮಗಧ ಮರಾಟ ನೇಪಾಳ ||
ಮಾಳವರು ಮೊದಲಾದ ಭೂಮೀ |
ಪಾಲರೊಳುಯೆನ್ನಯ ಕುಮಾರಿಯ |
ತೋಳದೊಡವಿನ್ನಾರೆನುತ ಚಿಂತಿಸಿದನವನೀಶ || ೩೭ ||

೧-೧ ಮೋಹನ (ಇ.) ೨-೨ ನವಾ ತೋಳ್ ಮುಖಾಂಬುಜ । ವಾ ನಗೆಯು (ಇ.) ೩-೩ ಪ್ಪರಿಗೆಯೋ (ಇ.) ೪-೪ ವಿಡಿದುವನಂಗ (ಒ, ಕ, ಗ, ಜ.) ೫ ದಂಗಕೆ (ಅ.) ೬ ನೆಲೆ (ಗ.) ೭-೭ ನೇಕ ರಸವನು ಪರಿಚರಿಸಿ ಪರಿಣಾಮ (ಗ.) ೮ ನೇಕಗಳನುಪಚರಿಸಿ (ಇ.) ೯ ಮುದ (ಅ, ಒ.) ೧೦ ಳೋಚಿ (ಅ, ಎ.)

ಇರುತಿರಲು ಮಮಕಾರಭೂಮೀ |
ಶ್ವರನ ವಿಮಲಾನ್ವಯಕೆ ನೆಟ್ಟನೆ |
ಗುರುವೆನಿಪಹಂಕಾರನೆಂಬಾಚಾರ್ಯನೈತಂದು ||
ಅರಸ ಮಾಡುವ ವಂದನೆಯನಾ |
ದ[1]ರಣೆಯನು ಕೈಕೊಳುತ ಕೇಳಿದ |
ಕರುಣದಿಂದಲಿ ಭೂಮಿಪನ ಸುಕ್ಷೇಮ ಕುಶಲವನು || ೩೮ ||

ಕೇಳಿ ಹರುಷಿತನಾದನಾ ಭೂ |
ಪಾಲಕನ ಸುಕ್ಷೇಮ ಕುಶಲವ |
ನಾಲಿಸುತಲವನಿಪನ ಕೆಲದ ಕುಮಾರಿಯನು ಕಂಡು ||
ಆ ಲತಾಂಗಿಯ ರೂಪು ರೇಖಾ |
ಜಾಲವನು ಚೆನ್ನಾಗಿ ತಿಳಿದು ಕೃ |
ಪಾಳು ನಿಶ್ಚೈಸಿದನು ಕಾರಣಕನ್ನೆಯಿವಳೆಂದು || ೩೯ ||

ಇನಿತು[2] ನೆಯ್ದಿಲುಗಣ್ಣ ಕೋಕ[3] |
ಸ್ತನದ ತೊಳಪ ಮೃಣಾಳನಾಳದ |
ತನುಲತೆಯ ಮಿಸು[4]ಗುವ ತರಂಗದ ನಿಱಿಯ ನಿಱಿಗೆಗಳ ||
ಇನಿತು ಚೆಲುವಿನಲಿಪ್ಪ ಮಾಯಾಂ |
ಗನೆಯ ಲಾವಣ್ಯಾಂಬುಸರಸಿಯ |
ಲನುಚರಿಸುವಂತಪ್ಪ ಹಂಸನ ಕೇಳ್ದನಾಚಾರ್ಯ || ೪೦ ||

ಕೇಳಲಾಚಾರ್ಯಂಗೆ ಧರಣೀ |
ಪಾಲ ಬಿನ್ನೈಸಿದನು ನೀವೇ |
ಹೇಳಬೇಹುದು ದೇವ ವರನಾರೀ ಕುಮಾರಿತಿಗೆ ||
ಲಾಲಿಸುವುದಮರೇಂ[5]ದ್ರಸುರನರ |
ಜಾಳದೊಳು ಸಾದೃಶ್ಯಸದ್ಗುಣ |
ಶೀಲರಾರೆನಲರಸಗೊಲಿದಾಚಾರ್ಯನಿಂತೆಂದ || ೪೧ ||

೧ ನನು|ಸ ( ಜ. ) ೨ ವಿನುತ ( ಅ, ಇ, ಉ, ಜ, ಮ. ) ೩ ತೋರ ( ಒ, ಕ, ಗ. ) ೪ ನು ( ಮ. ) ೫ ದುರಗೇಂ ( ಇ. )

ಫಲಿತ ಚೂತದ ಮರನ ಸಿರಿ ಕೋ |
ಗಿಲೆಗೆ ನೆಟ್ಟನೆ ಹಾಲು ಹಂಸೆಗೆ |
ಲಲಿತ ಕುಸುಮದ ಕಂಪು ತುಂಬಿಗೆ ಸವಿಯನೀವಂತೆ ||
ಉಳಿದ ಖಗ[೧] ಕಡುದುಃಖಿಗಳಿಗೆ ಸುಖ |
ವಳವಡುವುದೆ ಸದಾಶಿವಂಗಿ[೨] |
ಲಲನೆಯಲ್ಲದೆ ನರರಿಗುಚಿತವೆ ಭೂಪ ಕೇಳೆಂದ || ೪೨ ||

ಶಿವನೆ ಪತಿಯಹನೆಂದು ನೀವ್ ಚಿ |
ತ್ತವಿಸಿದಿರಿಯಾ ಶಿವನು ದಿಟ ಮಾ |
ನವಶರೀರಿಗಳಿಗೆ ಸುಸಾಧ್ಯನೆ ದೇವ ಪೇಳೆನಲು ||
ಶಿವನು ಶಿವಭಕ್ತಿಯನು ಮಿಗೆ[೪] ಮಾ |
ಡುವರಿಗವರವರಿಚ್ಛೆಯನು ಸಲಿ |
ಸುವನು ಸತ್ಯವಿದೆಂದ[೩]ನೊಲಿದಾಚಾರ್ಯನರಸಿಂಗೆ[೩] || ೪೩ ||

ಎನುತ ಸಂಭ್ರಮದಿಂದೆ ಮಾಯಾಂ |
ಗನೆಗೆಯುಪದೇಶವ[೫]ನು ಮಾಡಿ[೫]ದೊ |
ಡ[೬]ನುಕರಿಸಿ ಮಾಡುತ್ತಲಿರ್ದಳು ಭಕ್ತಿಯನು ಬಳಿಕ ||
ಜನಪತಿಯೆ[೭] ಸುಖದಿಂಪಲಿ[೭]ರಿಯೆಂ |
ದೆನುತಹಂಕಾರಾರ್ಯ[೮] ಬೀ[೯]ಳ್ಕೊ |
ಟ್ಟನುಗತಿಯ[೯]ಲೈದಿದನು ತನ್ನಯ ನಿಜನಿವಾಸವನು[೧೦] || ೪೪ ||

ಧರಣಿಪಾಲಕನಿತ್ತ ಸುಖದಿಂ |
ದಿರುತಲಿರ್ದನು ಈ ಕುಮಾರಿತಿ |
ಹರುಷದಿಂದಲಿ ನಿತ್ಯ ನೇಮವ ಹಿಡಿದು ಛಲದಿಂದೆ ||
ಪುರಕೆ ಘಟಿಕಾಸ್ಥಾನವೆನಿಸುವ |
ಪರಮ ಸಿದ್ಧಿಯನೀವ ಮಧುಕೇ |
ಶ್ವರನ ಪೂಜಿಸುತಿರ್ದಳಿನಿಯನ ಬಯಸಿ ಭಕ್ತಿಯಲಿ || ೪೫ ||

---

೧ ಬಕ ( ಕ, ಜ. ) ೨ ಸಲೆ ( ಎ. ) ೩-೩ ನಾಚಾರ್ಯನು ನೃಪಾಲಂಗೆ ( ಚ. ) ೪ ಶಿವದೀಕ್ಷೆಯ ( ಚ, ಮು. ) ೫-೫ ಸ|ಲ ( ಜ. ) ೬ ನೀ ( ಗ. ) ೭-೭ ಹುದೆಂ|ದೆನುತಾಲಾಹಂಕಾರ ಬೀಳ್ಕೊಂ|ಡನು ನೃಪತಿಯೈ ( ಇ. ) ೮ ಲಾಹಂಕಾರ ( ಗ, ಜ. ) ೯-೯ ಳ್ಕೊಂ|ಡನು ನಯದ ( ಗ. ) ೧೦ ಕ್ಕೆ ( ಅ, ಖ, ಚ, ಜ. )

ಅಷ್ಟ[1]ವಿಧದರ್ಚನೆಗಳಿಂ[1]ದುಭ |
ಯಾಷ್ಟವಿಧದುಪಚಾರದಿಂದಲ |
ಭೀಷ್ಟವೆನಿಸುವ ನಿಜ ಮನೋವಲ್ಲಭನ ಬಯಕೆಯಲಿ ||
ಶ್ರೇಷ್ಠವೆನಿಸುವ ಮಧುಕನಾಥನ[2] |
ತುಷ್ಟಿವಡುವಂತರ್ಚಿಸಿದಳೀ |
ಸೃಷ್ಟಿಯೊಳು ಸಾಂಗದಲಿ ಮಾಯಾದೇವಿ ಮನವೊಲಿದು || ೪೬ ||

ಅಂತು ಗತಿ ೩ಕ್ಕಂ ಪದ ೧೦೯ಕ್ಕಂ ಮಂಗಳಂ

---

೧-೧ ಮಹದೈಶ್ವರ್ಯದಿಂ ( ಗ. ) ೨ ಸು ( ಕ. )



ಬನವಾಸಿಯ ಮಧುಕೇಶ್ವರ ದೇವಾಲಯ

# ಮಾಯೆ ಮಧುಕನಾಥನ ಪೂಜಿಸಿದ ಗತಿ

**ವಚನ**

ಹೊತ್ತಾರೆ ಎದ್ದು ಅಗ್ಗವಣಿಯ ಪತ್ರಿಯ ತಂದು ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ |
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು |
ಹೊತ್ತು ಹೋಗದ ಮುನ್ನ ಮೃತ್ಯು ಒಯ್ಯದ ಮುನ್ನ ತೊತ್ತುಗೆಲಸವ ಮಾಡು
ಕೂಡಲಸಂಗಮದೇವನ || ೧ ||

ಅಚ್ಚುಗವೇಕಯ್ಯ ಸಂಸಾರದೊಳಗೆ |
ನಿಚ್ಚ ನಿಚ್ಚ ಶಿವರಾತ್ರಿಯ ಮಾಡುವುದು ಬೇಗ ಬೇಗ ಅರ್ಚನೆ ಪೂಜೆಯ ಮಾಡುವುದು
ಕೂಡಲಸಂಗನ ಕೂಡುವುದು || ೨ ||

ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವುದು ಮಾಡಿದ ಪೂಜೆಯ ನೋಡುವುದಯ್ಯಾ |
ಶಿವತತ್ವಗೀತವ ಪಾಡುವುದು ಶಿವನ ಮುಂದೆ ನಲಿದಾಡುವುದಯ್ಯಾ |
ಭಕ್ತಿಸಂಭಾಷಣೆಯ ಮಾಡುವುದು ನಮ್ಮ ಸಂಗಯ್ಯನ ಕೂಡುವುದು || ೩ ||

**ಸೂಚನೆ**

ಮಾಯೆ ಮನದೊಳು ತನಗೆ ಪ್ರಾಣ |
ಪ್ರಿಯನನು ಮಿಗೆ ಬಯಸಿ ಭಜಿಸಿದ |
ಆಯತಿಕೆಯಲಿ ಮಧುಕನಾಥನ ಪಾದಪಂಕಜವ ||

ಧರಣಿಯೊಳು ಮಮಕಾರಭೂಮಿಾ |
ಶ್ವರತನೂಭವೆ[೧] ನಿಚ್ಚನಿಚ್ಚಲು |
ವಿರಚಿಸುವ ತೆಱನಂತಿರೊಂದಾನೊಂದು ದಿವಸದಲಿ ||
ಹರುಷದಿಂದಾ ಮಾಯೆ ತಾನಾ |
ದರಿಸಿ ಮಾಡಿದ ನಿತ್ಯಪೂಜೆಯ |
ಪರಿಯ ಪೇಳುವೆನೆಲ್ಲರಱಿವಂದದಲಿ ವಿಸ್ತರಿಸಿ || ೧ ||

---

೧ ನ ತನಯಳು ( ಇ. )

ಮಿಸುಗುವರುಣೋದಯದಲುಪ್ಪವ |
ಡಿಸುತ ನಿಜ ಕರತಳವನಾಲೋ |
ಕಿಸುತ ನಿರ್ಮಳತರದ ಮಣಿದರ್ಪಣವನೀಕ್ಷಿಸುತ ||
ಶಶಿಮುಖಿಯರೊಗ್ಗಾಗಿ ಮಿಗೆ ರಾ |
ಗಿಸುವ ಮಂಗಳಗೀತಗಳನಾ |
ಲಿಸುತ ಮಾಯಾದೇವಿ ಮಂಚವನಿಳಿದಳೊಲವಿನಲಿ || ೨ ||

ವಿನುತಭೂಷಣಗಂಧವಸ್ತ್ರ[೨]ದ |
ಕನಕದರ್ಪಣ[೩]ಚಾಮರಂಗಳ |
ಘನತರದ ವಿನಿಯೋಗಭಾ[೪]ರದ ಜಾತಿಬಾಲೆ[೪]ಯರು ||
ತನತನಗೆ ನೆಱೆದುದು ವಿಳಾಸಿನಿ |
ಜನವು ತಂತಮ್ಮೊಳಿಗಂಗಳ |
ನಸುವಮಾಡಿಕೊಳುತ್ತಿ ಮಾಯೆಯು ಕನ್ನೆಮಾಡದಲಿ || ೩ ||

ವೇದಿಸಿಯೆ ಮಘಮಘಿಸುತಿಪ್ಪ ಜ |
ವಾದಿಯಲಿ ಮುಡಿ ಹೂಸಿ ವರ ಗಂ |
ಧೋದಕಂಗಳಲೊಲಿದು ಮಜ್ಜನಕೆಱೆದು ಮಡಿಯುಡಿಸಿ ||
ಆದರಿಸೆ ಕೆಳದಿಯರು ಕನಕದ |
ಪಾದುಕೆಯಲಾ ಮಾಯೆ ಬಂದು ವಿ |
ನೋದದಲಿ ಮಂಡಿಸಿದಳಾ ಮಣಿಮಯದ ಪೀಠದಲಿ || ೪ ||

ಸಸಿನೆ ಮುಡಿಯನು ಬಿಚ್ಚಿ ಬಿಟ್ಟಾ |
ಱಿಸಿಯನೇಕ ಕದಂಬ ಪರಿಮಳ |
ಕುಸುಮುಗಳನಳವಡಿಸಿ ಹೆಣಿಲಿಱಿಯಲ್ಲು ನಿತಂಬಿನಿಗೆ ||
ಕುಸುಮಶರಭಂಡಾರವನು ಕಾ |
ದೆಸೆವ ಕಾಳೋರಗನಿದೆಂಬವೊ |
ಲೆಸೆದುದಾ ಮಾಯಾಂಗನೆಯ ನಿಡುಜೆಡೆ ವಿರಾಜಿಸುತ || ೫ ||

೧ ಜಿ ( ಅ, ಇ, ಕ, ಖ, ಚ, ಜ, ಮು. ) ೨ ವಸ್ತ್ರರತ್ನ ( ಇ. ) ೩ ದಂಡದ ( ಇ. ) ೪-೪ ವದ ಸುಮತಿಭಾವೆ ( ಅ, ಕ. ); ವದ ಜಾತಿಭಾವೆ ( ಉ, ಚ. ); ವದ ಜಾತಿರಾಣಿ ( ಇ. ) ೫ ದೊಡಿ ( ಉ. ); ಪೊದಿ ( ಕ. ) ೬ ನಿಡೆ ( ಎ, ಜ. ) ೭ ಟ್ಟೋ ( ಜ. ) ೮ ಕ್ಕ ( ಇ. )
* ಈ ಪದ್ಯವು ( ಅ ) ಪ್ರತಿಯಲ್ಲಿಲ್ಲ.

ಬಗೆಗೆ ಸರಿಯೋ ಭಾವಿಸಲು ಮೇಣ್ |
ಮಿಗಿಲೊ ರಾಣಿ[೧]ಯು ಚಾರುಚರಣಗ |
ಳುಗುರ ಕಾಂತಿಯ ನೋಡಬೇಕೆನುತೊಬ್ಬಳರ್ತಿಯಲಿ ||
ನಗುತಲೊಯ್ಯನೆ ತಂದು ಚೆಲುವಿಕೆ |
ಮಿಗಲು ಮಾಯಾದೇವಿಯರ ಪಾ |
ದಗಳ ಬೆರಳಿಗೆ ತೊಡಿಸಿದಳು ಮಣಿಮುದ್ರಿಕಾವಳಿಯ || ೬ ||

ಕಾಮನಱಿವ ರಹಸ್ಯ[೨]ಶಾಸ್ತ್ರ |
ಸ್ತೋಮಗತಿಯನು ನುಡಿದು ತೋಱುವ |
ರಾಮಣೀಯದ ನೇವುರವನಿಕ್ಕಿದರು ಚರಣದಲಿ ||
ಸೀಮೆಯಿದಲಾ ಮದನತತ್ತ್ವ |
ಪ್ರೇಮಿಗಳಿಗೆನುತಳವಡಿಸಿದರು |
ಕಾಮಿನಿಯ ಕಾಲಿಂಗೆ ಕೆಲಬರು ಪಾಯವಟ್ಟವನು || ೭ ||

ಕಾಮಕರ್ಮ[೩]ದ ಕಾಮ[೪]ಭೋಗದ |
ಭೂಮಿಗಿಂತಿದೆ ಭುವನಕೋಶದ |
ಸೀಮೆಯೆಂದಱಿಯಲಿಕೆ ಕಱುಹಿನ ಕಲ್ಲನೋಳಿಯಲಿ ||
ನೇಮಿಸಿದರೆಂಬಂತೆ ಕಟಿಯಲಿ |
ಕಾಮಿನಿಗೆ ಮಣಿಮಯದ ಕಾಂಚೀ |
ದಾಮವನು ಕಟ್ಟಿದಳದೊ[೫]ಬ್ಬಳು ಚಪಳೆ ಚದುರಿನಲಿ || ೮ ||

ತೆಳುವಸುಱ ಕೊಬ್ಬಿದ ಕುಚಂಗಳ |
ಲಲಿತಕಂಬುಗ್ರೀವವನು ಕಂ |
ಡಲಸದೀಕ್ಷಿಸುವವರ ಕಂಗಳ ಕಾಂತಿ ಕಱಿಗಟ್ಟಿ ||
ಬಳಸಿನಲಿ ನೆಲಸಿರ್ದವೆನೆ ಕೋ |
ಮಳೆಯ ಕೊರ[೬]ಳಿನೊಳೊಬ್ಬಳಿಕ್ಕಿದ |
ಥೊ[೬]ಲಿದು ಬೆಳಗುವ ತೊಳಪ ಮುತ್ತಿನ ತೋರ[೭]ಹಾರವನು || ೯ ||

---

೧ ನಾರಿ ( ಜ. ) ೨ ಸಮಸ್ತ ( ಗ. ) ೩ ತರ್ಕ ( ಚ. ) ೪ ಕರ್ಮ ( ಖ. ) ೫ ತಂದಿಟ್ಟಳೊ ( ಅ. ) ೬-೬ ಥೊಳಗೊಬ್ಬಳಿಟ್ಟಳು|ಪೊ ( ಇ. ) ೭ ಕೊರಳ ( ಅ. )

ದರಹಸಿತಸಹ[1]ವಾದ ಮುಖರಸ |
ಪರಿದು ಬರುತ ಕುಚಾದ್ರಿ ತಡೆಯಲು[2] |
ತಿರಿಗಿ ಬರುತಿ[3]ಕ್ಕೆಲನ ಪರಿವೇಷ್ಟಿಸಿದುದೆಂಬಂತೆ ||
ತರುಣಿಯೊಬ್ಬಳು ಹತ್ತೆಗಟ್ಟಿದ |
ಕೊರಳೊಳೊಪ್ಪುವ ತೋರಮುತ್ತಿನ |
ಸರವ ಸಮುದಯ ಸೊಗಸು[4]ತಿರ್ದುವು ಮಾಯೆಗತಿ ಮೆಱೆದು[5] || ೧೦ ||

ಸರಳುಗಳು ಚೆಲುವಾಗಿ ಬಲುಹಾ |
ಗಿರಲು ಬೇಕೆಂದಂಗಜನು ವಿ |
ಸ್ತರಿಸಿದಡೆಯಣಸುಗಳೊ ಪೇಳೆಂಬಂತೆ ಸೊಗಸಾಗೆ[6] ||
ಕರಯುಗಾಂಗುಲಿಗಳಿಗೆ ಶೋಭಾ |
ಕರವೆನಿಸಿ ಮಣಿಮುದ್ರಿಕಾಳಿಯ[7] |
ತರುಣಿಯೊಬ್ಬಳು [8]ತೊಡಿಸಿದಳು ಮಾಯೆಗೆ ವಿಳಾಸದಲಿ[8] || ೧೧ ||

ಅಡಕಿಲಡಕಿಲುಗೊಂಡ ಭುವನದ |
ಗಡಣದಲಿ ಸಂಸಾರಸಂಗವ |
ಜಡಿದು ಜಱೀವ ವಿರಕ್ತವೃತ್ತಿಯ ಸಿದ್ಧಸಾಧಕರ ||
ಮೃಡ[9]ಹರಿಬ್ರಹ್ಮಾದ್ಯರನು ಕೆಡೆ |
ಬಡಿದು ಕಟ್ಟುವ ಕಾಮಪಾಶದ |
ತೊಡವಿವೆ[10]ನಲಿಕ್ಕಿದಳು ಮಾಯೆಗೆ ತೋಳತೊಡಿಗೆಗಳ || ೧೨ ||

ಮದನನೊಂದು ನವೀನವಹ ಶು |
ಭ್ರದ ಸುರಂಗ[11]ಭ್ರಮರವನು ರಚಿ |
ಸಿದನೊ ಕನ್ಯೆಯ ನಾಸಿಕದ ನಱುಗಂಪಿನಿಂಪಿಂಗೆ ||
ಇದುವೆ ಸೋಜಿಗವೆನಲು ತಂದಿ |
ಕ್ಕಿದಳದೊಬ್ಬಳು ತರುಣಿ ಮಾಯಾ |
ಸುದತಿಗೊಪ್ಪಿರೆ ತೊಳಪ ಮುತ್ತಿನ ತೋರಮೂಕುತಿಯ || ೧೩ ||

---

೧ ವಶ ( ಅ. ) ೨ ಯಾಂತಡೆ ( ಉ, ಎ, ಋ, ಗ, ಜ. ) ೩ ಸರಿದಿ ( ಇ. ); ಪರಿದಿ ( ಉ, ಋ, ಗ. ) ೪ ಮೆರೆವು ( ಎ, ಋ. ); ಸೂಸು ( ಒ. ) ೫ ಸೊಗಸಿ ( ಎ. ); ಯಂಗದಲಿ ( ಇ. ) ೬ ಚೆಲುವಾಗೆ ( ಉ, ಒ, ಕ, ಜ. ) ೭ ಕೆಯಿನಾ ( ಎ. ); ಕಾವಳಿ ( ಇ. ) ೮–೮ ಮಾಯೆಯಂಗದಲಿಕ್ಕಿದಳು ನಲದು ( ಇ. ) ೯ ಜಡ ( ಚ. ) ೧೦ ರಿಪೆ ( ಇ. ) ೧೧ ಗಂಧ ( ಇ. )

ಇದುವೆ ಸೋಜಿಗವಿಂದುಬಿಂದುವೊ |
ಳುದಿಸಿ ಭಾರ್ಗವಬಿಂದು ತೋರು |
ತ್ತಿದೆಯೆನಲು ತಮತಮಗೆ ಸಕಲ ವಿಳಾಸಿನೀನಿಕರ ||
ಚದುರೆಯೊರ್ವ ಲತಾಂಗಿ ಶೋಭಾ |
ಸ್ಪದಮೆನಲ್ಕಾ ಚಂದ್ರವದನೆಗೆ |
ಮುದದಿಯುಳವಡಿಸಿದಳು ಮುತ್ತಿನ ತೋರಮೂಕುತಿಯ * || ೧೩ ಅ ||

ಕೀಳುಮಾಡುವೆನಿನ್ನ ನೋಡಾ |
ಭಾಳನೇತ್ರನ ಬಲುಹನೆನುತಲಿ |
ಗಾಲಿಗಳ ಕಂದರ್ಪ ಜೋಡಿ[೧]ಸುವಂತೆ ನಿಜ ರಥಕೆ ||
ಮೇಳವಿಸಿ ನವರತ್ನ ತೆತ್ತಿಸಿ |
ದೋಲೆಗಳ ತಂದಿಟ್ಟಳೊಬ್ಬಳು |
ಬಾಲೆ ಮಾಯಾದೇವಿಗೊಪ್ಪುವ ಚೆಲುವ ಕಿವಿಗಳಿಗೆ || ೧೪ ||

ಸಡಗರಿಸಿ ಹರಿದೈದಿ ಸರಿದಿ |
ಕ್ಕಡೆಗಳಲಿ ಸೇರಿದವೊ ಕನ್ಯೆಯ |
ನಿಡಿದುಗೊಂಡ ಕಟಾಕ್ಷಕಾಂತಿಯ ಮಡುಗಳೆಂಬಂತೆ ||
ತೊಡಿಸಿದಳು ತಂದೊಬ್ಬಳಾಕೆಯ |
ಕೊಡಕೆಯಲಿ ಹೊಸತಪ್ಪ ಮುತ್ತಿನ |
ತೊಡಿಗೆಯನು ಮಾಯಾಂಗನೆಗೆ ಶೃಂಗಾರಶಾಲೆಯಲಿ || ೧೫ ||

ಸುತ್ತುವಳೆಯುವ ತೊಳಗಿ ಬೆಳಗುವ |
ಮುತ್ತು ವಜ್ರದ ನಡುವೆ ಮಾಣಿಕ |
ತೆತ್ತಿಸಿದ ಬೊಟ್ಟೊಂದ ಮಾಯಾಂಗನೆಯ ನೊಸಲಿನಲಿ ||
ಕತ್ತುರಿಯ ವರ ತಿಲಕ ಮಧ್ಯದೊ |
ಳೊತ್ತಿ ನಿಲಿಸಲು ಮೆಱೆಯುತಿರ್ದುದು |
ಚಿತ್ತಜಾ[೨]ತನ ವೀರ[೨]ಲಕ್ಷ್ಮಿಯ ನೊಸಲ ಕಣ್ಣಂತೆ || ೧೬ ||

---

* ಈ ಪದ್ಯವು ( ಗ ) ಪ್ರತಿಯಲ್ಲಿ ಮಾತ್ರ ಅದೆ.
೧ ಸೇರಿ ( ಚ. ) ೨-೨ ರಿಯ ವಿಲಯ ( ಇ. ) ; ತನ ವಿಜಯ ( ಗ. )

ನಭದೊಳೊಪ್ಪುವ ತಾರಕಾವಳಿ |
ವಿಭವದಲಿ ಸಂಪೂರ್ಣಚಂದ್ರನ |
ಸಭೆಯುಲೋಳಿಯಲೋಲಗಿಸ ನೆರೆದಿರ್ದುವೆಂಬಂತೆ ||
ಅಭಿನವದ ಮುತ್ತುಗಳ ಪಣೆಗ |
ಟ್ಟುಭಯ ಕರ್ಣಾಗ್ರದಲಿ ಸೇರಲು |
ಶುಭತೆಯಾಗಿ ವಿರಾಜಿಸಿತು ಮಾಯಾಂಗನೆಯ ಮುಖಕೆ || ೧೬ ||

ಒಸೆದು ಕಾಮನ ಬಾಣದಲಿ ಲೇ |
ಪಿಸುವ ಸಮ್ಮೋಹನದ ಬಾಷ್ಪದ |
ಮುಸಿಯೊ ಪೇಳೆನೆ ಕೋಮಳೆಯ ತೊಳತೊಳಪ ಕಂಗಳಿಗೆ ||
ಎಸಳುಗಾಡಿಗೆರೇಖೆಯನು ಚಿ |
ತ್ರಿಸಿದಳೊಬ್ಬಳು ಕಾಮುಕರ ಮೋ |
ಹಿಸುವ ಮೋಹನಯಂತ್ರರೇಖೆಗಳಂತೆ ಚೆಲ್ವಾಗಿ || ೧೮ ||

ನೋಡುವರ ಕಣ್ಣಿಕ್ಕ ಜಂಗಳು |
ಕಾಡದಂತಿರೆ ಬರೆದರೆಂದೆನೆ |
ನೋಡಿ ಕುಚಮೂಳಿಲದ ಕಪೋಲಸ್ಥಲದಲಂಗನೆಗೆ ||
ಕೂಡೆ ಕುಂಕುಮ ಮೃಗಮದಂಗಳ |
ಗಾಢಗಂಧದ ಪಂಕದಲಿ ಕೈ |
ಗೂಡಿ ಚಿತ್ರಿಸಿ ಮಕರಿಕಾಪತ್ರವನು ರಚಿಸಿದರು || ೧೯ ||

ಮಿಸುಪ ಕೆಂಪಿನ ಪದ್ಮರಾಗದ |
ರಸದ ರೇಖೆಯು ವಡಿಗಳಲಿ ಚಿ |
ತ್ರಿಸಿಯೆ ಸೆಱಗಿಗೆ ಕುಮುದಕುಸುಮದ ಬಣ್ಣವನೆ ರಚಿಸಿ ||
ಪಸರಿಸಿದ ಬೆಳದಿಂಗಳಿನ ಶೋ |
ಧಿಸಿದ ರಸದಲಿ ತೊಳೆದರೆನೆ ರಂ |
ಜಿಸುವ ವಿಮಲಾಂಬರವನಾಯತ ಮಾಡಿದರು ಬಳಿಕ || ೨೦ ||

---

೧-೧ ಯಲಿ ರಾಜಸಿತು ಮಾಯಾಂಗನೆಯ ಮೊಗಸಿರಿಗೆ || ( ಎ. ) ; ಮುಖವು ( ಇ. ) ೨ ವೆನೆ ನೋಡುವರೆ ( ಇ. ) ೩-೩ ಲಂಗಳಲಿ ಗಂಡಸ್ಥಲಂಗಳಲಿ ( ಗ. )

ಪರಿವಿಡಿಯ ನಿಱಿವಿಡಿದು ನಾಭಿಯ |
ಸರಿಸದಲಿ ಪಸರಿಸುತ ಜಘನಕೆ |
ಪರುಠವಿಸಿ ನಸು[೧]ದೋಱುವಂತಿರಲಂಗವಟ್ಟವಸು ||
ವಿರಚಿಸಿದಳುಡಿಗೆಯನು ಮಾಯಾ |
ತರುಣಿ ತಾನಳವಡಿಸಿ ಕಾಮನ |
ಬಿರುದ ಹಳವಿಗೆಯಂತೆ ನಟನೆಯ ಜಾತಿಜಾಣೆನಲಿ || ೨೧ ||

ಚೆ[೨]ನ್ನೆ ನೀನಲ್ಲದೆ ಬಳಿಕ್ಕಾ |
ರಿನ್ನು ದಿಟವಿದಿರಿಟ್ಟು ತೋಱಿಸ |
ಲನ್ಯರುಂಟೇ ರೂಹಿಡಲು[೩] ನೆಱೆ[೪] ನೋಡು ನೀನೆನುತ ||
[೪]ಕನ್ನಡಿಯ ತೋಱಿದಳದೊಬ್ಬಳು |
ಕನ್ಯೆ ಕಾಮಿನಿಗರ್ತಿಯಿಂದವೆ |
ಕಣ್ಣುಗಳನಿದ್ದೆ[೪]ಸೆಗೆ ಸೂಸುತ ಮಾಯೆ ನೋಡಿದಳು || ೨೨ ||

ಮನಸಿಜನ ಮನೆದೇವಿ[೫] ಕುಸುಮಾ |
ಸ್ತ್ರನ ಕುಲೋತ್ತಮೆ ರಾಜಗುರು ಕಾ |
ಮನ ಭುಜಾಗ್ರದ ವಿಜಯಲಕ್ಷ್ಮಿಯನಂಗನಧಿದೈವ ||
ವಿನಯಚಿತ್ರಜಯಂ[೬]ತ್ರಚೇಷ್ಟಾ |
ವಿನುತ ಚೇತ[೭]ನಮೂರ್ತಿ ಕಂದ |
ರ್ಪನ ಕರಾಸಿಯು ವೀರಸಿರಿಯೆನೆ ಮೆಱೆ[೭]ದಳಾದೇವಿ || ೨೩ ||

ತರುಣಿ ನಡೆಯೆ[೭]ಾ ಮಧುಕನಾಥೇ |
ಶ್ವರನ ಪೂಜೆಯ ಮಾಡಲಿಕೆ ಸಂ |
ವರಿಸಿ ಬಂದೆವು ಸಕಲ ವಸ್ತುಗಳೆನುತಲಂದಣವ ||
ತರಿಸಿದರು ಹೆಗ್ಗಡಿತಿಯರು [೮]ಸಾ |
ದ[೮]ರದಲುತ್ಸಾಹಿಸುತ ರತ್ನೋ |
ತ್ಕರದ ಗದ್ದುಗೆಯಿಂದಲಿದ್ದಳು ಮಾಯೆ ರಚನೆಯಲಿ || ೨೪ ||

೧ ರು ( ಒ. ) ೨ ಕ ( ಅ, ಇ, ಎ, ಖ, ಗ, ಚ, ಜ. ) ೩ ಕುರುಹಿಡಲು ( ಅ, ಚ, ಮು. ); ರೂಹಿಸಲು ( ಎ, ಜ. ); ರೂಢಿಯಲಿ ( ಇ. ) ೪-೪ ಕನ್ನೆಯೊರ್ವಳು ಮಿಸುಪರಕ್ಷದ । ಕನ್ನಡಿಯ ತೋರಿಸಲು ಬಳಿಕಾ । ಕಣ್ಣುಗಳನೆಚ್ಚೆ ( ಗ. ) ೪ ದೆಸೆದೆ ( ಖ. ); ನಾಲ್ಕೆ ( ಎ. ) ೫ ಮದದಾನೆ ( ಗ. ) ೬ ನೇ ( ಜ. ) ೭ ಚಲುವಿ ( ಇ. ) ೮-೮ ಸಡ|ಗ ( ಇ. )

ಎತ್ತಿ ನೆಗಹಿದ ತೊಳಪ ಮುತ್ತಿನ |
ಸತ್ತಿಗೆಯ ಸಡಗರದ ಸರಿಸದೆ |
ಸುತ್ತಿನಲಿ ಬಲನೆಡಕೆ ಚಿಮ್ಮುವ ಧವಳಚಾಮರದ ||
ಚಿತ್ತಸಾಯುವಧಾರು ಎನುತವೆ |
ಹತ್ತಿರುಗ್ಘಡಿಸುವ ಸ[೧]ಗಾನ[೨]ದ |
ತೆತ್ತಿಗರ ಸಂಭ್ರಮದಲಂದಣವೇ[೩]ಱಾದಳು ಮಾಯೆ || ೨೫ ||

ಕಾಮರೇಖೆ ಕಳಾವಿಳಾಸಿ |
ಪ್ರೇಮಕಾರಿಣಿ ರಾಗಿ ಲೋಭಿಣಿ |
ನಾ[೪]ಮನಿರ್ಮಿತೆ[೪] ಸಕಳಸಂಪದೆ ಭೋಗಿ ಮದಮಾನಿ ||
ಹೇಮೆ ಹೆಕ್ಕಳೆಯೆನಿಪ ನಾನಾ |
ನಾಮಗಳ ಹೆಗ್ಗಡಿತಿ ಡಾದಿಯ |
ರಾ ಮಹಾವಿನಿಯೋಗದಬಲೆಯರೈದಿದರು ಕೂಡಿ || ೨೬ ||

ಹಡಪ ಬೊಕ್ಕಸ ಛತ್ರ ಚಾಮರ |
ಕುಡಿಯುದಕ ಬೀಸಣಿಗೆ ಹೊಂಗ |
ನ್ನಡಿ ಸುಗಂಧ ವಿಲೇಪ ಹೂ ಹಾವಿಗೆಗಳೊಳಿಗವ ||
ನಡೆಸುವವರೈದಿದರು ಮಿಗೆ ಮುಂ |
ಗುಡಿಯಲಣಿವರಿದೊಕ್ಕಲಿಕ್ಕುತ |
ಮಡದಿಯರು [೫]ಮಾಯಾಂಗನೆಯ ದಂಡಿಗೆಯ[೫] ಬಳಸಿನಲಿ || ೨೭ ||

ಹೂವಿನಗ್ಗವಣಿಯ ಸುಗಂಧದ |
ತೀವಿದುತ್ತಮ ಧೂಪ ವಸ್ತ್ರದ |
ಪಾವನದ ಪರಿಕರದ ಗೀತ[೬]ದ ನೃತ್ಯವಾದ್ಯಗಳ ||
ದೇವಪೂಜಾರ್ಥಕ್ಕೆ ಸಾಧನ |
ಸೇವಕಾಂಗಿಯರೊಲಿದು ಬಂದರು |
ಭಾವೆ [೭]ಮಾಯಾ ಮಾನಿನಿ[೭]ಯ[೮] ದಂಡಿಗೆಯ ಬಳಸಿನಲಿ || ೨೮ ||

೧ ಸು (ಗ.) ೨ ಘಾಡ (ಜ.) ೩ ಕಾ (ಉ.) ೪ ಮರ್ಗಳೆ (ಇ, ಗ.) ೫-೫ ಪುರವಣಿಸಿ ಮಾಯಾಂಗನೆಯ (ಜ.) ೬ ಲೇಪ (ಗ.) ೭-೭ ಯರು ಮಾಯಾಂಗನೆ (ಖ.) ೮ ವೇದಿಯುಸ (ಅ.)

ಉಲಿವ ನೇವುರ ವಾಯುವಟ್ಟದ |
ಲಲಿತಕಂಕಣ ತೋಳಬಂದಿಯ |
ಲುಳಿಯ ಪದಕದ ತೋರಮುತ್ತಿನ ಸರದ ಮೂಕುತಿಯ ||
ತಳಿತ ಹೂವಿನ ಮುಡಿಯ ಪಟ್ಟೆ |
ವಳಿಯ ಸೀರೆಯ ಚಲ್ಲಣದ ಕೋ |
ಮಳೆಯರೆಯ್ದಿದರಂದು ಮಾಯಾಂಗನೆಯ ಬಳಸಿನಲಿ || ೨೯ ||

ಮುತ್ತಿನೋಲೆಯ ಕುಪ್ಪ[1] ಸರಿಗೆಯ |
ಹತ್ತಿಗಟ್ಟಿನ ಬಣ್ಣಸರಗಳ |
ತೆತ್ತಿಸಿದ ನವರತ್ನ[2]ಖಚಿತದ ಕಟಿಯ ಸೂತ್ರಗಳ[2] ||
ಉತ್ತಮದ ಚಿತ್ರಾಂಬರಂಗಳ |
ಕತ್ತುರಿಯ ಹೆಱೆ[3] ನೊಸಲ ತಿಲಕದ |
ಮತ್ತಗಜಗಮನೆಯರು ಬರುತಿರ್ದರು ವಿಳಾಸ[4]ದಲಿ || ೩೦ ||

ವೀರಮುದ್ರೆಯ ಮುಂಟಿಕೆಯ ವಿ |
ಸ್ತಾರದಂಗುಲಿ[5]ಯುಂಗರಂಗಳ |
ದಾರೆಗಡಗದ ಹೊನ್ನಬಳೆಗಳ ಶಂಖದೋ[6]ಲೆಗಳ ||
ತೋರಮುತ್ತಿನ ಹಾರ[7]ಗಳ ಕೇ |
ಯೂರಗಳ ಧವಳಾಂಬರಂಗಳ |
ನಾರಿಯರು ನಡೆತಂದರಾ ಮಾಯಾಂಗನೆಯ ಕೂಡೆ[8] || ೩೧ ||

ನಿಱಿಯನಳವಡಿಸುತ್ತ ಮೇಲುದ |
ಸೆಱಗ ಸಂವರಿಸುತ್ತ ಬಳಲುವ |
ತುಱುಬ ತಿದ್ದುತ ಚಪಳತೆಯ ಕಡೆಗಣ್ಣ ನೋಟದಲಿ ||
ಸೆಱೆವಿಡಿದು ಕುಸುಮಾಸ್ತ್ರನಿದಿರಿನ |
ಕುಱಿ[9]ಗಳೆನಿಸುವ ನೋಟಕರನೀ |
ತೆಱದಲೈದಿದರೊಡ[10]ತಿಯೊಡನೆ ವಿಳಾಸಿನೀನಿಕರ[10] || ೩೨ ||

೧ ಸುತ್ತ ( ಖ. ) ; ಮುರಿಗಿ ( ಜ. ) ೨-೨ ಸೇರಿಸಿದುಡಿಯ ಘಂಟೆಗಳ ( ಚ ) ; ಸೇರಿಸಿದುಡಿಯ ನೇವಳದ ( ಇ, ಎ, ಖ, ಗ. ) ೩ ವಿನೋದ ( ಎ. ) ೪ ದುಗೆ ( ಒ. ) ೫ ಮುತ್ತಿನೋ ( ಗ. ) ೬ ಮಾಲೆ ( ಉ. ) ೭ ಬಳಸಿ ( ಇ. ) ೮ ತುರು ( ಖ. ) ೯-೯ ನೆಯೂಪತಿಯ ಕೂಡ ಸಖಿಜನರು ( ಇ. )

ಗತಿಯ ಗಮಕದಲಿಂದ್ರನನು ವಾಕ್ |
ಚತುರತೆಯಲಿ ವಿರಿಂಚಿಯನು ಪೂ |
ರಿತ ಕಟಿಸ್ತನದುಬ್ಬಿನಲಿ ಖಗರಾಜವಾಹನನ ||
ನುತ ಕಟಾಕ್ಷ[೧]ಕಳಾವಿಳಾಸೋ[೨] |
ನ್ನತಿಯ[೧]ಲೀಶನ ಮರುಳು ಮಾಡುವ |
ಸತಿಯರೆಯ್ದಿದರಂದು ಮಾಯಾಂಗನೆಯ ಬಳಸಿನಲಿ || ೩೩ ||

ತರುಣಿಯರ ಮೈ[೩] ಸುಯ್ಯ ಕಂಪಿಗೆ[೩] |
ಹರಿದು ಕವಿತಹ ತುಂಬಿಗಳ ವಿ |
ಸ್ತರದ ಗಿಲಿಕಿನ ಭೂಷಣಂಗಳ ನೆಲನನುಗ್ಘಡಿಪ ||
ನೆರೆದ ಸವಮಳ ಕಾಂತೆಯರ ಸಡ |
ಗರದ ಕೈವಾರಿಗಳ ಧ್ವನಿಗಳ |
ಭರದ ಕಳಕಳ ಕೇಳಲಾದುದು ಪುರದ ಬೀದಿಯಲಿ || ೩೪ ||

ಇದು ಮನೋಜಬ್ರಹ್ಮ ತಾ ಮಾ |
ಡಿದ ನವೀನದ ಸೃಷ್ಟಿಯೋ ಮೇ |
ಣಿದು ರತೀವಲ್ಲಭನ ಜಂಗಮಲತೆಗಳೋ ಬಗೆಗೆ ||
ಇದು ವಿಚಿತ್ರವೆನಲ್ಕೆ ರೂಪಿನ |
ಚದುರತನದ ವಿಳಾಸವೃತ್ತಿಯ |
ಸುದತಿಯರು ನಡೆತಂದರಾ ಮಾಯಾಂಗನೆಯ ಕೂಡೆ || ೩೫ ||

ಇದುವೆ ಕೈಲಾಸಾದ್ರಿಯೋ ಮೇ |
ಣಿದು ಶಶಾಂಕನ ತಗಡಿನಲಿ ಹೊದೆ[೪] |
ಸಿದ ವಿನೂತನ ಪುಷ್ಪಕವೊ ಪೇಳೆನಲು ತೊಳಗುತಲಿ ||
ಹುದುಗಿ[೫] ಗುಡಿ ತೋರಣ ಪತಾಕೆಗ |
ಳೊದವಿನಲಿ ಹೊಂಗಳಸದಲಿ ತೋ |
ರ್ಪುದುದು ಮಾಯೆಗೆ ಮಧುಕನಾಥೇಶ್ವರನ ವರ ಭವನ || ೩೬ ||

೧-೧ ದ ಸನ್ನೆಯಿಂದುನ್ನತದ ( ಇ. ) ೨ ಶೇಷೋ ( ಮ. ) ೩-೩ ಗಂಪಿಗೆರಗುವ ( ಇ. )
೪ ಡ ( ಇ. ) ೫ ಪುದಿದು ( ಗ. )

ಬಂದಳಾ ದೇಗುಲಕೆ ಭರವಸ |
ದಿಂದ ಬಳಿಕಾ ಮಾಯೆ ವಿಭವದ |
ಲಂದಣವನೊಲಿದಿಳಿದು ಕರ ಪದ[೧] ವದನ[೨]ವನು ತೊಳೆದು ||
ಇಂದುವದನೆ[೩] ವಿಲಾಸದಲಿ ಬಲ |
ವಂದು ನಡೆದೊಳಪೊಕ್ಕು ಲಿಂಗದ |
ಮುಂದೆ ಮೈಯ್ಯಿಕ್ಕಿದಳು ಪುಷ್ಪಾಂಜಲಿಯ ಪಸರಿಸುತ || ೩೭ ||

ಕರವ ಮುಗಿಯುತ ಮಧುಕನಾಥೇ |
ಶ್ವರನೆ[೪] ಶರಣೆನುತೆದ್ದು ಕುಳ್ಳಿತು[೫] |
ವಿರಚಿಸುತಲಂದರ್ಘ್ಯ[೬] ಪಾದ್ಯಾಸ[೭]ನ ವಿಧಾನಗಳ ||
ಪರುಠವಿಸಿ ಪಂಚಾಮೃತಂಗಳ |
ನೆರೆದು ಪ್ರ[೭]ತ್ಯೇಕದಲಿ ಮಿಗೆ[೭]ವಿ |
ಸ್ತರಿಸುತಿರ್ದ[೮]ಳು ಮಾಯೆ ಮುದದಲಿ ಮಧುಕನಾಥಂಗೆ || ೩೮ ||

ಸಾರ[೯]ಗಟ್ಟಿಯ ನೀಡಿಹರು ಪ |
ನ್ನೀರ ಹೊಂಗರಗದಲ[೯] ನಲಿದಾ |
ನಾರಿಯುರು ವಿರಚಿಸಿದರಭಿಷೇಕವನು ದೇವರಿಗೆ ||
ಸಾರದಿವ್ಯಾಂಬರವನರ್ಪಿಸಿ |
ಹಾರವಿಸುತಲಿ ಕುಂಕುಮದ ಕ |
ರ್ಪೂರಮೊದಲಾದಷ್ಟಗಂಧವನೊಟ್ಟಿದಳು ಮಾಯೆ || ೩೯ ||

ಬಿಂ[೧೦]ದು ಕಳೆಯದ ಮುತ್ತುಗಳಲಾ |
ನಂದದಿಂದಕ್ಷತೆಯನಿಟ್ಟಳು |
ತಂದು ತರುಣಿಯರೀವ ಹೂವಿನ ದಂಡೆಯಿಂಡೆಯನು[೧೧] ||
ಸಂದಿಸುತ ನಾನಾಪ್ರಕಾರದ |
ಚಂದಚಂದದ ಪತ್ರೆ ದೂರ್ವೆಗ |
ಳಿಂದೆ ಮಾಯಾದೇವಿ ಮಾಡಿದಳಭವ[೧೨] ಪೂಜೆಯನು || ೪೦ ||

---

೧ ತಳ ( ಇ. ) ೨ ಕಮಲ ( ಕ. ) ೩ ಮುಖಯು ( ಅ. ) ೪ ಗೆ ( ಇ, ಎ, ಗ, ಜ. ) ೫ ಕುಳಿತಳು ( ಇ. ) ೬ ರ್ಚ ( ಎ. ) ೭-೭ ತ್ಯಕ್ಷದಲಿ ಬಹು ( ಇ. ) ೮ ಧಾರೆ ( ಉ, ಜ. ) ೯ ಹೊಂಗರಗಗಳ ( ಅ, ಎ, ಖ, ಗ, ಚ. ) ; ಹೊಂಗಿಂಡಿಯಲಿ ( ಉ. ) ; ಹೊಂಗಳಸಿನಲಿ ( ಉ. ) ; ಹೂಗಂಧಗಳ ( ಜ. ) ೧೦ ಇ ( ಜ. ) ೧೧ ಮಾಲೆಗಳ ( ಇ. ) ೧೨ ಶೀಶ ( ಅ. )

ಹಿಡಿದು ಬಾಜಿಸೆ[1] ಘಂಟೆ ಶಂಖದ |
ಗಡಣ ಜಾಗಟೆ ಜಗಳೆ[2] ಮದ್ದಳೆ |
ಜಡಿವ ಕಹಳೆ ಮೃದಂಗವಾವುಜ ಭೇರಿ ಕಂಸಾಳ ||
ನುಡಿವ ಗಂಭೀರಧ್ವನಿಯಲತಿ |
ಸಡಗರಿಸಿದುದು ನಗರ ಮಾಯಾ |
ಮಡದಿ ಮಾಡುವ ದೇವಪೂಜೆಯ [3]ರಭಸರಚನೆಯಲಿ[3] || ೪೧ ||

ಹಲವುಪರಿಯ ಸುಗಂಧ[4]ಧೂಪಂ |
ಗಳ[5]ನು ಧೂಪಿಸಿ[5] ಬೆಂಬಳಿಯು ಮಂ |
ಗಳ ಪದಂಗಳ ಹಾಡುತಾರತಿಗಳನನೇಕವನು ||
[6]ತೊಳಗಿ ಬೆಳಗುತ[6]ಲೆತ್ತಿದಳು ಕೋ |
ಮಳೆಯರುಘೆಯುಘೆ ಜಯತು ಜಯತೆಂ[7] |
ದುಲಿ[8]ಯುತಿರಲಾ ಮಧುಕನಾಥಗೆ ಮಾಯೆ ಭಕ್ತಿಯಲಿ[8] || ೪೨ ||

ಸರಸ ಮಿಗೆ ತಾರಕಿಯ ನಿಗುಚಿದ |
ಪರಿಯಲೋಗರ ಪುಷ್ಪರಾಗದ[9] |
ಸುರಸದಂತಿರೆ ತುಪ್ಪ ಚಂದ್ರಮನಂತೆ ಪಾಯಸವು ||
ಘರಘರಂಗಳ ಮುಗಿಲಬಣ್ಣದ |
ಪರಿಯಲೊಪ್ಪುವ ಭಕ್ಷ್ಯರಾಶಿ[10]ಯು |
ನಿರಿಸುತಿರ್ದರು ಹೊನ್ನ ಹರಿಯಾಣದಲಿ ಬೋನವನು[11] || ೪೩ ||

ವರ ವಿ[12]ನೂತನ ರತ್ನಗಳ [12]ಮೃದು |
ಕರಣಿಯುಂಗವನಜಿದು ಮಾಡಿದ |
ಪರಿಯ ಬಾಳುಕಹಪ್ಪಳಂಗಳ ಪರಪುಶಾಖಗಳ ||
ಸುರುಚಿಯಾದ ಪಳಿದ್ಯಪಾನೋ |
ತ್ಕರವನುಪ್ಪಿನಕಾಯಿ ಪಣ್ಗಳ |
ವಿರಚಿಸುತ ದಧಿತಕ್ರಗಳ ಬಡಿಸಿದರು ಭಕ್ತಿಯಲಿ || ೪೪ ||

೧ ಪ ( ಅ, ಎ, ಗ, ಟ. ) ; ಜಿಸೆ ( ಇ. ) ೨ ಕರಪೆ ( ಉ. ) ೩-೩ ರಚನೆ ಹೊಸತಾಗಿ ( ಗ. ) ೪ ದಶಾಂಗ ( ಗ. ) ೫-೫ ಸಮರ್ಪಿಸಿ ( ಇ. ) ೬-೬ ಬೆಳಗ ಪಸರಿಸ ( ಗ. ) ೭ ಬಾಗೆಂ ( ಗ. ) ೮-೮ ಯೆ ಭಕ್ತಿಯ ಭಾವದಲಿ ಮಧುಕೇಶ್ವರಗೆ ಮಾಯೆ ( ಗ. ) ೯ ಪುಷ್ಪಸಾಳಿಯ ( ಇ. ) ೧೦ ಜಿ ( ಎ, ಚ, ಝ. ) ೧೧ ಭೋಜನವ ( ಇ. ) ೧೨-೧೨ ನುತ ರತ್ನಗಳ ನವ ( ಇ. )

ಪರಿಮಳಂಗಳ ಪಸರಿಸುವ ಕ |
ಚ್ಚೂರಿಯು ಪಚ್ಚಡಿಗಳ ಸುಸಾರೋ |
ತ್ಕರದ ಸಾಲಿನ ಸೀಕರಣೆಯನುಪಮ ಪಸುಂಬರಿಯ ||
ಪರಿಪರಿಯ ಚಿನಿಪಾಲುಗಳ ಸ |
ಕ್ಕರೆಗಳನು ನಾನಾ ಪದಾರ್ಥವ
ತರುಣಿಯರು ನೈವೇದ್ಯವನು ಬಡಿಸಿದರು ಭಕುತಿಯಲಿ || ೪೫ ||

ಲಿಂಗವಧಾರೆನುತಲುಪಹಾ |
ರಂಗಳನು ನೆರೆ ಮಧುಕನಾಥೇ |
ಶಂಗೆ ಪುಷ್ಪಾಂಜಲಿಸಮೇತಾರ್ಪಣವ ಮಾಡುತಲಿ ||
ಮಂಗಳ ಶ್ರೀ ಹಸ್ತಜಲವನು |
ಸಂಗಳಿಸಿ ಕೈಗಟ್ಟ ಸಹಿತವೆ |
ಸಾಂಗದಲಿ ಮಾಡಿದಳು ಮಾಯಾದೇವಿ ಪೂಜೆಯನು || ೪೬ ||

ಹೋಳಿಸಿರ್ದಡಕೆಗಳ ಭಾಗವ |
ಮೇಳವಿಸಿ ಕರ್ಪುರದ ಬೆಳ್ಳೆಲೆ |
ಯೋಳಿಗವಳಿಗೆಗಳನು ಶುಭ್ರದ ಸುಣ್ಣ ಸಹವಾಗಿ ||
ವೀಳೆಯವನಿತ್ತರ್ಥಿಯಿಂದಾ |
ಬಾಲೆ ಮಾಯಾದೇವಿ ಮನದೊಂ |
ದೇಳಿಗೆಯ ಭಾವನೆಯಲುಪ್ಪಾರತಿಯನೆತ್ತಿದಳು || ೪೭ ||

ಹಿಡಿದು ನವರತ್ನಂಗಳೊಪ್ಪುವ |
ಕೊಡಕೆಗಂಗಳ ಕಾಂತಿಯನೆ ಬಲ |
ನೆಡಕೆ ಸೂಸುತ ಧವಳ ಚಾಮರವನು ವಿಳಾಸದಲಿ ||
ಮಡದಿಯರು ತಂದೆತ್ತುವಾರತಿ |
ಗಡಣವೆಲ್ಲವನರ್ಪಿಸುತ ನಲಿ |
ದೊಡನೊಡನೆ ವೈಯಿಕ್ಕುತಿರ್ದಳು ಮಾಯೆ ಭಕುತಿಯಲಿ || ೪೮ ||

೧ ಸ್ತು ( ಇ. ) ೨-೨ ಸುವರ್ಣಕ್ಷೀರದ ಸೀಕರಣೆಗಳ ಸಾರದ ಫಲವು ( ಜ. ) ೩-೩ ಗಳ ಪೊಸ ರಸಾಯನದ ( ಇ. ) ೪ ಲು ( ಉ, ಎ, ಕ, ಚ. ) ; ಸು ( ಖ, ಗ. ) ೫ ಸಲಿಸಿ ( ಗ. ) ; ನೀಟ ( ಜ. ) ೬-೬ ಧರಿಸೆನುತ ನೈವೇದ್ಯ ( ಖ. ) ೭ ಗಣೆ ( ಉ, ಎ, ಒ, ಗ, ಚ. ) ೮ ತಿರ್ ( ಉ, ಚ, ಟ. ) ೯ ಕಡೆಯು ( ಜ, ಟ. ) ; ತೊಪರು ( ಗ. ) ೧೦ ಚಿಮ್ಮುವ ( ಟ. )

ದಣಿಯೆ ಪೂಜೆಯ ಮಾಡಿ ಮಣಿದ |
ಪ್ರಣವ ತೋಱಿಸಿ ಕೆಳದಿಯರ ಸಂ |
ದಣಿಯ ತೊಲಗಿಸಿ [1]ಲಿಂಗವನು ಬಲವಂದು[1] ಭಕ್ತಿಯಲಿ ||
ಮಣಿದು ಗರ್ಭಗೃಹವ ಹೊಱವಂ |
ಟಣಿವರಿದು ಕೈಗೊಡುವರೊಲಿದಿ |
ಟ್ಟಣಿಸೆ ಬಂದಳು ಮಾಯೆ ವಿಭವದಿ[2] ರಂಗಮಂಟಪಕೆ || ೪೯ ||

ಮಿಸುಪ ಧೂಪದ ಧೂಮದಲಿ ಕೆಂ |
ಪೆಸೆವ ಲೋಚನವಾನತೆಯ ಭರ |
ವಸಕೆ ಸೂಸಿದ ಸುಳಿಗುರುಳು ದೀಪಂಗಳುಬ್ಬೆಯಲಿ ||
ಕುಸರಿ ಬೆಮರಿಡುವಂಗ ಮಿಗೆ ರಂ |
ಜಿಸಲು ಮಧುಕೇಶ್ವರನ ಸಂಭೋ[3] |
ಗಿಸಿಯೆ ಬಂದಳೊ ಪೇಳೆನಲ್ಮೆಱೆದಿರ್ದಳಾ ಮಾಯೆ || ೫೦ ||

ನಿಲಿಸಿದರು ಗಡಬಡೆಯ ವಾದ್ಯದ |
ಗಲಭೆಯನು ತರುಣಿಯರ ತಂಡಗ |
ಳುಲುಹುಗಳನಲ್ಲಲ್ಲಿಗಾಗಳೆ ಕಂಬಿಕಾರ್ತಿ[4]ಯರು ||
ಬಳಿಕ ಚಲ್ಲಣವುಡಿಸಿ ನೆಱೆ[5] ಪರಿ |
ಮಳದ ತುಱುಬನು ಬಲಿದು ಬಣ್ಣಿ[7]ಸಿ |
ಲಲನೆಯರು ಲಾಸ್ಯ[6]ಕ್ಕೆ ಮಾಯಾಂಗನೆಯ ರಚಿ[8]ಸಿದರು || ೫೧ ||

ವಾಸಗಳ ಪಾವುಜೆಯ ಕಹಳೆಯ |
ಲೇಸೆನಿಪ ಮದ್ದಳೆಯ ತಾಳದ |
ಭಾಸುರದ ಗಾಯಕಿಯರೊಗ್ಗಿನ[9] ವಿವಿಧ ವೀಣೆಗಳ ||
ಹೂಸಿ ಹೊಮ್ಮುವ ಸರದುಪಾಂಗಾ |
ವಾಸ ಮೇಳಾಪಗಳಲೊಯ್ಯನೆ |
ದೇಸಿರಾಗವ ಮಾ[9]ಯೆ[10]ಯಾಳಾಪಿಸಿದಳೊಲವಿನಲಿ[9] || ೫೨ ||

---

೧-೧ ಬಂದಳಾ ಬಲಗೊಂಡು ( ಗ. ) ೨ ಯೊಪ್ಪುವ ( ಮು. ) ೩ ಯೋ ( ಒ. ) ೪ ಕಾಂತೆ ( ಖ, ಗ, ಟ. ) ೫ ಬಂಧಿ ( ಇ, ಮು. ) ೬ ನಾಟ್ಯ ( ಜ. ) ೭ ನಿಲಿ ( ಚ, ಮು. ) ೮ ನುಡಿಯಿಪ ( ಚ. ) ೯-೯ ಡುತಿರ್ದಳು ಮಾಯೆ ರಚನೆಯಲಿ ( ಗ. ) ೧೦ ಡಿ ( ಇ, ಮು. )

ಹಾಡುತಿರ್ದಳು ಹಾರವಿಸಿ ನೆಱೆ |
ನೋಡುತಿರ್ದಳು ಮಿಕ್ಕು ಮೋಹಿಸಿ |
ಬೇಡುತಿರ್ದಳು ಮಾಯೆ ಮನದೊಳಗಿಷ್ಟಸಿದ್ಧಿಯನು ||
ಕೂ[1]ಡುತಿರ್ದಳು ನೆಱೆ[2]ದು ನಿಂದಿತು |
ಕೂಡೆ ಕೇಳುವ ನೋಟಕರ ಮೆ |
ಯ್ಯಾಡಿನಲಿ ಕಾಮಾಗ್ನಿಯನು ಸಂಗೀತ ಕೇಳಿಯಲಿ || ೫೩ ||

ಬಳಿಕಲೊಯ್ಯನೆ ಚರಣಚಾರಣ |
ಚಳತೆಯಲಿ ನಿಜ ಹಸ್ತವಿಸ್ತರ |
ದಳತೆಯಲಿ ಝಳಪಿಸುವ ಬೆರಳಿನ ಲುಳಿಯ ಹವ[2]ಣಿಯಲಿ ||
ಘಲಘಲಿಸುವಂದುಗೆಯ ಕಂಕಣ |
ಗಳ ಝಣತ್ಕಾರದಲಿ ಮಾಯಾ |
ಲಲನೆ ರಂಗಂಬೊ[3]ಕ್ಕು ನಿಂದಳು ನಿಜದ ನಿಱುಗೆಯಲಿ || ೫೪ ||

ಪಸರಿಸಿದ ನಿ[4]ರಿಪಾದಗಳು ಸಂ |
ದಿಸಿದ ಮಡ ಸಮಲಾಗಿನಲಿ ಮೋ |
ಹಿಸಿಯುಗಲ್ದಿ[5]ಹ ಜಾನು ತೋಱುವ ಜಘನ ಕುಚಕಳಶ ||
ಕುಸಿ[6]ದು ಕೆಲವಿಂಬಾದ ಕಾಲಿನ |
ಲೆಸೆವ ನಳಿತೋಳುಗಳ ಭಾವದ |
ಸಸಿನದಲಿ ಸಮನಿಸಿದ ಕಣ್ಣೊ[7]ಪ್ಪಿದುವು ಮಾಯೆಯಲಿ || ೫೫ ||

ತಾಳದಲಿ ತರಹರಿಸಿ ಮೆಲ್ಲನೆ |
ಮೇಳದಲಿ ಮೈನಿಗುರಿ ಕರ ಸಂ |
ಚಾಳಿಯಲಿ ಚಳಬಳಿಸಿ ತಿರುಪಿನ ಮಡುಪಿನಲಿ ಮ[9]ಣಿದು ||
ತೋಳ ಮೈಯಲಿ ತೊನೆದು ನೋಟದ |
ಢಾಳದಲಿ ಧವಳಿಸಿ[8]ಯೆ ವಿನುತ[8] ಮ |
ರಾಳಗತಿಯಲಿ ಗಮಕಿಸುತಮೊಪ್ಪಿದಳಾ ಮಾಯೆ || ೫೬ ||

---

೧ ಹಾ ( ಒ, ಟ. ) ; ಆ ( ಎ, ಗ. ) ; ಮಾ ( ಇ. ) ೨ ವಹ ( ಎ, ಒ, ಗ. ) ೩ ರಾಗದಿ ಹೊ ( ಇ. ) ೪ ಸ ( ಗ. ) ೫ ಲದಿ ( ಗ. ) ೬ ಎಸೆ ( ಜ. ) ೭ ಕು ( ಗ. ) ೮-೮ ವಿನೂಕ್ನ ( ಉ, ಮು. ) ೯ ಡಳಮುಳಿಸಿ ( ಇ. )

ನೇಮ ನೆಲೆ ಪಯ[1]ಪಾಡು ಪಲ್ಲಟ |
ಸೀಮೆ ಸೊಗಸತಿ[2]ಬೆಡಗು ಬಿನ್ನಣ |
ರಾಮಣೀಯತೆ[3] ರೇಖೆಯಂತರಗ[4]ರಣತಿರುಪಿನಲಿ ||
ಕಾಮಿನಿಯೊ ತಾ ಭರತಸಂಭವ |
ಭೂಮಿಯೋ ಪೇಳೆನಲು ಮೆಱೆ[5]ದಾ |
ಶ್ಯಾ[5]ಮೆ ಮಾಯಾದೇವಿ ಮೋಹಿಸಿ ಪಾತ್ರವಾಡಿದಳು || ೫೭ ||

ಸುಳಿವ ಹಸ್ತದ ಜಾತಿಭಾವದ |
ಬಳಿಯಲಾಡುವ ನೋಟ ನೋಟದ |
ಲುಳಿಯುವೊಲು ತೆಗೆದತ್ತ ತಿರುಗುವ ಕೊರಳು ಕೊರಳಂತೆ ||
ಬಳುಕುತಿಹ ನಡು ನಡುವಿನಂದಕೆ |
ಹೊಳೆವ ಪಾದದ ಪಾಡು ಪಾಡಿನ |
ನಿಲುಕಡೆಯ ನಿಱುಗೆಯಲಿ ಮೆಱೆದಳು ಮಾಯೆ ಲಾಸ್ಯದಲಿ || ೫೮ ||

ರತಿಯ ರೀತಿಯ ದಿವಿಜರಾಜನ |
ಸತಿಯ ಸರಣಿಯ[6] ಕಮಲಜನ ಭಾ |
ರತಿಯ ಭಾವವನಾದಿನಾರಾಯಣಿಯ ನಟಣೆಯನು ||
ಅತಿಶಯದ ಪಾರ್ವತಿಯ ಪಾವನ |
ಗತಿಯನೆಲ್ಲವ ತೋಱುತಿರ್ದಳು |
ಚತುರೆ ಮಾಯಾದೇವಿ ತನ್ನಯ ಲಾಸ್ಯಲೀಲೆ[7]ಯಲಿ || ೫೯ ||

ನೃತ್ತಿಕೆಯ ಮಾಟಕದ ರೂಹಿನ |
ಪುತ್ಥಳಿಗಳನು ದೇಗುಲಕೆ ನೆಱೆ |
ತೆ[8]ತ್ತಿಸಿದರೆಂಬಂತೆ ಮಾಯೆಯ ನೋಡುವರ್ತಿಯಲಿ ||
ಸುತ್ತಿ ಮುತ್ತಿ ಗವಾಕ್ಷರಂಧ್ರದ |
ಭಿತ್ತಿಯಲಿ[9] ನೆಱೆ ಕೀಲಿಸಿರ್ದರು |
ಚಿತ್ರಜಗೃಹ ಸೋಂಕಿದಂತಿರೆ ಕೂಡೆ ನೋಟಕರು || ೬೦ ||

---

೧ ನಯ ಪದ ( ಗ. ) ೨ ಮೋಹನ ( ಇ. ) ೩ ಕ ( ಉ, ಎ, ಗ. ) ೪ ಕ ( ಖ, ಗ, ಜ. ) ೫-೫ ವುತ|ಕಾ ( ಗ. ) ೬ ಸ್ಮೇರಣೆ ( ಇ. ) ೭ ಕೇಳಿ ( ಗ. ) ೮ ಹ ( ಎ, ಖ. ) ೯ ನೆ ( ಗ. )

ಮೇಳಗಾನಧ್ಯಾನದಿನಿದನು[೧] |
ಕೇಳಿ ಸಿಕ್ಕದರಾರು ಪಾತ್ರದ |
ಚಾಳಿಯಲಿ ಹೊಳೆವಂಗಭಂಗಿಯ ಕಂಡು ಮನಸಿಜಗೆ ||
ಕೋಳುಹೋಗದರಾರು ನರಸುರ |
ಜಾಳದೊಳಗೆಂದೆನಲು ರಂಜಿಸಿ |
ಬಾಲೆ ಮಾಯಾದೇವಿ ಮೆಱೆದಳು ಲಾಸ್ಯಕೇಳಿಯಲಿ || ೬೧ ||

ಹಲವು ಪರಿಗಳಲೀ ಪ್ರಕಾರ[೨]ದೊ |
ಲೊಲವಿನಲಿ ಸರ್ವೋಪಚಾರಂ |
ಗಳನು ವಿಸ್ತರವಾಗಿ ಮಾಡಿದ ಮಾಯೆಗುಚಿತದಲಿ[೨] ||
ಬಳಿಕ ಶಿವಲಿಂಗಪ್ರಸಾದದ |
ತಳಿತ ಹೂವಿನ ದಂಡೆಯನು ಕೋ |
ಮಲೆಗೆ ಕೊಟ್ಟನು ಹರಸುತಲಿ ಪೂಜಾರಿಪುಂಗವನು || ೬೨ ||

ತರುಣಿ[೩] ಶಿವಲಿಂಗಪ್ರಸಾದಕೆ |
ಶರಣೆನುತೆ ಕೈಕೊಂಡು ನಲಿದಾ |
ದರಿಸಿ ವಿರಚಿಸಿ ದೇವರೋಲಗವಾಗಿ[೪] ಕುಳ್ಳಿರ್ದು ||
ಇರುತಲಿರ್ದಳು ಬಳಿಕ ಸಚರಾ |
ಚರರೊಳಂತರಯಾಮಿಯೆನಿಸಿದ |
ಗುರು ಗುಹೇಶ್ವರ[೫]ನರಿದನಾಕೆಯ ಭಕ್ತಿಯನುಮತವ[೫] || ೬೩ ||

**ಅಂತು ಗತಿ ೪ಕ್ಕಂ ಪದ ೧೬೨ಕ್ಕಂ ಮಂಗಳಂ**

೧ ವನು ನೆರೆ ( ಗ. ) ೨–೨ ದ|ಲೊಲಿದು ಮಾಡುವ ಹಲವುಪಚಾ|ರಗಳ ಸಲೆ ವಿಸ್ತರಿಸಿ ಮಾಯಾದೇವಿಗುಚಿತವನು || ( ಇ. ) ೩ ವ ( ಜ. ) ೪ ಮಾಡಿ ( ಗ. ) ೫–೫ ನಿರ್ದನಾಕೆಯ ಭಕ್ತಿಭಾವದಲಿ ( ಇ. )

# ಪ್ರಭು ಮದ್ದಳೆಯ ಬಾರಿಸಿದ ಗತಿ

**ವಚನ**

ಕಡಲ ನುಂಗಿದ ಕಪ್ಪಿನ ಪರಿ ನವಸಾಸಿರ ಸಿಡಿಲು ಹೊಯ್ದು ಬಯಲಿಂಗೆ ಬಣ್ಣವುಂಟೆ |
ಕಂಗಳ ಮುಂದಣ ಕನಸು ಹಿಂಗದ ತುಂಬಿಯ ಪರಿಮಳ ಅಂಗವಿಲ್ಲದ ರೂಹಿಂಗೆ ಸಂಗವುಂಟೆ |
ಇದೇನೋ ಗಗನದ ಹಣ್ಣನೆ ಕೊಯ್ದು ಮುಗುದೆ ರುಚಿಯನರಿಯಳು |
ಹಗರಣದ ಹಮ್ಮಾವಿನ ಹಯನು ಸಯವಪ್ಪುದೆ ಗುಹೇಶ್ವರಾ ||

**ಸೂಚನೆ**

ಬಯಸಿ ಮಾಡಲು ಮಾಯೆ ಬರು[೧] ಭ |
ಕ್ತಿಯನು ನಟಿಸಿದನಾಕೆಯಲಿ ಸಂ |
ಶಯದ ಸಂಗವನಲ್ಲಮಪ್ರಭು ಮನುಜವೇಷದಲಿ ||

ಲಿಂಗಭಕ್ತರು ತಿಳಿವುದಿದನಾ |
ವಂಗದಲಿ ಶರಣರುಗಳಾದವ |
ರಂಗನೆಯರಳುಪಿಂಗೆ ನೆಱೆ ನಿರ್ಲೇಪವೃತ್ತಿಯಲಿ ||
ಸಂಗಿಯಂತಿರೆ ನಟಿಸಿ ತಾ ನಿ |
ಸ್ಸಂಗಿಯಾಗಿಹ ಪರಿಯನೀ ಪ್ರಭು |
ಲಿಂಗಲೀಲೆಯೊಳಾ ಸ್ವತಂತ್ರನ ಚಾರು ಚರಿತೆಯಲಿ || ೧ ||

ಇರಲು ಮಾಯಾದೇವಿ ಮಧುಕೇ |
ಶ್ವರನನೊ[೨]ಲಗಿಸುತ್ತ ಕಾಮಿಸಿ[೨] |
ವರ ವಿಧಾವಂತರ ಕಳಾಕೇಳೀವಿನೋದದಲಿ ||
ಪರಮನಂತರಿಯಾಮಿ ಕರುಣಾ |
ಕರನು ಸದಮಲ ಸಗುಣ ನಿರ್ಗುಣ |
ಭರಿತನಲ್ಲಮಲಿಂಗನಱಿದಿಂತೆಂದ ತನ್ನೊಳಗೆ || ೨ ||

---

೧ ಶಿವ ( ಅ, ಒ, ಕ, ಗ, ಮ. ) ೨–೨ ಲೈಸುವ ವಿಲಾಸದಿ ( ಟ. ) ; ಲಗಿಸುತ ವಿಲಾಸದಿ ( ಗ, ಚ, ಜ. )



ಬಳ್ಳಿಗಾಂವಿಯ ಪ್ರಭುದೇವರ ದೇವಾಲಯ

ಕಾಮಿತಾರ್ಥವನೀಯಬೇಹುದು |
ಕಾಮಿನಿಗೆ ತಾನವಳು ಕಾಮು |
ಪ್ರೇಮಭಕ್ತಿಯ ಮಾಡಿದದುಕಾರಣದಲೆಂದೆನುತ ||
ಆ ಮಹಾ ಮಹಿಮಸ್ವರೂಪ ಸ[೧] |
ನಾಮವನು ಮಱೆಮಾಡಿಯಭಿನವ |
ಕಾಮರೂಪಿನ ಪರಿಯನಲ್ಲಮಲಿಂಗ ಧರಿಸಿದನು || ೩ ||

ಕಂಗಳಲಿ ನಡೆ[೨] ನೋಡಿದೊಡೆ ಹೆಱೆ |
ಹಿಂಗಬಾರದ ಚೆಲುವ ಮುಖದ ಸು |
ರಂಗ ಸೂಸುವ ದಂತಪಂಙ್ತಿಯ ತೊಳಪ ಕಣ್ಣುಗಳ ||
ಅಂಗವಟ್ಟದ ಸರಳಿಕೆಯ ಹ |
ಸ್ತಂಗಳಂಘ್ರಿಯ ಕೋಮಳದ ಸ |
ರ್ವಾಂಗಭಂಗಿಯ ಸೌಮ್ಯತೆಯ ಧರಿಸಿದನು ಪ್ರಭುರಾಯ || ೪ ||

ಹೂಸಿದಂತಿರೆ ತೊಡೆದ ತುಪ್ಪುಳು |
ಮೀಸೆ ಮಿಂಚಿರಲುಟ್ಟ ಪಟ್ಟೆಯ |
ಕಾಸೆ ತೋಱುವ ಕನಕದುಡಿನೇವಳ ವಿರಾಜಿಸುತ ||
ಲೇಸೆನಿಪ ಹದಿ[೩]ನಾಲು ಹದಿನೆಂ |
ಟೈ[೩]ಸು ವರುಷದ ಹರೆಯವೆಂಬ ವಿ |
ಳಾಸವೇಷವ[೪]ನಲ್ಲಮಪ್ರಭುಲಿಂಗ ನಟಿ[೫]ಸಿದನು[೪] || ೫ ||

ತುಱುಬು ಚಿಮ್ಮುರಿ ಚಿಂದಿ ಕಾಸೆಯ |
ಸೆಱಗು ನಸುಹೊದೆದೊಲ್ಲಿ ಮಿಂಚುವ |
ಮಿಱುಪ ಸುಲಿಪಲ್ಲಸಿಯ ಸೆಳ್ಳುಗುರುಲಿವ ಹೊಂದೊಡರು ||
ಉಱುವ ಗಂಧದ ಲೇಪ ಬೆನ್ನೊಳು |
ಮೆಱೆವ ಮದ್ದಳೆಸಹಿತ ಬಂದೀ |
ತೆಱನನಲ್ಲಮ ನಟಿಸಿ ನಿಂದನು ವಿಕೃತವೇಷದಲಿ || ೬ ||

---

೧ ಪನು ( ಇ. ) ೨ ನೆರೆ ( ಗ, ಜ. ) ; ಳಿಂದಲಿ ( ಇ. ) ೩-೩ ನೈದುಹದಿನಾ|ರೈ ( ಇ. )
೪-೪ ಧರಿಸಿ ಬಂದನು ಮತ್ತೆ ಪ್ರಭುರಾಯ ( ಇ. ) ೫ ಧರಿ ( ಚ. )

ಎಡದ ಕಿವಿ[೧]ಯಲಿ ಮೆಱೆವ ರತ್ನದ |
ಕಡುಕು[೨] ತಾಯಿತ ಮಣಿಯ ಸರ [೩]ಹೆ |
ದ್ದೊ[೩]ಡರ ಸರಪಳಿಗಳಲಿ ನೇಲುವ ಬಾವುಲಿಯ ಬೊಂಬೆ ||
[೪]ಮುಡಿಯ ಹೊಸರ ಚುಕ್ಕೆ[೪]ಬೊಟ್ಟಿನ |
ಬೆಡಗುಸಹಿತವೆ ಧೂರ್ತವೇಷದ |
ತೊಡಹವನು ತೊಟ್ಟಲ್ಲಮಪ್ರಭು ಬಂದು ನಿಂದಿರ್ದ[೫] || ೭ ||

ಕೊರಳ ಮುತ್ತಿನ ಕಂಠಮಾಲೆಯ |
ವಿರಚಿಸುತ್ತಿಹ ಬಾಹುಪೂರದ |
ಬೆರಳಿನುಂಗುರಗಳ ವಿಳಾಸದ ಮಡಲ[೬] ವೀಳೆಯದ ||
ಧರಣಿಯೊಳು ಚೆಲುವಿಂಗೆ ತಾನೇ |
ಬಿರಿದ ಕಟ್ಟಿದನೆಂಬ ಸೊಬಗಿನ |
ಪುರುಷವೇಷದಲಲ್ಲಮಪ್ರಭುರಾಯನೆಸೆದಿರ್ದ[೭] || ೮ ||

ನಿಂದು ನಾನಾಪರಿಯ ವಹಣಿಗ |
ಳಿಂದ ತಾಳ ಸಮೇಳ ಸದ್ಗತಿ |
ಯಿಂದಲುಗ್ಘಡಣೆಯ ಗಡಾವಣೆಯಿಂದಲಲ್ಲಮನು ||
ಅಂದು ಮಧುಕೇಶ್ವರನ ಬಾಗಿಲ |
ಮುಂದೆ ಬಾಱಿಸುತಿರ್ದನೈ ಹಲ |
ವಂದದಲಿ ಮದ್ದಳೆಯ ಕೇಳುವರೆಲ್ಲ ಬೆಱಗಾಗೆ || ೯ ||

ಕಾರಮುಗಿಲಿನ[೮] ಗರ್ಜನೆಯ ಕಿವಿ |
ಯಾರೆ ಕೇಳುವ ಸೋಗೆಯಂತಿರೆ |
ಹಾರವಿಸುತಲಿಯಲ್ಲಮನ ಮದ್ದಳೆಯ ಧ್ವನಿಗೇಳ್ದು ||
ನಾರಿ ಮಾಯಾದೇವಿ ನಲಿಯುತ |
ದಾರು[೯] ಹೊಱಕಡೆಯಲ್ಲಿ ತುರಿಯೋ |
ದ್ಘಾರವನು ಮಾಡುವರೆನುತ ಕೇಳಿದಳು[೯] ಕೆಳದಿಯರ || ೧೦ ||

---

೧ ಕ್ಕೆ ( ಎ. ) ೨ ಕಡೆಯ ( ಎ. ) ೩-೩ ಹೊಂ|ದೊ ( ಅ, ಇ, ಉ, ಎ, ಗ. ) ೪-೪ ಬಿಡದೆಸೆವ ಕಸ್ತುರಿಯ ( ಕ. ) ೪ ಚೊಕ್ಕ ( ಖ, ಜ, ಮು. ); ತಿಲಕ ( ಅ. ) ೫ ಲಿಂಗ ನಟಿಸಿರ್ದ ( ಖ. ) ೬ ಬಾಯ ( ಖ, ಜ, ) ೭ ಬಂದು ನಿಂದಿರ್ದ ( ಉ. ) ೮ ನೇಘದ ( ಎ. ) ೯-೯ ಮದ್ದಳೆಯನು ಮಹಾಗಂ|ಭೀರವನು ಬಾರಿಸುವರೆನುತವೆ ಕೇಳೆ ( ಗ. )

ಕೆಳದಿಯರು ತಾವಱಿದು ಬಂದಾ |
ಗಳೆ ವಿಚಾರಿ[1]ಸಿ ಹೇಳಿದೊಡೆ ಕೋ |
ಮಳೆ ಮನೋಮುದದಿಂದೆ ಕರಸಿಯೆ ಕಂಡಳಲ್ಲಮನ ||
ಮೊಳೆತುವಾಕ್ಷಣ ಕಾಮಬಾಣದ |
ಹಿಳುಕುಗಳು ಹಿರಿದಾಗಿ ಚಿತ್ತಜ |
ನಳವಿಯಲಿ ಸಿಲ್ಕಿದಳು [2]ಮಾಯೆ ಮಹಾ[3]ನುರಾಗದಲಿ[2] || ೧೧ ||

ಆವ ದೇಶದ ಪುರುಷನೈ ನಿನ |
ಗಾವ ಹೆಸರೈ ನೀನು ನೆಲೆಗೊಂ |
ಡಾವ ಠಾವಿನಲಿಪ್ಪೆಯೈಯೆಂ[4]ದೆನುತ ವಿನಯದಲಿ ||
ಭಾವೆಯರು ಬಳಿಕಾತನನು ಸಂ |
ಭಾವಿಸುತ ಕೇಳಿದೊಡೆಯಲ್ಲಮ |
ದೇವನೊಲಿದಾ ಸತಿಯರಿಗೆ ನಸುನಗುತಲಿಂತೆಂದ || ೧೨ ||

ದೇಶವೆಮ್ಮದು ಹೇಳುವೊಡೆ ಪರ |
ದೇಶ ಬಿರಿದಿನ ಬಿಂಕಕಾಱರ |
ವಾಸಿಗರನಲ್ಲೆನಿಸುವಲ್ಲಮನೆಂಬ ಪೆಸರೆನಗೆ[5] ||
ಲೇಸುಮಾಡುವ ಠಾವುಗಳಲಭಿ |
ಲಾಷೆಯಿಲ್ಲದೆ[6] ಹೊದ್ದುವೆವು ಸುಖ |
ವಾಸಿಗಳು ನಾವೆಂದನಲ್ಲಮನೊಲಿದು[7] ಸತಿಯರಿಗೆ || ೧೩ ||

ಒಳ್ಳಿತಾಯಿತು ಕಾರ್ಯ ನೀನಿ |
ನ್ನಲ್ಲಿಗಲ್ಲಿಗೆ ಹೋಹ ಬುದ್ಧಿಯ |
ಸಲ್ಲವಿಡು [8]ಸುಖದಿಂದವೆ[8]ಮ್ಮೊಡತಿಯ ಸಮೀಪದಲಿ ||
ಬಲ್ಲ ವಿದ್ಯಾವಸ್ತುಗಳೊಳೆ |
ಮ್ಮೆಲ್ಲರೋಪಾದಿಯಲಿ ಮನಬಂ |
ದಲ್ಲಿ ನೀನಿಹುದೆಂದರಾ ಕಾಮಿನಿಯರಲ್ಲಮಗೆ || ೧೪ ||

---

೧ ರಾಜಿ ( ಕ, ಗ, ಚ, ಜ, ಟ, ಮ. ) ೨-೨ ಮಾಯಾದೇವಿ ಮನದೊಳಗೆ ( ಇ. ) ೩ ಸೋ ( ಅ, ಎ, ಖ, ಗ, ಜ, ಟ. ) ೪ ನೀಸೆಂ ( ಜ. ) ೫ ರಿನಲಿ ( ಕ. ) ೬ ಯಿಂದಲು ( ಒ, ಕ, ಮ. ) ೭ ನಗುತ ( ಜ. ) ೮-೮ ವುದು ನೀನು ನ ( ಜ. )

ಮನದ ಗಂಡೆಯ ತುಱಿಸಿದಂತಿರೆ |
ಮನಕೆ ಸಂತಸವಾದುದರಸನ |
ತನುಜೆಗದ ತಾ[1]ನಱಿದು ಹಡಪದ ಭೋಗಿಯೆಂಬವಳು ||
ವಿನಯದಿಂದಲ್ಲಮಗೆ ಬಳಿಕಲಿ |
ವಿನುತ ಹೊಂಬಟ್ಟಲಲಿ ಮಾಯಾಂ |
ಗನೆಯ ಕೈಯಲಿ ಕೊಡಿಸಿದಳು ಸಲೆ ಸಂತ ವೀಳೆಯವ || ೧೫ ||

ಆತನದ ಕೈಕೊಂಡು ನೋಡುವೆ |
ವೀ ತರುಣಿ ತಾನೇನು ಮಾಡುವ |
ಕೌತುಕವನೆಂದೆನುತ ವಿದ್ಯಾವಸ್ತು ತಾನಾಗಿ ||
ಪ್ರೀತಿವಟ್ಟವಸಂತೆ ನಟ್ಟುವ |
ಜಾತಿರೀತಿಯ ನಟಿಸುತಿರ್ದನು |
ಭೂತಳದೊಳೆಮ್ಮಲ್ಲಮಪ್ರಭು ತನ್ನ[2] ಲೀಲೆಯಲಿ || ೧೬ ||

ಶರಣೆನುತಲಾ ಮಾಯೆ ಮಧುಕೇ |
ಶ್ವರನ ಬೀಳ್ಕೊಂಡಾಗಳಾತನ |
ಕರೆದುಕೊಳುತೈತಂದು ತಂದೆಯ ಸಮ್ಮುಖವ ಮಾಡಿ[3] ||
ಅರಸನಱಿಕೆಯ ಮಾಡಿ ಮಿಗೆ ಬಳಿ |
ಕಿರಿಸಿಕೊಂಡಳು ನಾಗವಾಸದ |
ನೆರವಿ[4]ಬಿಂದದ ಬೋವಗಾಱಿಕೆತನದಲ[4]ಲ್ಲಮನ[5] || ೧೭ ||

ಹರುಷದಿಂದಲಿ ಕನ್ನೆಮಾಡದ |
ಪಿರಿಯ ಚೌಮಾಳಿಗೆಯಲತಿ ವಿ |
ಸ್ತರದಲೋಲಗಗೊಟ್ಟು ಕುಳ್ಳಿತು ಸಕಲ ವಿಭವದಲಿ ||
ಭರತವಿದ್ಯಾದ್ಯಖಿಲ ಕಳೆಗಳ |
ಪರಿಚರಿಯ ನೆವದಿಂದೆ ಮಾಯಾ |
ತರುಣಿ ಮನದೊಳು ಸೊಗಸಿ ಮಾತಾಡಿಸಿದಳಲ್ಲಮನ || ೧೮ ||

೧ ಗಾಡುಪ ( ಇ. ) ೨ ಲಿಂಗ ( ಗ, ಜ. ) ೩ ಸಲಿಸಿ ( ಅ. ) ೪-೪ ಗೊಪ್ಪುವ ಬಿಂದ ಬೋಗಾರಿಕೆಯಲ ( ಮ. ) ; ಯಲಿ ತಾ ಬಿಂದ ಜೋಗಾರಿಕೆಯಲ ( ಉ. ) ; ಯಲಿ ಬಿನ್ನಣದ ಬೊಂಗಾರಿಕೆಯಲ ( ಪ. ) ೪-೫ ಯಲಿ ಬಿಂದಕ್ಕೆ ಮುಖನಾಯಕನ ಮಾಡಿದಳು ( ಗ. )

ಮನದಲಾತುರವಿಹುದು ಬುದ್ಧಿಯು |
ಮೊನೆಗೆ ನಾಚಿಕೆ ಬಹುದು ನಗೆಗ |
ಣ್ಣಿನಲಿ ಕಳವಳವಿಹುದು ಕಾಯದಲಿಹುದು ನಸು ಭೀತಿ ||
ವಿನಯವಿಹುದೆಱಕದಲಿ ಜಿಹ್ವೆಯ |
ಕೊನೆಯಲಿಹುದನ್ಯಪ್ರಸಂಗತೆ |
ಯಿನಿತು ಮಾಯೆ[1]ಯಲಿ[2]ರ್ದುದಂ[1]ದ[2]ಲ್ಲಮನ ಬೇಟದಲಿ || ೧೯ ||

ಸುಧೆಯು ಸೋನೆಯು ಸುರಿಯುತಿಹ ಕಾ |
ಲದಲಿ ತೃಪ್ತಿಯನೆಯ್ದಲಱಿಯದೆ |
ಕ್ಷುಧೆಗೆ ತೃಷೆಗಳ ಮಾಡಿ ಕೋಟಲೆಗೊಂಬ ಮರುಳಂತೆ ||
ಮುದವನ[3]ಲ್ಲಮು ಕರುಣಿಸಿದ ಕಾ |
ಲದಲಿ ನಿತ್ಯವನಱಿ[4]ಯಲಱಿಯದೆ |
ಕುದಿದು ಕೋಟಲೆಗೊಳುತಲಿರ್ದಳು ಮಾಯೆ ಬೇಟದಲಿ || ೨೦ ||

ಕೆಬ್ಬದಿಯು ಕೀಲಿಸಿದ[5] ಕಾಮನ |
ನಿಬ್ಬರದ ಕೂರಂಬಿನಲಿ ತನು |
ವಿಬ್ಬರಿ[6]ವಪೊಲು ನಿಮಿಷ ಕುಳ್ಳಿರಲಾಱದಳವಳಿದು ||
ಉಬ್ಬರದ ಮದನಾಗ್ನಿ ಮೈಯನು |
ಹಬ್ಬಲೇಕಾಂತಕ್ಕೆ ಬಳಿಕೊ |
ಬ್ಬಿಬ್ಬರಾಪ್ತರು ಸಹಿತ ಹೊಕ್ಕಳು ಮಾಯೆ ಮನಸೋತು || ೨೧ ||

ಮಲಗನೆಮ್ಮುತ ಗದ್ದುಗೆಯ ಮೇ |
ಲೊಲಿದು ಕುಳ್ಳಿತು ತನ್ನ ಮನದಳ |
ಬಳವನೊಪ್ಪದೆ[7] ಸೂಚಿಸುವೆನಿನ್ನೋಜೆಯಿಂದೆನುತ ||
ಕಳವಳಿಸಿ ತರಹರಿಸಲಾಱದೆ |
ಬಳಿಕಲಲ್ಲಮುಗಾವ ಬೀಡಿನ |
ನೆಲೆಯ ಮಾಡಿದಿರೆನುತ ಸಖಿಯರ ಕೇಳಿದಳು ಮಾಯೆ || ೨೨ ||

---

೧-೧ ಯುಯಿರ್ದಳಂ ( ಇ. ) ೨-೨ ಪುದು ಪೊಬ್ಬ ( ಜ. ) ೩ ದಲ ( ಉ. ) ೪ ಪಡೆ ( ಇ, ಖ. ) ೫ ಜಕ್ಕುಲಿಸಿ ( ಅ, ಕ. ) ೬ ಬ್ಬಿರಿ ( ಮು. ) ; ಬ್ಬಗಿ ( ಇ. ) ೭ ಸೆಲ್ಲವ ( ಇ, ಉ. ) ; ನೊಯ್ಯನೆ ( ಎ, ಗ, ಜ. )

ಮಡದಿ ಮದನನ ಬಲೆಯ ಬಾಯಲಿ |
ತೊಡಕಿ ಬಿರ್ದುದನಱಿದರಾಗಳೆ |
ಯೊಡತಿ ನಿಮ್ಮಯ ಬಗೆಯ ಬಯಕೆಯ ನಾಚದೆನ್ನೊಡನೆ ||
ನುಡಿವೆಯಾದೊಡೆ ಬಳಿಕಲಲ್ಲಮ |
ಗೆಡೆಗುಡುವೆನೊಂದೆಡೆಯ ಬೀಡಿನ |
ಗು[೧]ಡಿಯನೆನುತಾ ಮಾಯೆಗಿಂತೆಂದರು ವಿದಗ್ಧೆಯರು || ೨೩ ||

ದೇವಿ ನಿಮ್ಮಯ ತನು ಮನೋಮಯ |
ಭಾವ ಕಾಮನ ಕೈಯ ಭಾರಿಯ |
ಹೂವಿನಂಬುಗಳಿಂದ ಮಾರ್ನೊನೆಗೊಂಡ ತೆಱನಂತೆ ||
ತೀವಿಕೊಂಡಿವೆ ಬಱಿಯ ಬೇಟದ |
ಬೇವಸದಲೆನ್ನೊಡನೆ ನಾಚದೆ |
ಭಾವೆ[೨]ಹೇಳೆನುತೊಡತಿಯನು ಕೇಳಿದರು ಕೆಳದಿಯರು[೨] || ೨೪ ||

ಎನಲು ಕನ್ಯಾಭಾವಭಂಗಿಯ |
ಮನದ ನಾಚಿಕೆಯೊಂದು ನೆಟ್ಟನೆ |
ಜನಪತಿಯ ಮಗಳೆಂಬ ಹೆಕ್ಕಳ ಹೆಮ್ಮೆ ತಾನೆರಡು ||
ತನಗೆ ಸಮ ಸಂಪ್ರಾಪ್ತ[೩]ನಲ್ಲದ |
ಮನುಜಗಳುಪಿದೆನೆಂಬ ಮಱವೆಯ |
ಘನತೆ ಮೂಱುವ[೪]ಕಳುಕಿ ನಾಚುತಲಿ[೪]ರ್ದಳಾ ಮಾಯೆ || ೨೫ ||

ಒಡತಿ ನುಡಿಯದೆ ನಾಚಿರಲು ಕ
ಗ್ಗಡಿತಿ ಸಕಳೆಯಿದೇನು ರಾಣಿಯ |
ನಡೆವ ನೋಡುವ ಹಾಡುವಾಡುವ ರೀತಿ ಹೊಸತಾಗಿ ||
ಬೆಡಗು ಬಿನ್ನಾಣಿಸಿತಿದೆತ್ತಣ |
ಗೊಡವೆಗೊಳಗಾಗಿದ್ದಳೆನುತಲಿ |
ಮಡದಿಯೊಲಿದು[೫] ಕಳಾವಿಳಾಸಿ[೬]ಯ ಕೇಳಿದಳು ಬಳಿಕ[೬] || ೨೬ ||

೧ ಗ ( ಇ. ) ೨-೨ ನೀ ಹೇಳೆನುತ ಮಾತನು ಕೇಳಿದರು ಬಳಿಕ ( ಇ. ) ೩ ಸತ್ಪಾತ್ರ ( ಜ. )
೪-೪ ಕಂಜ ಮನದೊಳಗಿ ( ಗ. ) ೫ ತಡೆಯದ್ದೈದಿ ( ಗ. ) ೬-೬ ನಿಯರನು ಕೇಳಿದಳು ( ಇ. )

ಹಲವು ಮಾತೇನೀ[1]ಕೆ ಕಾಮನ |
ಬಲೆಗೆ ಬಿದ್ದುದು ಸತ್ಯವಲ್ಲವು |
ಗಳುಪಿದುದು ದಿಟವವರಿವರನಿನ್ನೇನ ಕೇಳುವಿರಿ ||
ಹೊಲಬಿದಾದೊಡೆ ತಪ್ಪದೆನುತಲಿ |
ತಿಳಿಯನುಡಿದಳು ಸಕಳೆಗೊಡತಿಯ |
ನೆಲೆಯನಱಿದು ಕಳಾವಿಳಾಸಿನಿ ತನ್ನ ಸನುಮತವ || ೨೭ ||

ಆ ನುಡಿಯನಾಲಿಸುತ ಮಾಯಾ |
ಮಾನಿನಿಯ ಮೊಗವಲರಿ ಸಲೆ ಸು |
ವ್ಮಾನಸದಲಿ ನಸುನಗುತ ನಾಚುವ ಭಾವಭಂಗಿಯನು ||
ಆ ನಿತಂಬಿನಿಯರು ನಿಧಾನಿಸು |
ತೇನು ಹುಸಿಯಲ್ಲೆನುತ ಶ್ರುತದೃ |
ಷ್ಟಾನುಮಾನದಲಱಿ[2]ದರಲ್ಲಮುಗಾಕೆಯೊಲಿದುದನು[2] || ೨೮ ||

ಈ ಕುಮಾರಿಯ ತಿಳಿ[3]ವೆವೆಂಬುದ |
ದೇ[3]ಕೆ ಕಾಣಲು ಬಂದ ಕಾರಿಯ |
ವಾ ಕಳಾವಿದನನು ವಿಚಾರಿಸಬೇಕು ನಾವೆನುತ ||
ಆಕೆಯರು ಮದಮಾನಿಯೆಂಬ ವಿ |
ವೇಕಿಯನು ಕಳುಹಿದರೆ ಬಂದಳ |
ನೇಕ [4]ಚದುರಿನ ಚಪಳ[4]ತನದಲಿಯಲ್ಲಮನ ಬಳಿಗೆ || ೨೯ ||

ನಾರಿ ಬಂದುದನಱಿದು ಮೊದಲೇ |
ದಾರಿದೋಱುವೆ ನಾನೆನುತ ಬೀ |
ಡಾರಕಿ[5]ನ್ನಾವೆಯ್ದುಬೇಹುದು ನಮ್ಮನಱಸಿದೊಡೆ[5] ||
ನಾರಿ ನೀ ನೀ[6] ಹದನ ಹೇಳು ಕು |
ಮಾರಿಗೆನುತವೆ ನಿಜವಿನೋದವಿ |
ಚಾರದಿಂದಲಿ ನುಡಿದನಾ ಮದಮಾನಿಗಲ್ಲಮನು || ೩೦ ||

---

೧ ತಿನ್ನೀ ( ಇ, ಉ, ಋ, ಜ. ) ; ತೇಕೀ ( ಗ. ) ೨-೨ ದು ಪೇಳಿದರಲ್ಲಮನ ಪರಿಯ ( ಇ. ) ೩-೩ ವುದದುಯಿ|ನ್ನೀ ( ಇ. ) ೪-೪ ಹವಣಿಯ ಚದುರ ( ಇ. ) ೫-೫ ನ್ನೈದುವೆವು ನಮ್ಮನು ಅರಸಿ ಕೇಳಿದೊಡೆ ( ಇ. ) ೬ ನೇ ( ಗ. )

ನಿನಗೆ ಸಾ[೧]ಕಿನ್ನೇಕೆ ಬೀಡಿನ |
ಮನೆ ವೃಥಾ ಬೇಱೊಂದು ಸಕಂ |
ಲ್ಪನೆಯ ಬಿಡು ನಮ್ಮೊಡತಿಯಾದೊಡೆ ಮುಟ್ಟೆ ಮೋಹದಲಿ ||
ನಿಮಗೆ ಕೃಪೆ[೨]ಯಾಗಿರ್ದಳೆ[೨]ಮ್ಮರ |
ಮನೆಯೊಳಿರು ಸುಖಿಯಾಗಿ ನೀನೆಂ |
ದೆನುತ ನಯದಲಿ ನುಡಿದಳಾ ಮದಮಾನಿಯಲ್ಲಮಗೆ || ೩೧ ||

ನಾವು ಪರದೇಶಿಗಳು ಬಡವರು |
ನೀವು ದೊರೆಗಳು ಮೇಲೆ ನಿಮ್ಮಯ |
ದೇವಿ ರಾಜಕುಮಾರಿ ನಾವೇ ಪುರುಷವೇಷಿಗಳು ||
ನೀವು ಸತಿಯರು ನಿಮ್ಮೊಳಿಹುದೆಮ |
ಗಾ[೩]ವ ಮರಿಯಾದೆಗಳು[೩] ದೂರದ |
ಸೇವೆ [೪]ತಾ ನಮಗುಚಿತ[೪]ವೆಂದನು ನಗುತಲಲ್ಲಮನು || ೩೨ ||

ಕೂಡೆ ತಾ ಪತಿಕರಿಸಿ ಮರಳಿದು[೫] |
ಮಾಡಬಲ್ಲಳೆ ಮಾಯೆ ಭೇದವ |
ನೋಡು ನೀನೀಗಿರುತಿರುತಲಿನ್ನಾಕೆಯಂಗವನು ||
ಆಡಿ ತೋಱಲದೇಕೆ ನೀ ಕೈ |
ಗೂಡಿ ಕಾಬುದು ನಿನಗೆ ನಾವೆನು
ತಾಡುತಿರ್ದಳು ಹಲವು ಬಿನ್ನಣ ಮಾತನಲ್ಲಮಗೆ || ೩೩ ||

ಆದೊಡೇನೌ ನಿನ್ನ ಮಾತಿನ |
ಭೇದ ಬೇಱೊಂದಾಗಿಯೆನ್ನೊಳು |
ವೇದಿಸುತ್ತಿದೆ ನುಡಿಯಲಮ್ಮೆವು ನಿನಗೆ ಮನದೆಱೆದು[೬] ||
ಆವರಿಸುವೊಡೆ ಕೇಳುವೊಡತಿಯ |
ರಾದವರ ದೂರದಲಿ ಸೇವಿಸಿ |
ಹೋದೊಡೆಮಗದು ಸೌಖ್ಯವೆಂದನು ನಗುತಲಲ್ಲಮನು || ೩೪ ||

---

೧ ಯೇ ( ಇ. ) ೨ ಮಾಡಿದಳು ನ ( ಜ. ) ೩-೩ ವುದುಚಿತವು ನೋಡಿ ( ಗ. ) ೪-೪ ನಮಗದು ಸೌಖ್ಯ ( ಗ. ) ೫ ನಿನ್ನನು ( ಜ. ) ೬ ದಿರವ ( ಜ. )

ನಗೆಯ ಮಾತಲ್ಲಣ್ಣ ಮಾಯೆಯು |
ಬಗೆಗೆ ನಿನ್ನನು ಸೇವಕಾವೃ |
ತ್ರಿಗಳೊಳೆಣಿಸುವ ಪರಿಯ ಕಾಣೆನು ನಿನ್ನ ತನ್ನಿಂದ ||
ಮಿಗಿಲು ಮಾಡುವ ಪರಿಯಲಿದ್ದಳು |
ಹಗಲಿರುಳು ಹಂಬಲಿಸಿ ಕೇಳ್ವೈ[೧] |
ಬೆಗಡುಗೊಳ್ಳದಿರೆನುತ ಬೋಳೈಸಿದಳು ಮದಮಾನಿ || ೩೫ ||

ಸೇವಕರ ಮೇಲೆಱಕವಿದ್ದೊಡೆ |
ಭಾವೆ ತಪ್ಪೇನೊಡತಿಯಾದವ |
ರೋವಿ ಸಲಹಲು[೨] ಮೋಹ ಮಾಡುವರವಱಂಗದು ಸಹಜ ||
ನಾವು ನಮ್ಮಯ ಸೇವಕಾಂಗದ |
ಭಾವದಿಂದಿರಬೇಕೆನುತ ನಾ |
ನಾ ವಿಧದ ಘಾಳಕತನಂಗಳ ನುಡಿದನಲ್ಲಮನು || ೩೬ ||

ಸಾಕು ಜಾಣಿನ ಮಾತು ಮಱೆ |
ಯಿನ್ನೇಕೆ ನಿನ್ನೊಳು ಮಾಯೆ ಕಾಮೋ |
ದ್ರೇಕದಲಿ ನೆಱೆ ನಿನಗೆ ಸೋತಳು ಹಲವು ಮಾತೇನು ||
ಲೋಕದೊಳು ನರ ದಿವಿಜ ದನುಜರ |
ನೇಕರನು ಬಗೆಗೊಂಡು ಲೆಕ್ಕಿಸ |
ದಾಕೆ ತಾನೇ ಸೋತಳೈ ನಿನಗೆಂದವಳಲ್ಲಮಗೆ || ೩೭ ||

ನೀವೆ ಬಲ್ಲಿರಿ ನಿಮ್ಮ ಮಾಯಾ |
ದೇವಿಯಂತಸ್ಥವನು ಹೊಸಬರು |
ನಾವು ಬಲ್ಲೆವೆಯಂತುಕಾರಣ ಮನಸು ಬಂದಂತೆ ||
ನೀವೆ ಮಾಡುವುದೆಮ್ಮ ಕೇಳುವು |
ದಾವುದುಂಟೆಂದೆನುತಲಲ್ಲಮ |
ದೇವನಾ ಮದಮಾನಿಗೆಂದನು ಬಳಿಕ ನಸುನಗುತ || ೩೮ ||

---

೧ ಕೇಳ್ವಳು ( ಉ. ) ; ಸುತ್ತೈದಳೆ ( ಜ. )  ೨ ಹುವ ( ಇ, ಜ. )

ಆವ ಶಕುನವ ತಿದ್ದಿಕೊಂಡೆಲೆ |
ಭಾವ ಬಂದೆಯೊ ಅಲ್ಲದಿರ್ದೊಡ |
ದಾವ ಮೋಹನ ವಶ್ಯ[1]ವಿದ್ಯೆಯ ಕಲಿತೆಯೋ ದಿಟಕೆ ||
ದೇವಿಯನು ನೀ ಮರುಳುಮಾಡಿದೆ |
ಜಾವಳಿಗನಲ್ಲೆನುತ ಬಂದಳು |
ಭಾವೆ ನಗುತಲ್ಲಮನ ಬಳಿಯಿಂದೊಡತಿಯಿದ್ದೆಡೆಗೆ || ೩೯ ||

ಇತ್ತಲಾಗಳೆ ತೋಳು ತೊಡೆ ತುಟಿ |
ವೃತ್ತಕುಚ ಕೊರಳರಳುಗಂಗಳು |
ಕೆತ್ತುತಿದ್ದುವು ಮಾಯೆಗಿಷ್ಟಿಯ ಫಲವ ಸೂಚಿಸುತ ||
ಚಿತ್ತದಲಿ ಹಾರೈಸಿ ನಗುತಲು |
ಮತ್ತೆ ಸುಮ್ಮಾನದಲಿ ಬಂದಳು |
ಮತ್ತಗಜಗತಿಯಿಂದಲಾ ಸಮಯದಲಿ ಮದಮಾನಿ || ೪೦ ||

ಏನು ನಿನ್ನಯ ಮುಸುಡ[2] ಚೇಷ್ಟೆ ಸು |
ಮಾನವನು ಸೂಚಿಸುತಲಿದೆ ಬಳಿ |
ಕೇನ ಮಾಡಿದೆ ಹೇಳು ಕಾರ್ಯದ ಹದನ ನೀನೆ[3]ನಲು ||
ಆ ನಿತಂಬಿನಿಯಲ್ಲಮನ ಮಿಗೆ |
ತಾನೊಡಂಬಡಿಸಿದುದನೆಲ್ಲವ |
ನೂನವಿಲ್ಲದೆ ಹೇಳಿದಳು ಮದಮಾನಿ ವಿಸ್ತರಿಸಿ || ೪೧ ||

ನೀನಹುದು ಸಂಮೋಹನದ ಸಂ |
ಧಾನವಿದ್ಯಾಜಾಣೆಯೆನುತಾ |
ಮಾನಿನಿಯರುಗಳೊಲಿದು ಮಾಯಾಂಗನೆಯ ಕೈಯಿಂದೆ ||
ಆ ನಿತಂಬಿನಿ ದಣಿವವೊಲ್ ಸ |
ನ್ಮಾನಿಸುತ ಸಂತೋಷದಲಿ ಮದ |
ಮಾ[4]ನಿಗುಚಿತದ[4]ಲೀ[6]ಸಿ[5]ಕೊಡಿಸಿದರಂಗಚಿತ್ರವನು[5] || ೪೨ ||

---

೧ ವಸ್ತು ( ಜ. ) ೨ ಮನದ ( ಜ. ); ಮುಖದ ( ಕ. ) ೩ ನೆಂದೆ ( ಗ. ) ೪-೪ ನಿಸಿಗ ಹರುಷದಲಿ ( ಇ. ) ೫-೫ ಲಂಗವಟ್ಟವ ಕೊಟ್ಟಳಾಮಾಯೆ ( ಜ. ) ೬ ವನೀ ( ಉ. )

ಕಱುಬರಾದ ಕನಿಷ್ಟರಿಂತಿದ |
ನಱಿದರಾದೊಡೆ ಭೂಮಿಪಾಲಂ |
ಗಱುಹುವರು ಬಳಿಕರಸನೀ ಸೋಹೆಯನು ಕೇಳಿದೊಡೆ ||
ಅಱಿಯಬಾರದು ಮತ್ತೆ ಕಾರ್ಯದ |
ತೆಱನು[೧] ಹೇಗಹುದೆಂದೆನುತ್ತಲಿ |
ನೆಱೆ ವಿಚಾರಿಸಿ ಗುಪ್ತವನು ಮಾಡಿದರು ಕೆಳದಿಯರು || ೪೩ ||

ಅಂದಿನಿರುಳಿನಲಾರುವಱಿಯದ |
ಛಂದದಿಂದಲಿ ಬಳಿಕ ಸಜ್ಜಾ |
ಮಂದಿರಕೆ ಸಡಗರಿ[೨]ಸಿ ಮಾಯೆಯನಲ್ಲಮನನೊಲಿದು ||
ತಂದು ಬಿಜಯಂಗೆಯ್ಸಿದರು ಬಳಿ |
ಕಿಂದುಮುಖಿಯರು ತಮವ ತರಣಿಯ |
ನೊಂದು ಮಾಡುವೆವೆಂಬ ಭಾವಭ್ರಮಿತಬುದ್ಧಿಯ[೩]ಲಿ || ೪೪ ||

ನೆಲಿಸಿ ಮಿಂಚಿನ ಮಿಡುಕಿ[೪]ನೊಲು ಕಂ |
ಗಳಿಗೆ ತೋಱುವನಲ್ಲದಪ್ಪಿಗೆ |
ನಿಲುಕನಂಬರದಂತೆ ಸೋಂಕಿಹನಲ್ಲದನುರ[೫]ತಿಗೆ ||
ಉಲುಕನಕ್ಷರ[೬]ದಂತೆ ಬಾಯೊಳು |
ನಲಿವನಲ್ಲದೆ ಚುಂಬನಕೆ[೬] ತಾ |
ಸಿಲುಕನಲ್ಲಮನೀ ಪರಿಯ ನಟಿಸಿದನು ಮಾಯೆಯಲಿ || ೪೫ ||

ಬಯಲ ಚಪ್ಪಱಿವಂತೆ ಚುಂಬನ |
ಬಯಲನಪ್ಪುವವೊಲು ಸಮಪ್ಪಿ[೭]ಕೆ |
ಬಯಲನೀಕ್ಷಿಸುವಂತೆ ನೋಟದ ಕೂಟದನುಭವಣೆ ||
ಬಯಲುಗೊಂಡುವು ಭಾವಿಸಲು ನಿ |
ರ್ವಯಲಿನಲ್ಲಮಗೋ[೮]ತ ಕಾರಣ |
ಬಯಲ ಬಿಹ್ವದ[೯] ಬಲೆಗೆ ಬಿದ್ದಳು ಮಾಯೆ ಸುರತದಲಿ || ೪೬ ||

---

೧ ಸೆರವು ( ಜ. ) ೨ ನಡೆಗೊಳಿ ( ಜ. ) ೩ ಚಿತ್ತ್ರದ ( ಇ. ) ೪ ಮಿನುಗಿ ( ಇ, ಎ. ) ೫ ಗ ( ಎ, ಒ, ಕ, ಜ. ) ೬–೬ ದಳತೆ ಬಾಯೊಳು|ಸಲುವನಲ್ಲದೆ ಭಂಜನೆಗೆ ( ಜ. ) ೭ ಪ್ಪಿ ( ಮು. ) ೮ ಗೊಲಿ ( ಜ, ಮು. ) ೯ ಬಿಮ್ಮನ ( ಇ. )

ಮಳೆಗೆ ನೆನೆವುದೆ ಗಾಳಿ ಬೀಸಿದೊ |
ಡೊಲೆವುದೇ ಬಲುಗಿಚ್ಚಿನುರಿಯಿಂ |
ದಳಿವುದೇ ನಭವಾಪರಿಯ ಬಯಲುಗನು ತಾನಾಗಿ ||
ಕಳವಳದ ವಿಷಯಗಳ ವ್ಯಸನಗ |
ಳೊಳಗೆ ಸಿಕ್ಕುವನಲ್ಲವಾತನ |
ಹೊಲಬು ತಾ ಬೇಱೊಂದು ಪರಿಯೇನೆಂಬೆನಲ್ಲಮನ || ೪೭ ||

ಜಗವನೇಡಿಸಿ ಕಾಡುವಾ ಮಾ |
ಯೆಗೆ ನವೀನವೆನಿಪ್ಪ ಮಾಯಾ |
ವಿಗನು ತಾನೆಂಬಂತಿರಲ್ಲದ[1] ಬಯಲ ಬಗೆಗೊಳಿಸಿ ||
ಅಗಲದಂತಿರಲಿದ್ದು ಸುರತದ |
ಸೊಗಸಿಗಿಲ್ಲದೆ ಸುಳಿದನಾತನ |
ಬಗೆಯನಂತಿಂತೆಂದು ಬಲ್ಲವರಿಲ್ಲವಲ್ಲಮನ || ೪೮ ||

ಅಕ್ಕಟಕ್ಕಟ ಈತಗಳುಪಿದ |
ಕಕ್ಕುಲತೆ ಕೈಸಾರಿತಲ್ಲದೆ |
ಹೊಕ್ಕು ಮೈಕೈಗೂಡಿ ಸುರತಸುಖಾತಿರೇಕದಲಿ ||
ಒಕ್ಕಲಿಕ್ಕಿ ಸಮಸ್ತ ಭೋಗವ |
ಮಿಕ್ಕು ಸವಿಯದೆಯೆನ್ನ ಭಾವನೆ |
ಮುಕ್ಕಿ[2] ಹೋದುದೆ ಎನುತ ಮನದೊಳು ಮಱುಗಿದಳು ಮಾಯೆ || ೪೯ ||

ವನಿತೆ ಬೆಱಗಾಗಿರ್ದಳಲ್ಲಮ |
ತನಗೆ ರೂಹಿಸಿ ಸುರತಸುಖಭಾ |
ವನೆಗೆ ಬಾರದೆ ಬಯಲುಗೊಂಡಿರೆ ಸುಯ್ದು ಮಱೆದೊಱಗಿ ||
ಕನಸ ಕಂಡಂತಾಗಿ ಬಳಿಕಾ |
ದಿನದ ಮಱುದಿವಸದಲಿ ತನ್ನಯ |
ಮನವೊಲಿದು ನಿಜಸಖಿಯರೊಳಗಿಂತೆಂದಳಾ ಮಾಯೆ || ೫೦ ||

೧ ಮ ( ಗ, ಜ. ) ೨ ಮಿಕ್ಕಿ ( ಇ. )

ನೋಡಿದೊಡೆ ರೂಪಾಗಿರಲು ಮೈ |
ಗೂಡಲಿಕೆ ಸೋಂಕಿಲ್ಲದಿರ್ದೊಡೆ |
ನೋಡಿ ನಾ ಬೆಱಗಾಗಿ ಮಱೆದೊಱಗಿರಲು [೧]ಮನದೊಳಗೆ ||
ಕೂಡುವಂತಿರಲೆನಗೆ ಮೋಹವ |
ಮಾಡುವಂತಿರೆ ಕಂಡೆ ಕನಸನು |
ನೋಡಿದಿರೆಯಲ್ಲಮನ ನಟಣೆಯನೆಂ[೧]ದಳಾ ಮಾಯೆ || ೫೧ ||

ಮರುಳುಗೊಂಡಂತೆನಗೆ ಮೋಹದಿ[೨] |
ಬೆರಳುಗಳನೊಲಿ[೩]ದಿತ್ತು [೪]ಕೀಲಿಸಿ |
ಯಿ[೪]ರುಳು ಹಗಲೆಡೆವಿಡದೆ ಕಾದಿ[೫]ರುತಿರ್ದನೆಂಬಂತೆ ||
ಹಿರಿಯ ಕನಸನು ಕಂಡೆ ನಾ[೬]ನಿ |
ನ್ನಿರುಳೊಳಿ ಪರಿಯೆನುತ ಮಾಯಾ[೬] |
ತರುಣಿ ವಿಸ್ತರಿಸಿದಳು ತನ್ನಯ ಕೆಳದಿಯರ ಕೂಡೆ || ೫೨ ||

ಸುರತಸು[೭]ಖದಲಿ ಮುಂದುಗೆಡದಿಹ |
ಪುರುಷನಿವನಿನ್ನಾರೊ ಸತಿಯರ |
ಸರಸಪಾಶಕೆ ತೊಡಕಿ[೮]ಲ್ ಬೀಳದ ಮಹಿಮನಿವನಾರೊ ||
ಪರಿಕಿಸುವೊಡಲ್ಲಮನ ಭೇದಿಸ |
ಲರಿದಲಾ ಎಂದೆನುತ ಮಾಯಾ |
ತರುಣಿಗಾ ಕೆಳದಿಯರು ಬಳಿಕಿಂತೆಂದರೊಲವಿನಲಿ || ೫೩ ||

ಇದಿರುಗನಸಿದು ಲೇಸು ನಿನಗ |
ಭ್ಯುದಯವನು ಸೂಚಿಸುವುದೆನುತಲಿ |
ಸುದತಿಯರು ಮಿಗೆ ಕನಸ ಮುಱಿದರು ಮನಸುಬಂದಂತೆ ||
ಅದನು ಕೇಳುತೆ ಮತ್ತೆ ಮಱುಕಳಿ |
ಸಿದುದು ನೆಱೆಯಲ್ಲಮನ ಬೇಟದ |
ಕುದಿಹ ಮಾಯೆಯ ತನು ಮನಂಗಳ ಕಂದಿ ಕುಂದಿಸುತ || ೫೪ ||

---

೧–೧ ಮನೆಯೊಳಗೆ||ನಡುವಿರುಳು ಬಂದೆನ್ನ ರಮಿಸಿದ ನುಡಿದು ನಾನಾ ಸ್ನೇಹ ಮೋಹದಿ|ಬೆಡಗಿನಲ್ಲಮ ಕನಸಿನೊಳಗಿಂತೆಂ ( ಜ. ) ೨ ಮೂಗನು ( ಗ, ಖ, ಚ. ) ೩ ನರಿ ( ಉ, ಕ, ಖ, ಮು. ) ೪–೪ ಕೀಳಿಲೊ|ಳಿ ( ಕ. ) ೫ ಕೂಡಿ ( ಇ. ) ೬-೬ ನದ|ನರಿಯಲರಿಯೆನು ಇದರ ಮಹಿಮೆಯ ( ಇ. ) ೭ ಸು ( ಒ, ಖ, ಗ, ಜ. ) ೮ ರಿ ( ಉ, ಮು. )

ಅಂದು ಬಳಿಕಾ ಹದನನಾಗಳೆ |
ತಂದು ನೆಱ[೧]ಹಲು ಕೆಲರು[೨] ಭರವಸ |
ದಿಂದ ಮೋಹಿನಿದೇವಿ [೩]ತನ್ನಯ ಮಗಳ ಮಂದಿರಕೆ ||
ಬಂದು[೩] ತಾನೇಕಾಂತದಲಿ ನಿಜ |
ನಂದನೆಯನಾಪ್ತೆಯರ[೪] ಕರೆದಿಂ |
ತೆಂದು ನುಡಿದಳು ತಾನು ಕೇಳಿದ ಗುಪ್ತವಾರ್ತೆಯನು || ೫೫ ||

ಮಗಳೆ ನೀ ನಿನಗಲ್ಲ[೫]ದಿರ್ದೋ |
ಜಗಳ ನಡೆ[೫]ವರೆ[೬] ರಾಜಕುಲದಲಿ |
ನಗೆಗೆಡೆಯ ಮಾಡುವರೆ ನಿಮ್ಮಯ ತಂದೆ ಕೇಳಿದೊಡೆ ||
ಸೊಗಸುವನೆ ಮಿಗೆ ಮುನಿ[೭]ವವರ[೮] ಮಾ |
ತುಗಳಿಗಾಸ್ಪದವಹರೆ ಅಕಟಾ |
ನೆಗಳಲಹುದೇ ಪುರುಷಸಂಗವನೆಂದಳಾ ಜನನಿ || ೫೬ ||

ನೀತಿಯುಱ[೯]ಯುದೆಯಾನು ಮೊದಲಲಿ |
ಕಾತರಿಸಿದುದದೊಂದು ಭಾವಿಸ |
ಲಾತ ಸುರತದಲಂಗಸಂಗಕೆ ಸಿಕ್ಕದಿಹುದೊಂದು ||
ಮಾತೆ ಕೇಳಿದುದೊಂದು ನಮಗಿ |
ನ್ನೇತಱದು ನುಡಿಯೆನುತ ಲಜ್ಜೆಯ |
ಭೀತಿಯಲಿ ಬೆಂಬಿದ್ದು[೧೦] ಮೌನದೊಳಿರ್ದಳಾ ಮಾಯೆ || ೫೭ ||

ತರಳೆ ನೀನಕಟೇನ ಮಾಡುವೆ |
ದುರುಳರಿವದಿರು ನಿನ್ನ ತೊತ್ತಿರು |
ಮರುಳು ಮಾಡಿದೊಡೊಲಿದೆಯ್ದೈಸಲೆ ಎನುತ ನಿಜಸುತೆಯ ||
ಕರುಣದಲಿ ಮೋಹದಲುಪೇಕ್ಷೆಯ |
ಭರದಲಾಕೆಯನೇನುವೆನ್ನದೆ |
ಮುರಿದು ಮೋಹಿನಿದೇವಿ ನೆಱೆ ನೋಡಿದಳು ಕೆಳದಿಯರ || ೫೮ ||

---

೧ ಹರ ( ಜ. ) ೨ ಕೇಳಿ ( ಎ. ) ೩-೩ ತನುಜೆಯ ಮಂದಿರಕೆ ಬಂದು|ನಿಂದು ( ಜ. ) ೪ ಮುದದಿಂದೆ ( ಇ. ) ೫-೫ ದೋಜೆಯ|ನೆಗಳಲಹುದೇ ( ಇ. ) ೬ ನೆನೆ ( ಎ. ) ೭ ನಗು ( ಎ. ) ೮ ನೆಲೆ ( ಇ. ) ೯ ಗತಿ ( ಗ. ) ೧೦ ಬೆಂದಿರ್ದು ( ಮು. ) ; ಬೆದೆಬೆಂದು ( ಇ. )

ಅರಸಿ ನುಡಿದೊಡೆ ನಾವು ಪ್ರತ್ಯು |
ತ್ತರವ ಬಿನ್ನಹ ಮಾಡಬಾರದು |
ತರುಣಿ ತಾನಲ್ಲಮನ [1]ಕಾಣುತ ಕಾಮ[1]ತಾಪದಲಿ ||
ಮರುಳುಗೊಂಡಾತಂಗೆ ಮೋಹಿಸಿ |
ಹರಣಮಾತ್ರವನುಳುಹಿಕೊಂಡಳು |
ಹಿರಿದು ಮಾತಿನ್ನೇತಕೆಂದರು ಕೂಡೆ[2] ಕೆಳದಿಯರು || ೫೯ ||

ಅಕಟ ಮಗಳಿಗಿದಾವ ದೆಸೆಯಲಿ[3] |
ವಿಕಳ ಬಂದುದೊ ಬಱಿದೆ [4]ಬಹು ಸೇ |
ವಕರಿರಲು ಸಲೆ[5] ಸಂತವಿಟ್ಟರಿದೆ[4]ತ್ತಣಲ್ಲಮನ ||
ಸಕಳೆ[6] ಬುದ್ಧಿಯ ಬಲ್ಲೆ ನೀನೇ |
ತಕೆ ವಿಚಾರಿಸದಾದೆಯೆನುತಾ |
ಸಕಳೆಯನು ಮರುಳಾ[7]ಡುತಿರ್ದಳು ಮೋಹಿನೀದೇವಿ || ೬೦ ||

ಮನುಜದೇಹವಪೂರ್ವವದಱೊಳು |
ಜನಪತಿಯ ಸುತೆಯಹುದಪೂರ್ವತೆ |
ಯಿನಿತಱೊಳು ಪಟುವಾಗಿ ಸಕಲ ಸುಖಂಗಳ[8]ನು ತಿಳಿ[8]ದು ||
ಅನುಭವಿಸುವುದಪೂರ್ವವದಱಿಂ |
ಮನಸು ಬಂದಂತಿರಲಿ ಮಾಯಾಂ |
ಗನೆಯದೇತಕೆ ಕಾಹು ಕಟ್ಟಳೆಯೆಂದಲಾ ಸಕಳೆ || ೬೧ ||

ಅಹುದು ತನುವುಳ್ಳಲ್ಲಿ ಸುಖದಿಂ |
ದಿಹುದು ಬಳಿಕಲಿ ಬಯಸಿ ಬಾತೊಡೆ[9] |
ಬಹವೆಯದುಕಾರಣದಲಾತ್ಮಜೆ ಮನಸು ಬಂದಂತೆ ||
ಬಹಳ ಭೋಗವ ಕೊಳಲಿಯೆನುತಾ |
ಗ್ರಹವನೀಡಾಡಿದಳು ನೀವೇ |
ನಹಿತರೇ ಎನುತವರನುಪಚರಿಸಿದಳು ನೃಪರಾಣಿ || ೬೨ ||

---

೧-೧ ಕಾಮಾತುರದ ( ಇ. ) ೨ ನೆರೆದ ( ಜ. ) ೩ ಕಡೆಯಿಂ ( ಇ. ) ; ದೆಸೆಯಣ ( ಎ. ) ೪-೪ ಭಾವಿಸಿ|ಸಕಲರರಿಯಲು ಸಂತವಿಟ್ಟಳುಯೆ ( ಇ. ) ೫ ರದೆಲ್ಲರು ( ಜ. ) ೬ ಲ ( ಇ. ) ೭ ಮರೆದಾ ( ಇ. ) ೮-೮ ಲಿ ಬೆಳೆ ( ಗ. ) ೮ ಸವಿ ( ಇ. ) ೯ ಬರುದೆಗೆ ( ಇ. )

ಅರಸನನಱಿಯದ ತೆಱನಲಿದನಾ |
ಚರಿಸುವುದು ನೀವೆನುತ ಭಾವಿಸೆ |
ಮರುಳರೇ ನಿಮ್ಮಿಂದ ಬಲ್ಲವರಾರು[೧] ಧಾತ್ರಿಯಲಿ ||
ಇರುತಲಿರಿ ನಿಮ್ಮಿಚ್ಛೆ ಬಂದಾ |
ಪರಿಯಲೆನು[೨]ತಾ ರಾಣಿ ತಾ[೨] ತ |
ನ್ನರಮನೆಗೆ ಹೋದಳು ಕುಮಾರಿಯನೊಲಿದು ಮನ್ನಿಸುತ || ೬೩ ||

ನೋಡಿದ[೩] ಲಾವಳಿಕರು ಮಾತೆಯ |
ಕೂಡೆಯಾಗಳೆ ಹೋಗಿ ದೊಡ್ಡಿತ |
ಮಾಡಿ ಹೇಳಿವರಾದೊಡಂಜಿಕೆಯೇನು ನಮಗಿದಕೆ ||
ಬೇಡಬೇಕೆಂದೆನಗೆ ಶಿಕ್ಷೆಯ |
ಮಾಡುವರೆ ಪರಸತಿಯೆ ಇದ[೪]ನಿಂ |
ದಾ[೪]ಡಿಹೋದಳು ರಾಣಿಯೆಂದಳು ಸಕಳೆಗಾ ಮಾಯೆ || ೬೪ ||

ತರುಣಿ ಕೇಳ[೫] ನಿನಗೆ ಪರಮೇ |
ಶ್ವರನೆ ಪತಿಯಹನೆಂದು ನೃಪಕುಲ |
ಗುರುವೆನಿಪಹಂಕಾರನಾ ಮಮಕಾರ ಭೂಪತಿಗೆ ||
ನಿರುತ ವಚನವ ನುಡಿದ ನೀನಿ[೫] |
ಪರಿಯ [೬]ಗಾವಳಿಗಂಗೆ[೬] ಕೂರ್ತಡೆ[೬]
ಮರುಳುಗುಟ್ಟದೆ ಮಾಣ್ಬರೇ ಹೇಳೆಂದಳಾ ಸಕಳೆ || ೬೫ ||

ನೀಱು[೭] ಕೇಳಾ ನಾವು ಮಾಡಿದ |
ದೂ[೮]ಱನೆಮ್ಮಯ ರಾಣಿ ಕೇಳಿದ |
ಕಾರಣದಲಿದು ಜಾಱಿತಲ್ಲದೆ ರಾಯ ಕೇಳಿದೊಡೆ ||
[೯]ಗಾಱಹೆವು ನಾವಿನ್ನು ನೀತಿಯ[೯] |
ವಿಱಿದಿರಬೇಕಂತುಕಾರಣ |
ಬೇಱು[೭] ಬೀಡಿನಲಿರಲಿಯಲ್ಲಮನೆಂದಳಾ ಸಕಳೆ || ೬೬ ||

೧ ರಿಲ್ಲ ( ಜ. ) ೨-೨ ತಲಿ ಕರುಣಿಸಿಯೆ ( ಇ. ) ೩ ದೂಷ ( ಇ. ) ೪-೪ ನೇ|ಕಾ ( ಎ. ) ೫ ಮಾಡಿದರು ಈ ( ಇ. ); ನುಡಿದ ನಿನಗೀ ( ಉ. ) ೬-೬ ಕೌಳಿಕ ಮನುಜಗೋತಡೆ ( ಜ. ); ಕೌತುಕಗಳನು ಮಾಡಲು ( ಇ. ) ೭ ಲೀ ಕೌಳಿಕಗೆ ( ಉ. ) ೮ ಜಾ ( ಇ. ) ೯-೯ ದೂರವಹುದಿದು ನಿನ್ನ ರೀತಿಯು ( ಇ. )

ಕೆಳದಿಯರು ತಮತಮಗೆ ಬುದ್ಧಿಯ |
ಕಲಿಸುತಿರಲಾ ಮಾಯೆ ಚಿಂತಾ |
ಕುಲತೆಯಿಂದಲಿ ಬೆಱಗುಹೊಡೆದಿರಲಾಗಳೆಯ್ದುಂದು ||
ಲಲನೆಗೇತಕೆ ದುಗುಡವಾರು |
ಮ್ಮಳಿಕೆಯನು ಮಾಡಿದರು ಹೇಳೆನು |
ತೊಲಿದು ಕೇಳಿದನಂದು ಸಕಳೆಯನಲ್ಲಮನು ಬಳಿಕ[1] || ೬೭ ||

ಅಣ್ಣ ಕೇಳುದಕದಲಿ ಮುಳುಗಿದ |
ಸುಣ್ಣ ಕಲ್ಲಂತಾಗಿ ಕುದಿಯುತ |
ಬಣ್ಣವಳಿದ[2]ಳು ಮಾಯೆ ಕಾಣುತ ನಿನ್ನ ಬೇಟದಲಿ ||
ಕಣ್ಣುಗಾಣದೆ ಕಾಮನೇಱಿನ |
ಹುಣ್ಣಿನಲಿ ಹೊರಳಿದೊಡೆಯಾ ಸ್ಥಿತಿ[3] |
ಹಣ್ಣಿಹಬ್ಬಿತು ಪುರದೊಳೆಂದಳು ಸಕಳೆಯಲ್ಲಮಗೆ || ೬೮ ||

ಒಡತಿ ಮುಂತಾದ[4]ರಮನೆಯಲಿಹ |
ಮಡದಿಯರು ತಾವಱಿದರೊಬ್ಬನೆ |
ಪೊಡವಿಪಾಲಕನಱಿಯನಲ್ಲದೆ[5] ನಮ್ಮ ಪುಣ್ಯದಲಿ ||
ತೊಡಗಿ[6]ತೀಪರಿ ರಟ್ಟು ಸಾಕಿ |
ನ್ನೆಡೆಯ ಮಾಡೈ ನಿನಗೆ ಬೀಡಿನ |
ಗುಡಿಯ ಹೊಱಗೊಂದೆಡೆಯಲೆಂದಳು ಸಕಳೆಯಲ್ಲಮಗೆ || ೬೯ ||

ಮಾಯೆಯಗಲಿದ ಬಳಿಕ ಭಾವಿಸೆ |
ಕಾಯವುಂಟೇ ಪ್ರಾಣ[7]ವಾಗಿಹ[8] |
ವಾಯು ನಡೆವುದೆ ಕಾಲು ಕೈ ಕಣ್ಣುಗಳು[7] ಮಿಡುಕುವುವೇ ||
ಬಾಯನುಡಿ ಬೆವಹಾರ ಬೆಸನ[9]ಗ |
ಳಾಯ[10]ತವು ಬಳಿಕುಂಟೆ ಕೇಳೌ[11] |
ಸಾಯದಂತಿರೆ ಸತ್ತೆ ನಾನಕಟೆಂದನಲ್ಲಮನು || ೭೦ ||

---

೧ ನಗುತಲಲ್ಲಮನು ( ಜ. ) ೨ ಬ್ಬಣ್ಣಬಟ್ಟ ( ಮು. ) ೩ ಪ್ರಭೆ ( ಜ. ) ೪ ದಮ್ಮ ( ಜ. ) ೫ ದ ( ಜ. ) ೬ ರಿ ( ಇ. ) ೭–೭ ವಡಗಿದ|ಕಾಯ ನಡೆವುದೆ ಕಾಲು ಕಣ್ಣುಗಳುಲುಕೆ ( ಜ. ) ೮ ದಗಲಿದ ( ಇ. ) ೯ ಶಬ್ದ ( ಗ. ) ೧೦–೧೦ ಧಾರ್ಥವು ಬಳಿಕಲುಂಟೇ ( ಇ. ) ೧೧ ಮರುಳೇ ( ಉ. )

ಎಂದ ಮಾತಿನ ಮಱೆಯ ಬೆಡಗಿನ |
ಸಂದಿಯಲಿ ಶಿವಕಾಮತತ್ವ |
ದ್ವಂದ್ವವಿಪ್ಪುದನಱಿಯಲಱಿಯದೆಯೀಗಳೇನಾಯ್ತು ||
ಮುಂದೆ ಮಾಯೆಯ ನಿನ್ನ ರಿಣ ಸಂ |
ಬಂಧವುಳ್ಳೊಡೆ ತಾ೧ನೆ ಕೂಡೀ |
ತೆಂ೧ದು ಮೆಲ್ಲನೆ ಜಾಱಿನುಡಿದಳು ಸಕಳೆಯಲ್ಲಮಗೆ || ೭೧ ||

ಆಗಲೆನುತಲಿ ಬಳಿಕ ಪಾತ್ರದ |
ಭೋಗದವರೊಳು ಮಧುಕನಾಥಗೆ |
ಹೋಗಿ ಮಾಯಾಂಗನೆಯ ಲಾಸ್ಯದ ಕೇಳಿಯೂಳಿಗವ ||
ಜೋ೨ಗವಿಸುತಿರುತಿರ್ದ ಭಕ್ತಿಯ |
ಭಾಗೆಯಲಿ ತಾನೊಲಿದ ಕಾರಣ |
ವಾ ಗರುವ ನಮ್ಮ೩ಲ್ಲಮುಪ್ರಭು ಲಿಂಗಲೀಲೆಯಲಿ || ೭೨ ||

**ಅಂತು ಗತಿ ೫ಕ್ಕಂ ಪದ ೨೪೪ಕ್ಕಂ ಮಂಗಳಂ**

---

೧ ವು ಕೂಡುವು|ದೆಂ ( ಜ. ) ೨ ಭೋ ( ಉ. ) ೩ ಗುಣಾರ್ಣವನ ( ಇ. )

# ವಿಮಳೆ ಬಂದ ಗತಿ

**ವಚನ**

ಕೃತಯುಗದಲ್ಲಿ ಭಕ್ತಿಕಾರಣ ಸ್ಥೂಲಕಾಯನೆಂಬ ಗಣೇಶ್ವರನಾಗಿರ್ದೆ |
ತ್ರೇತಾಯುಗದಲ್ಲಿ ಭಕ್ತಿಕಾರಣ ಶೂನ್ಯಕಾಯನೆಂಬ ಗಣೇಶ್ವರನಾಗಿರ್ದೆ |
ದ್ವಾಪರಯುಗದಲ್ಲಿ ಭಕ್ತಿಕಾರಣ ಅನಿಮಿಷನೆಂಬ ಗಣೇಶ್ವರನಾಗಿರ್ದೆ |
ಕಲಿಯುಗದಲ್ಲಿ ಭಕ್ತಿಕಾರಣ ಪ್ರಭುವೆಂಬ ಜಂಗಮನಾಗಿರ್ದೆ ಕಾಣಾ ಗುಹೇಶ್ವರಾ || ೧ ||

ಆದಿಯಾಧಾರವಿಲ್ಲದಂದು ಹಮ್ಮುಬಿಮ್ಮುಗಳಿಲ್ಲದಂದು ಸುರಾಳನಿರಾಳವಿಲ್ಲದಂದು ಶೂನ್ಯನಿಶ್ಶೂನ್ಯವಿಲ್ಲದಂದು ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರನ ಶರಣನುದಯಿಸಿದನಂದು || ೨ ||

ಆದಿಯ ಸಂಗದಿಂದಾದವನಲ್ಲ ಸಂಗಸುಖದೊಳಗಿದ್ದವನಲ್ಲ ಇಬ್ಬರ ಸಂಗದಿಂದಾದವನಲ್ಲ ರವಿಶಶಿಯ ಬೆಳಗಿನಿಂದ ಬೆಳೆದವನಲ್ಲ ನಾದಬಿಂದುಕಳೆ ಹುಟ್ಟುವ ಮುನ್ನ ಅಲ್ಲಿಂದತ್ತತ್ತ ಗುಹೇಶ್ವರಾ || ೩ ||

**ಸೂಚನೆ**

ಉಮೆಯ ನೇಮದಲಿಳೆಗೆ ಬಂದಾ |
ವಿಮಳೆ [೧]ಪೇಳಲು ವಿಸ್ತರಿಸಿಯ |
ಲ್ಲಮನ ಪರಿಯನು ಕೇಳುತಿ[೧]ರ್ದಳು ಮಾಯೆ ಮನವೊಲಿದು[೨] ||

ಸದಮಲಜ್ಞಾನಿಗಳು ಶಾಶ್ವತ |
ಪದದಲನುಭಾವಿಗಳು ಕೇಳುವು |
ದಿದಱೊಳಗೆ ಮೇಲೆನಿಸಿ [೩]ನಡೆವ ಕಥಾಕುತೂಹಲವ[೩] ||
ಮಧುಕನಾಥನ ವಾದ್ಯ[೪]ಮೇಳಾ |
ಪದಲಿ ಮೆಱೆವಲ್ಲಮನ ಮಹಿಮೆಯ |
ಹದನನಾದರದಿಂದಲೀ ಪ್ರಭುಲಿಂಗಲೀಲೆಯಲಿ || ೧ ||

---

೧-೧ ವಿಸ್ತರಿಸಿದರೆ ಕಾರ್ಯಕ್ರಮವನರಿದೆನೆನುತ್ತಲಿ ( ಗ. ) ೨ ಸೋತು ( ಗ, ಜ. ) ೩-೩ ನಡೆವಾ ಕಥನಕೌತುಕವ ( ಜ. ) ೪ ದಿವ್ಯ ( ಇ. )

ಧರಣಿತಳದೊಳು ನಿಚ್ಚ ಮಧುಕೇ |
ಶ್ವರನನಭಿವಂದಿಸುತ ಕಾಮಾ |
ತುರದಲಲ್ಲಮಗೋತು ಮಾಯಾದೇವಿಯಿರುತಿರಲು ||
ಹಿರಿದು ದಿನಗಳು ಹೋದುವೆನುತಲಿ |
ಗಿರಿಜೆ ಮಾಯೆಯ ಹದನನಾಲಿಸಿ |
ಕರೆದು ತರಲಿಕೆ ಕಳುಹಿ[೧]ದಳು ಬೆಸನಿತ್ತು ವಿಮಳೆಯನು || ೨ ||

ತೊಳಪ ಕಂಗಳ ಕಾಂತಿ ಮಿಂಚಿನ |
ಬ[೨]ಳಗವನು ಬೆಸಲಾಗುತಿರೆ ಕೋ |
ಮಳದ ತನುವಿನ ಸಾರ ಸೌ[೩]ರಭವಿಡಿಯೆ ದೆಸೆಗಳನು[೩] ||
ಸೆಳೆನಡುವಿನುನ್ನತಕುಚಂಗಳ |
ಚೆಲುವಿಕೆಯ ದಿವ್ಯಾಂಗತೇಜದ |
ಬಳಕೆಯಿಂ[೪]ದಲಿ ಬಂದಳವನಿಗೆ ವಿಮಳೆ ವಿನಯದಲಿ[೫] || ೩ ||

ಬಂದು ಭರ[೬]ವಸದಿಂದೆ[೬] ಕನ್ನೆಯ |
ಮಂದಿರವನೊಳಹೊಕ್ಕು ಭೋಂಕನೆ |
ಮುಂದೆ ನಿಂದಿರೆ ಕಾಣು[೭]ತವೆ ಸತುಕರಿಸಿ[೭] ಕುಳ್ಳಿರಿಸಿ ||
ಇಂದುಮುಖಿ ನೀನೆತ್ತಣಿಂದಲಿ |
ಬಂದೆಯೇತಕೆ ನಿನ್ನ ಹೆಸರೇ |
ನೆಂದು [೮]ಮಾಯಾದೇವಿ ಕೇಳಿದಳೊಲಿದು ವಿಮಳೆಯನು[೮] || ೪ ||

ಕೆಳದಿ ನಿನ್ನನು ನೋಡಲಂಬಿಕೆ |
ಕಳುಹಿದರೆ ರಜತಾದ್ರಿಯಿಂದಾ |
ನಿಳಿದು[೯] ಬಂದೆನು ವಿಮಳೆಯೆಂಬುವಳಾನು ನೀನೀಗ ||
ಇಳೆಯೊಳುದಯಿಸಿ ಮ[೧೦]ರೆದೆಯಾದೊಡೆ |
ತಿಳುಹುವೆನು ನಾ ನಿನಗದೆಲ್ಲವ |
ನೊಲಿದು ಕಾರಣಕಥನವನು ಕೇಳೆಂದಳಾ ವಿಮಳೆ || ೫ ||

---

೧ ತಾರೆನುತಟ್ಟಿ ( ಇ. ) ೨ ಬೆ ( ಜ. ) ೩-೩ ರಂಭದ ವಿಳಾಸದಲಿ ( ಇ. ) ; ರಂಭಗಳ ರಚನೆಗಳ ( ಜ. ) ೪ ಬೆಳಗಿನಿಂ ( ಜ. ) ೫ ಮನವೊಲಿದು ( ಇ. ) ೬-೬ ದಲಿ ಬೇಗ ( ಜ. ) ೭-೭ ತಾಕೆಯ ಹತ್ತೆ ( ಜ. ) ೮-೮ ಕೇಳಿದಳಾಕೆಯನು ಮುದದಿಂದಲಾ ಮಾಯೆ ( ಇ. ) ; ಬೆಸಗೊಳೆ ಮಾಯೆ ಗೆಂದಳು ವಿಮಳೆ ನಿಜ ನೆಲೆಯ ( ಜ. ) ೯ ಳಿಗೆ ( ಇ. ) ೧೦ ಮೆ ( ಉ, ಕ. )

ಏನು ಕಾರಣ ನಾನು ಹುಟ್ಟಿದೆ |
ನೇನು ಕಾರಣ ನೀನು ಬಂದೆಯಿ |
ದೇನು ಕಾರಣ ಗಿರಿಜೆ ಮಾಡಿದಳೆನಗೆ ಕರುಣವನು ||
ತಾನು ದೇವತೆಯಾನು ಮಾನಿಸಿ |
ಯೇನು ಸಂಭಾವನೆಗೆ ಕಾರಣ |
ಮಾನಿನಿಯೆ ಹೇಳೆನುತಲಿದ್ದಳು ವಿಮಳೆಗಾ ಮಾಯೆ || ೬ ||

ಹರನ ನಿಷ್ಕ[೧]ಳರೂಪನಲ್ಲಮು |
ನಿರ[೨]ವಿನಿಂದಲು ತಾನು ತಿಳಿವಾ |
ತುರಕೆ[೨] ತನ್ನ ಗುಣ[೩]ಸ್ವರೂಪದ ಮಾಯೆ ನಿನ್ನುವನು ||
ಧರೆಗೆ ಕಳುಹಲು ನೀನು ತಡೆದಿರು |
ತಿರಲು ನಿನ್ನನು ತಿಳಿದು[೪] ತರಲಿಕೆ |
ಗಿರಿಜೆ ಬಳಿಕಿಂತೆನ್ನ ಕಳುಹಿದಳೆಂದಳಾ ವಿಮಳೆ || ೭ ||

ಬಳಿಕ ಮಾಯಾಂಗನೆಯ ಮನಸಿಗೆ |
ತಿಳಿವು ತಿಣ್ಣನೆ ತಿಟ್ಟವಿಟ್ಟಿತು[೫] |
ಹೊಳಹು ಹೊಮ್ಮಿತು ತನ್ನ ಪೂರ್ವದ ಕಥನ ಕಾರಣದ ||
ಬೆಳವಿಗೆಗೆ ಬೆದೆ[೬]ಯಾಯ್ತು ನೆನಹಿನ |
ನೆಳಲು ಮಿಂಚಿದುದೊಳಗೊಳಗೆ ನಿ |
ರ್ಮಳೆಯ ಸಂಗವು ಕಳೆಯದಿಹುದೇ ಮನದ ಮೈಲಿಗೆಯ[೭] || ೮ ||

ಹರಿಹರಬ್ರಹ್ಮಾದಿ ದೇವಾ |
ಸುರರು ಜನನಕೆ ಬರಲು ಜಾತಿ |
ಸ್ಮರಣೆಯಿಲ್ಲೆನಲಾವು ಸತಿಯರು ನಮ್ಮ ಪಾಡೇನು ||
ಪಿರಿದು ಪೂರ್ವಸ್ಥಿತಿಯ ಭಾವಿಸ |
ಲರಿದು ನೀನದಱಿಂದಲಲ್ಲಮು |
ನಿರವನೆಲ್ಲವ ವಿರಚಿಸೆಂದಳು ವಿಮಳೆಗಾ ಮಾಯೆ || ೯ ||

---

೧ ರ್ಮ ( ಗ, ಜ. ) ೨–೨ ವ ನೀ ತಿಳಿಯಲಿಕೆ ಭರದಾ|ತುರದ ( ಜ. ) ; ಲಿಕಾತನ ಪರಿಯನರಿಯಲು| ಭರದಿ ( ಗ. ) ೩ ನಿಜ ( ಚ. ) ; ತಮಃ ( ಗ. ) ೪ ತಿಳುಹಿ ( ಇ, ಎ, ಖ. ) ; ಕರೆದು ( ಇ. ) ೫ ತಿಳಿವುತಿರ್ದುದು ( ಜ. ) ೬ ಳೆ ( ಜ. ) ೭ ಕಲ್ಮಷವ ( ಜ. )

ಆದೊಡಾಲಿಸುವೊಂದು ಬುದ್ಧಿಯು |
ಲಾದರಿಸಿ ಕೇಳಭವ ತನ್ನ ವಿ |
ನೋದದಿಂದಾ ಗಿರಿಜೆಗಱುಹಿದ ಕಥನಕೌತುಕವ[೧] ||
ಆದಿಯಲಿ ಸಾಕ್ಷಾತ[೨]ವಾಗಿಯೆ[೩] |
ಮೇದಿನಿ[೪]ಯಲಿರುತಿರ್ದ[೪]ರಮಲ[೬] ಗು |
ಣಾಧಿಕ[೫]ದ[೪] ಸುಜ್ಞಾನಿನಿರಹಂಕಾರರೆಂಬುವರು || ೧೦ ||

ಒಳ್ಳಿತಾಗಿಯೆ[೭] ಚೆಲುವ ಬನವಸೆ |
ಬಳ್ಳಿಗಾವಿಯ ಭಕ್ತಿಭಾವಕ |
ರೆಲ್ಲ[೮]ರೊಳಗಭಿವಂದ್ಯನಾಗಿ ಸಮಸ್ತ[೮] ಭಾಗ್ಯದಲಿ ||
ಬಲ್ಲದನು ತಾನೆನಿಸಿ ತನಗೊಂ |
ದಿಲ್ಲವೆನುತಲಿ ಪುತ್ರಕಾಮ್ಯದ |
ಭುಲ್ಲವಣೆಯಲಿ ಬಳಿಕ ನಿರಹಂಕಾರನಿಂತೆಂದ || ೧೧ ||

ದಾನವಿಲ್ಲದ [೯]ಧರ್ಮ ವಿಷಯ[೯] |
ಧ್ಯಾನವಿಲ್ಲದ ತಪವು ಜೀವ |
ಸ್ನಾನ[೧೦]ವನುಸಂಧಾನವಿಲ್ಲದ ಯೋಗದಭ್ಯಾಸ[೧೦] ||
ಜ್ಞಾನವಿಲ್ಲದ ಸಿದ್ಧಿ[೧೧] ವರಸಂ |
ತಾನವಿಲ್ಲದ ಬಾಳ್ಕೆಯಲಿ ಸುಖ |
ವೇನು ದೊರಕುವುದೆನುತ ನಿರಹಂಕಾರ ಚಿಂತಿಸಿದ || ೧೨ ||

ಲೌಕಿಕರು ಕಾಮಿಸುವರಿಹಪರ |
ಲೋಕವನು ತಮಗೀವ ಪುತ್ರನ |
ನೇಕೆಯಾ ಮಾಯಾ ಪ್ರಪಂಚಿನ ಬಳಕೆಗಳು ನಮಗೆ ||
ಏಕವೆನಿಸುವ ನಿಜವನೀವ ನಿ |
ರಾಕುಳದ ಸುಕುಮಾರನಾಗಲಿ |
ಬೇಕು ನಮಗೆಂದೆನುತ ನಿರಹಂಕಾರ ಚಿಂತಿಸಿದ || ೧೩ ||

---

೧ ಕಾರಣವ ( ಇ, ಉ, ಒ. ) ೨ ಪ್ರತ್ಯಕ್ಷ ( ಜ. ) ೩ ನಿಶ್ಚಿಂತವಾಗೀ ( ಇ. ) ೪-೪ ಯೊಳಿರುತಿಹರು ಜ್ಞಾನಾಂ|ಬೋಧಿಗಳು ( ಇ. ) ೫ ಖಿಳ ( ಜ. ) ೬ ಗೋದಯ ( ಎ. ) ೭ ಹ ( ಕ. ) ೮-೮ ರಿಗೆ ಮಿಗಿಲಧಿಕವಾಗಿಹ ಸಕಲ ( ಇ. ) ೯-೯ ಧನವು ಶಿವಪದ ( ಇ. ); ವಿತ್ತಧರ್ಮದ ( ಜ. ) ೧೦-೧೦ ವಿಲ್ಲದ ದೇಹ ಮನವಳಿಯದನ ಗುಣಯೋಗ ( ಇ. ) ೧೧ ಭಕ್ತಿ ( ಜ. )

ಉಪಮಿಸಲು ಸತಿಸಂಗರಸ[೧]ದಲಿ |
ಜಪದ ಜಂಜಡ ಜೋಕೆಯಲಿ ಮೇಣ್ |
ತಪದ ತಾಮಸಭಾವದಲಿ ಮಾಯಾ[೨] ಪ್ರಪಂಚಿನಲಿ ||
ವಿಪುಲ [೩]ವಿಜ್ಞಾನಾಕೃತಿಯ ನಿ |
ಶ್ಚ[೩]ಪಳನಾದ[೪] ಕುಮಾರನಿಲ್ಲೆನು |
ತಪರಿಮಿತದೆಣಿಕೆಗಳ ನಿರಹಂಕಾರ ಚಿಂತಿಸಿದ || ೧೪ ||

ಆದೊಡಂತಃಕರಣವೃತ್ತಿಯ |
ಹಾದಿಯನು ಪಲ್ಲಟಿಸಿ ಮೆಲ್ಲನೆ |
ನಾದ ಬಿಂದು ಕಳಾಪ್ರಬಂಧದ[೫] ಬಲೆಗಳಲಿ ನುಸುಳಿ ||
ಆದರಿಸಿಯೆನಗಚಲಪದವನು |
ವೇ[೬]ದಿಸುವ ಸತ್ಪುತ್ರನೊಬ್ಬನ |
ಸಾಧಿಸುವೆನೆಂದೆನುತ ನಿರಹಂಕಾರನನುಗೆಯ್ದ || ೧೫ ||

ಸತಿಸಹಿತ ಸಂಕಲ್ಪಸಾಧನ |
ಗತಿಯ ಮೇಳಾಪದಲಿ ನೆಱ[೭] ನಿ |
ಶ್ಚಿತವ ಮಾಡಿ ಮನಸ್ಸನೇಕೋಭಾ[೭]ವನಿಷ್ಠೆಯಲಿ ||
ಪ್ರತಿಯಿಡುವ ಪಂಚೇಂದ್ರಿಯಂಗಳ |
ನತಿಗಳೆವ ನಂದನನ ಬಯಕೆಯ |
ಮತಿಗಳಲಿ ಸುಜ್ಞಾನಿನಿರಹಂಕಾರರೊಪ್ಪಿದರು || ೧೬ ||

ಸಂತೆಯೊಳಗುಂಟೇ ಸಮಾಧಿ[೮]ಯ[೮] |
ಸಂತತಾನಂದದ ಸುಖೋದಯ |
ವೆಂತು ದೊರಕುವುದೆನುತ ಮಂದಿಯ ಕಳವಳವ ತೊಲಗಿ ||
ಸಂತತಿಯು ಸಂಕಲ್ಪದಿಂದೇ |
ಕಾಂತವಾಸವ ಹೊಕ್ಕು ಮಿಗೆ ವಿ |
ಶ್ರಾಂತಿಯಲಿ ಸುಜ್ಞಾನಿನಿರಹಂಕಾರರೊಪ್ಪಿದರು || ೧೭ ||

---

೧ ಜಲ ( ಕ, ಖ, ಮ. ) ೨ ನಾನಾ ( ಎ, ಒ, ಖ, ಗ, ಚ, ಜ. ) ೩-೩ ಲಿಂಗಾಕಾರಕೃತಿಯಲಿ|ಚ ( ಜ. ) ೩ ಲಿಹ|ಚ ( ಇ. ) ೪ ನಹ ಸು ( ಒ. ) ೫ ಪಂಚಿನ ( ಗ. ) ೬ ಭೇ ( ಇ, ಗ, ಜ. ) ೭ಮನಸ್ಸಿನೊಳು ನಿರ್ಭಾ ( ಜ. ) ೮ ಸುಬೋಧೆ ( ಇ, ಗ. ) ; ಸುಖೋದ ( ಜ. ) ೮ ಯು ( ಇ. )

ಅನುಗೊಳಿಸಲಳವಟ್ಟ ಪದ್ಮಾ |
ಸನದ ಹಸ್ತನ್ಯಸ್ತಲಿಂಗದ |
ನೆನಹು ನೆಱೆ ಕಱಗಟ್ಟಿದಂಗದ ನಟ್ಟ ದೃಷ್ಟಿಗಳ ||
ಮನದ ಮೇಳಗಳೊಳಗೆ ಸಿಕ್ಕಿದ |
ಘನತರಪ್ರಾಣಾನಿಲನ ಸಾ |
ಧನಸಮಾಧಿವಿಳಾಸದಲಿ ದಂಪತಿಗಳೊಪ್ಪಿದರು || ೧೮ ||

ಹೊಳಿಹೋಯಿತ್ತನ್ನಪಾನದ |
ಮೇಲಣಿಚ್ಛೆಯನೇಕ ಪಱಯಿಲಿ |
ಹಾಳು ಬಿದ್ದುವು ಜಾಗ್ರಸ್ವಪ್ನಸುಷುಪ್ತಿಗಳ ಬಲುಹು ||
ಕೋಳುಹೋಯಿತು ಕರಣಗಳ ಕಾ |
ಲಾಳು ಬೆಂಬಟ್ಟಯ ಸುಷುಮ್ನಾ |
ನಾಳದಲಿ ದಂಪತಿಗಳನುಭವವಿರೆ ಸಮಾಧಿಯಲಿ || ೧೯ ||

ಆ ಸಮಾಧಿಯ ಭಾವದಲಿ ನವ |
ಮಾಸ ಪೂರಿತವಾಗಿ ನೆನಹಿನ |
ನೇಸಱನ ಬಲು ಬಿಸಿಲು ಬೆಳಗಿದುದಂತರಂಗದಲಿ ||
ಲೇಸೆನಿಸಿ ಕಾಣಿಸಿದುದೊಯ್ಯನೆ |
ಭಾಸುರ ಶ್ರೀಮೂರ್ತಿಯೊಂದು ವಿ |
ಳಾಸ ನಿರಹಂಕಾರಸುಜ್ಞಾನಿಗಳ ಮನದೊಳಗೆ || ೨೦ ||

ಕಂಡರೆ ಕೋಭಾವದಲಿ ನಿ |
ಖಂಡ ಮಹಿಮನನಖಿಳ ಭವಭಯ |
ಖಂಡನನನಾದ್ಯಂತರಹಿತನನಪ್ರಮೇಯನನು ||
ಚಂಡಕರ ಕೋಟಿ ಪ್ರಕಾಶೋ |
ದ್ದಂಡಮಯನ ಸುಹೃನ್ಮನೋಂಬುಜಲ |
ಮಂಡಿತನನಾ ದಂಪತಿಗಳೊಲಿದಂತರಂಗದಲಿ || ೨೧ ||

೧ ಪ ಮೊಸೆಗೆ ( ಉ. ) ೨ ಕ್ಕಿ ( ಎ, ಒ, ಕ, ಖ, ಚ, ಜ. ) ೩ ದಿನದ ( ಇ, ಒ, ಖ. ) ೪-೪ ಗಳು ಬೆಂಬಿಡೆ ( ಉ ) ೫-೫ ಳಿರ್ದರು ನಿಜ ( ಇ. ) ೬-೬ ಲ್ಲಿಯ ( ಉ. ) ; ಲಿ ಚಿದ ( ಇ. ) ೭-೭ ನು ತೆರಹಿಲ್ಲದುಪಮೆಗೆ ಬಾರದಭವನನು ( ಇ. ) ೮-೮ ಕರ ಕೋಟಿಗಳಿಗುದ್ದಂಡ ಪ್ರಭೆಯನನಂತರೂಪನ ( ಜ. ) ೯ ತೇಜ ( ಇ. ) ೧೦-೮ ಹೃತ್ಕಮಲಪೀಠದಿ ( ಇ. )

ಕರಣಗಳು ಕಾಲಿಡಲು ನೇತ್ರದ |
ಬಿರಿಮುಗುಳು ಬಿಚ್ಚಿದುವು ನಾಡಿಯ |
ಹೊರಳಿ ಹುರಿಗೊಳಿಸಿದುವು ಚೇಷ್ಟಿಸಿ[೧] ಬಾಹಿರಂಗದಲಿ ||
ಅರಳಿದುದು ಮನದಳುಕೆ[೨] ಭೋಂಕನೆ |
ಹೊರೆಯಲಿಹ ಬಾಲಕನ ಕಂಡರು |
ಪರಮ ನಿರಹಂಕಾರಸುಜ್ಞಾನಿಗಳು ಹರುಷದಲಿ || ೨೨ ||

ಬಿಸಿಲ [೩]ಬೆಳ್ಳುಟ್ಟೆಳೆಗಿಳಿದು ಶೋ |
ಭಿಸು[೩]ವ ಸೂರ್ಯನೊ ಹಿಮವನತಿಗಳೆ |
ದೆಸೆವ ಚಂದ್ರನೊ ನೆಟ್ಟನಾಶ್ರಿತಭಕ್ತಗುಣವಳಿದು ||
ಮಿಸುಗುವಗ್ನಿ[೪]ಯೊ ಪೇಳೆನಲು ರಂ |
ಜಿಸುವ [೫]ತೇಜೋಮಯದ[೫] ಬಾಲಕ |
ನೆಸೆದನಾ ಸುಜ್ಞಾನಿನಿರಹಂಕಾರರಿದಿರಿನಲಿ || ೨೩ ||

ಹೊಗಳಿ ಹೋರುವ ವೇದಶಾಸ್ತ್ರದ |
ಬಗೆಗೆ ಬಾರದ ಹರಿವಿರಿಂಚಾ |
ದಿಗಳು ಸಾ[೬]ಧಿಸಿ ಕಾಣಲಱಿಯದ ಪರಮಮುನಿನಿಕರ ||
ಮೊಗಸಿ ಮಾಡುವ ತಪಕೆ ನಿಲುಕದ |
ಸಗುಣನಿರ್ಗುಣಮೂರ್ತಿಯಲ್ಲದ |
ವಿಗಡ ಶಿಶುವನು ಕಂಡರಾ ದಂಪತಿಗಳರ್ತಿಯಲಿ || ೨೪ ||

ಸುರರು ಹೂಮಳೆಗಱೆದರಾಗಳು |
ನೆರೆದು ನುಡಿದುವು ದೇವದುಂದುಭಿ |
ಪರಮಮುನಿಜನದಂತರಂಗದಲಾದುದುತ್ಸಾಹ ||
ಕೊರಡುಗಳು ಕೊನರಿದುವು ಕಱೆಯದ |
ಬರಡುಗಳು ಹಯನಾದುವೆಮ್ಮಯ |
ಗುರು ಗುಹೇಶ್ವರನಿಳೆಗೆ ರೂ[೭]ಹಿಸಿ ಮೆಱೆದ[೮] ಕತದಿಂದೆ || ೨೫ ||

---

೧–೧ ಯು|ಸರಿಗೊಳಿಸಿದುದು ಚೇಷ್ಟಿಸಿಯು ತಾ ( ಜ. ) ೨ ಪೆರಕ ( ಉ. ) ; ವರಿದು ( ಜ. ) ೩–೩ ಬಿಟ್ಟಳೆಗಿಳಿದು ಶೋಭಿಸು|ತಸೆ ( ಇ, ಎ, ಜ. ) ೪ ಪ ವಹ್ನಿ ( ಇ, ಉ. ) ೫–೫ ಪರ ಬೊಮ್ಮದಸು ( ಜ. ) ೬ ಸಂ ( ಜ. ) ೭ ಮೋ ( ಮು. ) ೮ ಬಂದ ( ಇ, ಒ, ಖ, ಜ. )

ಭಾಪು ಘನ ಗುರುಲಿಂಗಮೂರ್ತಿಯೆ |
ಭಾಪು ಜಂಗಮಲಿಂಗ ಮೂರ್ತಿಯೆ |
ಭಾಪು ಶಿವಲಿಂಗ ಪ್ರಕಾಶ[1]ವ್ಯೋಮ ಮೂರುತಿಯೆ ||
ಭಾಪುರೇ ಎಂದೆನುತಲಾ ಚಿ |
ದ್ರೂಪ ಶಿಶುವನು ಕಂಡು ಹಿಗ್ಗಿದ |
ನಾ ಪುರಾತನ[2]ನೆನಿಪ ನಿರಹಂಕಾರನರ್ತಿಯಲಿ || ೨೬ ||

ಹಾರವಿಸಿ ನಲಿ[3]ದೆತ್ತಿ ಕಿಂಚಿತು |
ಭಾರವಿಲ್ಲದೆ ಕೈಗೆ ಸೋಂಕದೆ |
ಸಾರತೇಜಃಪುಂಜತನು ಶಿಶು ತನ್ನ ಕೈಯೊಳಗೆ ||
ಪೂರವಿಸಿಕೊಂಡಿರಲು ಬಳಿಕಾ |
ನಾರಿ ವಿಸ್ಮಯವಾಗಿ ನಿರಹಂ |
ಕಾರನನು ಕೇಳಿದಳಿದೇನೆನುತಾತ್ಮಜನ ಪರಿಯ || ೨೭ ||

ಈತನಾರೆಂಬೊಡೆ ಸದಾ ಸಾ |
ಕ್ಷಾತವವನಿಜಲಾನಲಾನಿಲ |
ಭೂತತತ್ವವಿದೂರ ಪರಮಾನಂದ ರಸಭರಿತ ||
ಜಾತನಲ್ಲ ವಿಚಾರಿಸುವೊಡೆಯ |
ಜಾತನ[4]ಲ್ಲೆಂದೆನುತಲು[4]ಪಮಾ |
ತೀತ[5]ನೀ ಶಿಶುವೆಂದ ನಿರಹಂಕಾರ ನಿಜಸತಿಗೆ[5] || ೨೮ ||

ಬಲ್ಲೊಡೀ ಶಿಶುವೀತನೊಳಗಿಹ |
ನಲ್ಲ ಹೊರಗಹನಲ್ಲ ಭಾವಿಸ |
ಲಿಲ್ಲದಿರುತಿಹನಲ್ಲವೆನುತಾ ತಂದೆತಾಯಿಗಳು ||
ಎಲ್ಲ ಜಾಡ್ಯದ ಜಂಜಡಂ[6]ಗಳ |
ನಲ್ಲವೆನಿಸುವ ಬಾಲಕಗೆ ಬಳಿ |
ಕಲ್ಲಮಪ್ರಭುವೆಂದು ಹೆಸರನು[7] ಕೊಟ್ಟ[8]ರರ್ತಿಯಲಿ || ೨೯ ||

---

೧ ಪ್ರಸಾದ ( ಮು. ) ; ಸ್ವರೂಪ ( ಇ, ಒ. ) ೨ ಪರಾಪರ ( ಜ. ) ೩ ಹಿಡಿ ( ಇ. ) ೪-೪ ಲ್ಲದ ಖಂಡನು ( ಇ. ) ೫-೫ ನೆನಿಸುವನೆಂದು ನಿರಹಂಕಾರ ಸತಿಗೊರೆದ ( ಇ. ) ೬ ಭಂಜನಂ ( ಜ. ) ೭ ನಾಮವ ( ಅ. ) ೮ ಕರೆದ ( ಇ. ) ; ಇಟ್ಟ ( ಜ. )

ಗಳಿಗೆ ಸಂಖ್ಯೆಗೆ ನುಡಿಯ ಕಲಿತನು |
ಗಳಿಗೆ ಸಂಖ್ಯೆಗೆ ನಡೆಯ ಕಲಿತನು |
ಗಳಿಗೆ ಸಂಖ್ಯೆಗೆ ಬಳೆದನವರ ಮನೋರಥದ ಕೂಡೆ೧ ||
ಗಳಿಗೆ ಸಂಖ್ಯೆಗೆ ಬಾಲಲೀಲೆಯ |
ನಳವಡಿಸಿ ಕೊಂಡಾಡುತಿಹ ಮ |
ಕ್ಕಳಲಿ ಮೆಱೆ೨ವುತಲಿರ್ದನಲ್ಲಮ ತನ್ನ ಲೀಲೆಯಲಿ || ೩೦ ||

ಚಂ೩ಡ ಭ೪ವದಲಿ ಬಗೆದು ಭಾವಿಸಿ೪ |
ಖಂಡ ವಿಧಿಯಲಿ ಸುಖವ ಬಯಸುವ |
ಭಂಡ ಭವಿ ಭರದಿಂದ ಭೂಮಿ ಸ್ವರ್ಗವನು ತಾಗಿ ||
ಕಂಡು ಉಂಡೆಡೆ೫ಯಾಡುವನು ಮೂ೫ |
ಚಂಡಿಯೀಪರಿಯೆನುತಲಾ ಹೊಡೆ |
ಚಂಡನಲ್ಲಮನಾಡುತಿರ್ದನು ಬಾಲಲೀಲೆಯಲಿ || ೩೧ ||

ವಾಯುಸೂತ್ರದಲಿಂದು ರವಿ ಚ |
ಕ್ರಾಯುಧಂಗಳು ತಿರುಗುತಿರ್ದೊಡೆ |
ಬೀಯುವಹವವನಿಲಿಸಲಱಿಯದ ಭವಿಗಳಾಯುಷ್ಯ ||
ಈಯುವಸ್ಥೆಯಲೆನುತ೬ ಶಿಕ್ಷೆ |
ಪಾಯದಿಂದಿಕ್ಕಯ್ಯಲಾ ಪ್ರಭು |
ರಾಯ ಚಕ್ರವ ತಿರುಹುತಿರ್ದನು ಬಾಲಲೀಲೆಯಲಿ || ೩೨ ||

ಆತನೋದದ ೭ವೇದಶಾಸ್ತ್ರಸ |
ಮೇತವಾತನ ನಾಲಗೆಯ ತುದಿ |
ಗಾತು ಬೆಸನನು ಬೇಡುತಿಹವಾತನ ಪದಾಬ್ಜದಲಿ೭ ||
ಓತು ಸತ್ಕೃತಿನಿಕರಗಳು ಕ |
ಯ್ಯಾತು ನೇಮವ ಹಾರುತಿಪ್ಪುವು |
ಭೂತಳದೊಳಲ್ಲಮನ ಬೆಳವಿಗೆ ಬೆಳಸಿತಚ್ಚರಿಯಲ್೮ || ೩೩ ||

---

೧ ನುರಾಗದಲಿ ( ಗ. ) ೨ ಬೆಳೆ ( ಜ. ) ೩ ಭಂ ( ಉ. ) ೪-೪ ರದಲಿ ಭಾವಿಸಲು ನವ ( ಗ. ) ೫-೫ ಯಲ್ಲಿಯಾಡುವ ( ಖ. ) ; ಯಾಡಿ ನೋಡುವ ( ಇ. ) ೬ ಲಿರುತ ( ಜ. ) ೭-೭ ಶಾಸ್ತ್ರ ಪ್ರತಿಯಿಲ್ಲಾತನೊಲವನು ಹಾರುತಿರ್ದುವು|ಆತು ಬೆಸನನು ಬೇಡುತಿರ್ದುವು ಸಕಲ ವಿದ್ಯೆಗಳು ( ಇ. ) ೮ ಬೀರಿತಾಶ್ಚರ್ಯ ( ಗ, ಜ. )

ಊರ್ಧ್ವಿಗಚ್ಚರಿಯಾದ ಬಾಲ |
ಕ್ರೀಡೆಗಕ್ಕಜಗೊಂಡು ಕಂಡವ |
ರಾಡಿಕೊಳುತಿರೆ ೧ಕಣ್ಣುಗಿಸುಬಹುದೆಂದು ಮೋಹದಲಿ೧ ||
ನೋಡಿ ತೂಪಿಬಂದಕ್ಕಬಲಿ ಕೊಂ |
ಡಾಡಿ ಕರ೨ ಸಂತೋಷದಲಿ ಕೈ |
ಗೂಡಿ ಬಣ್ಣಿಸಿ ಜನನಿಜನಕರು ಕರೆದರಲ್ಲಮನ || ೩೪ ||

ವಿಮಲಮುನಿಗಳ ವರಸಮಾಧಿಗೆ |
ಸಮಯವಿಲ್ಲದ ದೇವ ಬಾರೈ |
ದ್ಯುಮಣಿಶಿಖಿಶಶಿಕೋಟಿತೇಜೋಮೂರ್ತಿಮಯ ಬಾರೈ ||
ಕಮಲಸಂಭವ ವಿಷ್ಣು ಮೊದಲಾ |
ದಮರರಬಾವಿಗೆ ನಿಲುಕದಿಹ ನಿರು |
ಪಮನೆ ಬಾರೆನುತವರು ಬಣ್ಣಿಸಿ ಕರೆದರಲ್ಲಮನ || ೩೫ ||

ಹರುಷದಿಂದಲಿ ಜನನಿಜನಕರು |
ಕರೆಯುತಿರಲಾ ಬಾಲಭಾವದ |
ಪರಿಯನಾಗಳೆ ಬಿಸುಟು ಸಾಕಿ೩ನ್ನೆನುತ ನಡೆತ೩ಂದು ||
ವರಗುರು ಶ್ರೀಮೂರ್ತಿಯಾಗಿಯೆ |
ಪರಮತತ್ವನಿರೂಪಣೆಯ ವಿ |
ಸ್ತರಿಸಲುದ್ಯೋಗಿಸಿದನಲ್ಲಮ ತನ್ನ ಲೀಲೆಯಲಿ || ೩೬ ||

ಕೇಳಿರೇ ನಿಮ್ಮಯ ಸಮಾಧಿಯ |
ಕೇಳಿಗೋಸುಗವಾನು ರೂಹಿ೪ಸಿ |
ಬಾಲಭಾವಚ್ಚ೫ವಿಯ೬ ತೋಬಂದೆನಿನ್ನು೭ ಸಾಕೆನಗೆ೮ ||
ಲೀಲೆಯಿಂದಲಿಯೆನ್ನ ನಿಜದ ನಿ |
ರಾಳನಿಶ್ಚಲನಿತ್ಯಸುಖಸ |
ಮ್ಮೇಳದಲಿ ನಾನಾಡುತಿಹೆನೆನುತಿರ್ದನಲ್ಲಮನು || ೩೭ ||

---

೧-೧ ತಂದೆತಾಯ್ಗಳು ಕಂಡು ಹರುಷದಲಿ ( ಇ. ) ೨ ಡು ( ಇ. ) ೩-೩ ನ್ನೇಕೆ ನಮಗೆಂ ( ಇ. ) ೪ ಭಾವಿ ( ಉ. ) ೫ ದ ಸ ( ಜ. ) ೬ ದ ರೂಪ ( ಇ. ) ೭ ನಿಮಗೆ ( ಜ. ) ೮ ನುತ ( ಇ. )

ಆವ ತೆಱದಿಂ[೧]ದಾದೊಡೆಯು [೨]ಶಿವ |
ತ್ಸೇವೆಗೊಲಿದೀ ಪರಿಯಲಾ ಪರ |
ದೈವವೇ[೨] ಪ್ರತ್ಯಕ್ಷವಾಗಿಯೆ ತೋಱಿಯುಗಲಿದೊಡೆ[೩] ||
ನಾವು ನಮ್ಮಯ ಸದುಗತಿಯ ಸಂ |
ಭಾವಿಸುವೆವೆಂದೆನುತಲಲ್ಲಮ |
ದೇವಗೊಲಿದಾ ಜನನಿಜನಕರು ನುಡಿದರಭಿಮತವ[೪] || ೩೮ ||

ಬಗೆಯೆ ನಿರಹಂಕಾರಸುಜ್ಞಾ |
ನಿಗಳ ಮೇಳವನೊಲ್ಲದಾ[೫] ಪ್ರಭು |
ವಗಲಿ ತಾನಿರಬಲ್ಲನೇ ಬೇಕಾದೊಡೀ ಹದನ ||
ನಿಗಮದಲಿ ಶಾಸ್ತ್ರದಲಿಯನು[೬]ಭಾ |
ವಿಗಳ ನುಡಿಯಲಿ[೬] ಕೇಳುವುದು ನಾ |
ನಗಲೆ ನಿಮ್ಮುಮವನೆಂದನಲ್ಲಮ ಜನನಿಜನಕರಿಗೆ || ೩೯ ||

ಬಳಿಕ ತತ್ತ್ವವಿವೇಕವೆಲ್ಲವ |
ನಳವಡಿಸಿ ಕೊಟ್ಟೈಕ್ಯಭಾವ[೭] |
ಸ್ಥಳವ ಕಾಣಿಸಿ[೮] ದೃಷ್ಟದಲಿ ಪರಿಪೂರ್ಣಮಯ[೯]ನಿಸಿ ||
ಇಳೆಯೊಳಾ ಸುಜ್ಞಾನಿದೇವಿಗೆ |
ನಲಿದು ನಿರಹಂಕಾರದೇವಗೆ |
ತಿಳಿಹಿ ನಿತ್ಯವನಿತ್ತನಲ್ಲಮಲಿಂಗ[೧೦] ಲೀಲೆಯಲಿ || ೪೦ ||

ಪಡೆವೊಡೀಪರಿ ಬೇಹ ಮಕ್ಕಳ |
ಪಡೆದು ಪರಿಣಮಿಸುವುದು ತಪ[೧೧]ದಲಿ |
ನಡೆವುದೀಪರಿ ನಿಜ ಸಮಾಧಿಯ ನಿಲವ ನಿಲುಕುವುದು ||
ಹಿಡಿವೊಡೀಪರಿ ವಾಯುಮನಗಳ |
ಹಿಡಿದು ಸುಖದಲಿ ಸುಳಿವುದೆನುತಲಿ |
ಪೊಡವಿ ನಿರಹಂಕಾರಸುಜ್ಞಾನಿಗಳ ಪೊಗಳಿದರು || ೪೧ ||

---

೧ ಪರಿಯಿಂ ( ಇ. ) ೨–೨ ಸುಖ|ಸೇವೆಗೋಸುಗವೊಲಿದು ಬಂದಾ|ದೇವನೇ ( ಇ. ) ೩ ರವೆ ( ಉ. ) ೪ ರೊಲವಿನಲಿ ( ಜ. ) ೫ ದೇಂ ( ಉ. ) ೬–೬ ಭವ|ವಗಲದನುವನು ( ಇ. ) ೭ ಟ್ಬಾಲವಿನಿಂದಲಿ ( ಇ. ) ೮ ನರುಹಿಸಿ ( ಇ. ) ೯ ನೆ ( ಇ, ಎ, ಗ. ) ೧೦ ತೆನ್ನ ( ಒ. ) ೧೧ ಪಥ ( ಇ. )

ಅದು ನಿಮಿತ್ತದಲಲ್ಲಮನ ಕರು |
ಣದಲಿ ಪಡೆವುದು ಸಚ್ಚಿದಾನಂ |
ದದ ನಿರಾಕುಳ ನಿತ್ಯಪದವನು ಗಿರಿಜೆ ಕೇಳೆಂದು ||
ಮುದದಲೀಶ್ವರನೊರೆದನಂದಾ |
ನದನು ಕೇಳಿದು ಬಲ್ಲೆನೆಂದಾ |
ಹದನ ಮಾಯೆಗೆ ಹೇಳುತಿರ್ದಳು ವಿಮಳೆ ವಿಸ್ತರಿಸಿ೧ || ೪೨ ||

ಎಳ್ಳಿನೊಳಗೆಂತೆ೨ಣ್ಣೆಯಿಹಪರಿ |
ಯಲ್ಲಿ ಕಾಷ್ಟದೊಳನಲನಿಹ ಪರಿ |
ಯಲ್ಲಿ ಹಾಲೊಳು ಬೆಣ್ಣೆಯೆಂತಿಹುದಂತೆ ಭಾವಿಸಲು೩ ||
ಬಲ್ಲೊಡೆಮ್ಮಯ ದೇವನಿರುತಿಹ |
ನೆಲ್ಲರೆಡೆಗಳಲನುವ೪ನಱಿದೊಡೆ |
ಯು೪ಲ್ಲಮಪ್ರಭು ಗುರು ಗುಹೇಶ್ವರಲಿಂಗ ಲೀಲೆಯಲಿ || ೪೩ ||

**ಅಂತು ಗತಿ ೭ಕ್ಕಂ ಪದ ೨೮೭ಕ್ಕಂ ಮಂಗಳಂ**

೧ ವಿನಯದಲಿ ( ಗ. ) ೨ ಯು ಎ ( ಇ. ) ೩ ವುದು ( ಇ. ) ೪-೪ ಬಲ್ಲನು|ವ ( ಇ. )

# ಪ್ರಭು ಮಾಯೆಗೆ ಸಿಕ್ಕದೆ ಹೋದ ಗತಿ

**ವಚನ**

ಕರೆಯದೆ ಬಂದುದ ಹೇಳದೆ ಹೋದುದನಾರು ಬಲ್ಲರು ।
ಅಂದಂದಿಗೆ ಬಂದ ಪ್ರಾಣಿಗಳಾರು ಅರಿಯರಲ್ಲ ।
ಬಂದ ಬಂದವರೆಲ್ಲ ಮಿಂದುಂಡು ಹೋದರು ।
ಗುಹೇಶ್ವರಲ್ಲಯ್ಯನುಣ್ಣದೆ ಹೋದುದನಾರು ಅರಿಯರಲ್ಲ ॥ ೧ ॥

ಭಾವಗೆಟ್ಟನು ಭವಗೆಟ್ಟನು ಒಡಹುಟ್ಟಿದರೈವರ ಕೈಬಿಟ್ಟನು ।
ಭಂಡನು ಲಜ್ಜಭಂಡನು ಕಂಡರೆ ನುಡಿಸದಿರಾ ಮಾಯಾದೇವಿ ।
ಅರುವೆಯನುಟ್ಟನು ಸೆರೆಮರುಳಾದನು ಹುಟ್ಟಮುರಿದನು ಮಡಕೆಯನೊಡೆದನು
ಆದಿಪುರಾತನು ಅಚಲ ಲಿಂಗೈಕ್ಯನು ।
ಗುಹೇಶ್ವರಲ್ಲಯ್ಯಂಗೆ ಮೂಗಿಲ್ಲ ಮಗಳೇ ॥ ೨ ॥

ಬ್ರಹ್ಮವಿಷ್ಣುಗಳ ಮಾಯೆ ತೊತ್ತಳದುಳಿವಂದು ದೇವದಾನವರ ಮಾಯೆ ಅಗಿದಗಿದು ತಿಂಬಂದು
ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ ಕಾಡುವಂದು ನೊಸಲಕಣ್ಣ ಪಂಚಮುಖ
ದಶಭುಜದವರಿಗೆ ಮಾಯೆ ಅರ್ಧಾಂಗಿಯಾದಂದು ಅಷ್ಟಾಶೀತಿಸಹಸ್ರ ಋಷಿಯರುಗಳ ಮಾಯೆ
ತಪೋವನದಲಿ ಕೆಣಕುವಂದು ನಾನು ಮಾಯಾಕೋಲಾಹಳನಾಗಿರ್ದೆ ಕಾಣಾ ಗುಹೇಶ್ವರಾ ॥ ೩ ॥

**ಸೂಚನೆ**

ವಿಮಳೆ ವಿಸ್ತರಿಸಿದೊಡೆ ಕಾರ್ಯ ।
ಕ್ರಮವನಾಲಿಸಿ ಮಾಯೆ ತಾನ ।
ಲ್ಲಮನನಱಿದಿಹೆನೆನಲು ಹೋದನು ನಿಜವ ತೋಱಿಸದೆ ॥

ಮಾಯೆಯನು ಮನ್ನಿಸದೆ ನೂಕಿ ನಿ ।
ರಾಮಯಸದಾನಂದಮೂರ್ತಿ ।
ಶ್ರೀಯನಾಳುವ ಲಿಂಗಸಂಗಿಗಳೆಲ್ಲ ಕೇಳುವುದು ॥
ಮಾಯೆ ಮೋಹಿಸಿ ಮುಟ್ಟಬಂದ ।
ವಿಡಾಯವನು ಮುಱಿದಲ್ಲಮಪ್ರಭು ।
ರಾಯನಾಡುತಲಿರ್ದ ಪರಿಯನು ಲಿಂಗಲೀಲೆಯಲಿ ॥ ೧ ॥

---

೧ ನರಸುವೆ ( ಇ. )

[1]ಗಿರಿಜೆಗೀಶ್ವರನೊರೆದೊಡದನಾ |
ದರಿಸಿ[1] ಬಂದಾ ವಿಮಳೆ ನೆಱೆ[2] ವಿ |
ಸ್ತರಿಸಿ ಹೇಳಲು ಕೇಳಿಯಲ್ಲಮನಾದೊಡಿನ್ನೆಮಗೆ ||
ದೊರಕೆ ನಮ್ಮಿಷ್ಟಾರ್ಥವನು ಸ |
ತ್ಕರಿಸಿ ಸಲಿಸಲು ಸುಲಭದಲಿ ಗೋ |
ಚ[3]ರವೆನಿಸಿ ಕಾಣಿಸುವನೇ[3] ಹೇಳೆಂದಳಾ ಮಾಯೆ || ೨ ||

ಹರನ ಭಕ್ತಿಯ ಮಾಡಿದೊಡೆ ಗೋ |
ಚರಿಸಿ ತೋಱುವನಲ್ಲಮಪ್ರಭು |
ಕರುಣದಿಂದಲಿ ನೀನು ಬಳಿಕಾತನಲಿ ಬಗೆಬಂದ ||
ವರ ಮನೋರಥ[4]ಸಿದ್ಧಿಯನು ಪತಿ |
ಕರಿಸಿ ಪಡೆವು[5]ದು ಕೇಳೆನುತಲಾ |
ದರಿಸಿ ಮಾಯೆಗೆ [5]ಹೇಳುತಿರ್ದಳು ವಿಮಳೆ ವಿನಯದಲಿ || ೩ ||

ಸುದತಿ ನೀನಱುಹಿಸಿದ ಮುನ್ನವೆ |
ಮುದವಲೀಶ್ವರಭಕ್ತಿಯಿಂದಲಿ |
ಮಧುಕನಾಥನ ನಿಚ್ಚ ಪೂಜಿಸುವೆನು ವಿಧಾನದಲಿ ||
ತುದಿಗೆ ನಾನಿನ್ನೇನ ಮಾಡುವೆ |
ನದಱಲಾದೊಡೆ ಕಾಣೆನೆನುವ |
ನಿದಕೆ ನಾ ಬೇಸತ್ತೆನೌ ಕೇಳೆಂದಳಾ ಮಾಯೆ || ೪ ||

ಶಿವ ಶಿವಾ ನೀಪುಣ್ಯವಚನ |
ಶ್ರವಣ ಸಂಭಾವಿಸಿತೆಯಾದೊಡೆ |
ಶಿವನ ಭಕ್ತಿ ನಿರರ್ಥವೆಂದಾ ಮೂಢೆ ತಿಳಿವಂತೆ ||
ವಿವರಿಸುವೆನಾ ಶಿವಸದಾಚಾ |
ರವನು [6]ನಾ ಬಲ್ಲನಿತನೆನುತಲಿ[6] |
ಯುವತಿ ಮಾಯೆಗೆ ಹೇಳಲುದ್ಯೋಗಿಸಿದಳಾ ವಿಮಳೆ || ೫ ||

೧-೧ ದ ಹದನವ|ಧರೆಗೆ ( ಇ. ) ೨ ಭಾವ ( ಇ. ) ೩-೩ ರಿಸಿ ಕಾಣಿಸುವಂದವನು ( ಇ. ) ೪ ಪರಮ ಭಕ್ತಿಯ ( ಇ. ) ೫-೫ ದೆನುತ್ತ ಪ್ರಭುವಿನ|ಪರಿಯನೆಲ್ಲವ ( ಇ. ) ೬-೬ ಬಲ್ಲಂದದ ಲಿಯೆನುತಾ ( ಇ. )

ಆಗಮಂಗಳನೆಲ್ಲವನು ಚೆ |
ನ್ನಾಗಿ ಶೋಧಿಸಿ ತಿಳಿದು ಸಲೆ ೧ಶೈ |
ವಾ೧ಗಮವೆ ಮಿಗಿಲೆಂದು ೨ಭಾವಿಸಿ ಭಕ್ತಿರತನಾದ೨ ||
ಶ್ರೀಗುರುವಿನುಪದೇಶವಿಲ್ಲದೆ |
ಹೋಗಿ ದೇವಾರ್ಚನೆಯ ಮಾಡಿದೊ |
ಡೇಗುವುದು ಬಱು ಮಾಟ ನಿಷ್ಫಲವೆಂದಳಾ ವಿಮಳೆ || ೬ ||

ಕೊಬ್ಬಿ ಕೋಮಲವಾದ ನಿಗುರಿದ |
ನಿಬ್ಬರದ ನಿಡುಗಣ್ಣುಗಳ ಕಾ |
ಗಬ್ಬನಱಿಯದೆ ಕಬ್ಬಿನಿಚ್ಛೆಗೆ ೩ಮೆಲುವ ಮರುಳಂತೆ೩ ||
ಮಬ್ಬುದೋಱುವ ಮವ೪ದ ಡಂಬಿನ |
ಹಬ್ಬುಗೆಯಲಿಹ ಗುರುನಿರೂಪದ |
ಉ೫ಬ್ಬಿ ಮಾಡುವ ಮಾಟ ನಿಷ್ಫಲವೆಂದಳಾ ವಿಮಳೆ || ೭ ||

ಕಣ್ಣುಗಾಣದ ಕುರುಡನೊಳ್ಳಿಹ |
ಕನ್ನಡಿಯ ಹಿಡಿದಂತೆ ಸಲೆ ಸಂ |
ಪನ್ನ ಸದ್ಗುರುದೀಕ್ಷೆ ೬ಕೈಸಾಱದೊಡೆ ನೋಡು೬ತಲಿ೭ ||
ಚೆನ್ನ ಚಿತ್ತದ ಕಣ್ಣ ತೆಱೆ೮ಯದೆ |
ಯನ್ಯವಿಧಿಯಲಿ ಭಜಿಸಿ ಭಾವಿಸಿ |
ಬನ್ನಬಟ್ಟರೆ ತುದಿಗೆ ನಿಷ್ಫಲವೆಂದಳಾ ವಿಮಳೆ || ೮ ||

ಮೂಗರಾದವರೇನ ನೋಡಿದೊ |
ಡೇಗುವರು ದಿಟವಾ೮ ಪ್ರಕಾರದ |
ಲಾಗಮಾಚಾರಿಯನ ಮಂತ್ರಗ್ರಹಣನೆಲಸಿದೊಡೆ೯ ||
ಹೋಗಿ ದೇವಾರ್ಚನೆಯ ಮಾಡಿದೊ |
ಡಾಗುದೋಱಸಲಱಿಯದಿಚ್ಛಾ |
ಭೋಗದವರಿಗೆ ತುದಿಗೆ ನಿಷ್ಫಲವೆಂದಳಾ ವಿಮಳೆ || ೯ ||

---

೧-೧ ನಗ|ವಾ ( ಇ. ) ೨-೨ ಭಕ್ತಿಯ ಮಾಡುತಿರಬೋಲಿದು ( ಇ. ) ೨ ಗ ( ಉ, ಗ. ) ೩-೩ ಬಿದಿರ ಮೆಲುವಂತೆ ( ಇ, ಮು. ) ೪ ನ ( ಇ. ) ೫ ಪಾತ ( ಇ. ) ೬-೬ ಗೊಳ್ಳದೆ ನೀನು ಬುದ್ಧಿಯಲಿ ( ಜ. ) ೭ ನೆನೆವು ( ಒ. ) ೮ ನೋಡಾ ( ಇ. ) ೯ ಸೋಂಕದಿರೆ ( ಇ. ) ; ನೆಲಸಿರದೆ ( ಒ. )

ತಿಳಿಯೆ ಶೋಧಿಸಿ ಕರಗಿ ಕಸನಾ |
ದಿಳೆಯೊಳೊಳ್ಪಿಪ [1]ಬೆಳೆಯೊಯ್ಯನೆ[1] |
ಹುಳುಕು ಹುರಿಕರಿಯಾದ ಬೀಜವ ಬಿತ್ತುವವರಂತೆ ||
ಲಲಿತ ದೇವಾರ್ಚನೆಯ ಕಾಲಂ |
ಗಳಲಿ ವಿಾಸಲುಗೆಟ್ಟ ಸಾಧನ |
ಗಳಲಿ ಪೂಜೆಯ ಮಾಡೆ ನಿಷ್ಫಲವೆಂದಳಾ ವಿಮಳೆ || ೧೦ ||

ಕಿವಿಗೆ ಕಂಪನು ಮೈಗೆ ರೂಪನು |
ಸವಿಯನಕ್ಷಿಗೆ ನಾಸಿಕಕೆ ಶ |
ಬ್ದವನು ಸಲಿಸುವ ಮರುಳತನದಲಿ ದೇವ[2]ತಾಮುಖದ[2] ||
ವಿವರಗಳನೇನುವನು ತಿಳಿಯದೆ |
ತವಕ ಮಿಗೆಯನ್ಯೋನ್ಯವಸ್ತು |
ಪ್ರವರದಲಿ ಪೂಜಿಸಲು ನಿಷ್ಫಲವೆಂದಳಾ ವಿಮಳೆ || ೧೧ ||

ಊನವಿಲ್ಲದೆ ತೀವಿ ಜೆಲುವೆನಿ |
ತಾನುವಿರುತಿರೆ ಜೀವವೆಂಬ ನಿ |
ಧಾನವಿಲ್ಲದದೊಪ್ಪುವುದೆ ಕೇಳಾ ಪ್ರಕಾರದಲಿ ||
ಏನು ಮಾಡಿದೊಡೇನು ಮನದವ |
ಧಾನಭಕ್ತಿಯಲಿರದೆ ವಿಷಯ |
ಸ್ಥಾ[3]ನಗಳನಪ್ಪಿದೊಡೆ ನಿಷ್ಫಲವೆಂದಳಾ ವಿಮಳೆ || ೧೨ ||

ತರುಣಿ ನಿನಗುಪದೇಶವಿಲ್ಲವೊ |
ನಿರುತ ಮಂತ್ರವಿಹೀನವೋ ಮೇಣ್ |
ಪರಮತಂತ್ರ [4]ಕ್ರಿಯೆ ಕಲಾಪಗಳೂನವೋ ಬಱಿದೆ[4] ||
ಹರನ ಭಕ್ತಿ ನಿರರ್ಥವೆಂ[5]ದು |
ಚ್ಚರಿಸಲ[5]ಹುದೇ[6] ಮಾಯೆ ನಿನ್ನಯ |
ಮರುಳುತನಗಳ ಮಱೆದು ಕಳೆ ಸಾಕೆಂದಳಾ ವಿಮಳೆ || ೧೩ ||

---

೧-೧ ಬೆಳೆಯ ಬಿತ್ತಿದೆ ( ಜ. ) ೨-೨ ಗರ್ಸಿಸುವ ( ಜ. ) ೩ ಧ್ಯಾ ( ಇ. ) ; ಸ್ಥಾ ( ಎ, ಕ, ಖ, ಚ. ) ೪-೪ ಕಳಾಪಗಳು ತಾನಿಲ್ಲವೋ ಮೇಣು ( ಇ. ) ೫-೫ ದಾಚರಿಸಬ ( ಇ. ) ೬ ಬಯಸಿದೆ ( ಜ. )

ಎನಲದೆಲ್ಲವ ಕೇಳಿ ತನ್ನ[೧]ಯ |
ಮನಕೆ ಸೊಗಸದೆ ಬಳಿಕ ನಾನಿ |
ನ್ನಿನಿತು ಕುಶಲದ[೨] ಗೊಡವೆಗಾಱ[೩]ನು ಬಲ್ಲ ಪರಿಯಿಂದೆ ||
ನೆನೆದು ನನ್ನಿಚ್ಛೆಯಲಿ ದೇವಾ |
ರ್ಚನೆಯ ಮಾಡಿದೆನಿನ್ನು ಸಾಕೆಂ |
ದೆನುತ ಬೇಸಱಕೆಯಲಿ ನುಡಿದಳು ವಿಮಳೆಗಾ ಮಾಯೆ || ೧೪ ||

ಆದೊಡಿ[೩]ವಳಂತಸ್ಥ[೩]ವೇ ವಿಧಿ |
ಯಾದುದೋ ನಾನಿವಳ[೪]ನೇಹ[೪]ರಿ |
ಬೋಧಿ[೫]ಸುವೆನೋ ಶಿವಶಿವಾ ಎಂದೆನುತ ತನ್ನೊಳಗೆ ||
ಆದರಿಸುತಿವಳೊಳಗಿದೊಂದು ವಿ |
ನೋದಗೋಷ್ಠಿಯ ಮಾಡಿ ಮೆಲ್ಲನೆ |
ಭೇದದಿಂದಲಿ ಕೇಳಿ ನೋಡುವೆನೆಂದಳಾ ವಿಮಳೆ || ೧೫ ||

ವನಿತೆ ನಾನಿನ್ನೊಂದು ಕೇಳುವೆ |
ನೆನಗೆ ಮುಚ್ಚ[೬]ದೆ ಹೇಳು ಹುಸಿದೊಡೆ |
ನಿನಗೆ ಪಾರ್ವತಿಯಾಣೆ ನಿನ್ನಯ ಕೋಮಲಾಂಗದಲಿ ||
ಮನಸಿಜನ ಕೈಮುಸಕ ಮಿಗೆ ಮೇ |
ದನಿಸಿ ನೋಯಿಸುತಿರ್ದವೆಂದೆಂ |
ಬನಿತು ಕುಱುಹಿರಲೇನು ಕಾರಣವೆಂದಳಾ ವಿಮಳೆ || ೧೬ ||

ಆಣೆಗಂಜುವೆನವ್ವ ಕಾಮನ |
ಬಾಣದಲಿ ಭಯಬಟ್ಟು ಬಳಿಕಾ |
ಪ್ರಾಣಪರಿಯಂತರ ದಶಾವಸ್ಥೆಯಲಿ ನೆಱ[೭]ನೊಂದು ||
ಮಾಣದುತ್ತಮವಾದ್ಯವಿದ್ಯಾ |
ಜಾಣನಲ್ಲಮನೆಂಬ ಚೆಲುವ[೮]ನ |
ಕಾಣುತವೆ ಕಂಗೆಟ್ಟು ಕರಗಿದೆನೆಂದಳಾ ಮಾಯೆ || ೧೭ ||

೧ ತನ್ನೆ ( ಉ. ) ೨ ಘಸಣೆಯ ( ಇ. ) ೩-೩ ಡಿನ್ನು ಕಳಂಕ ( ಜ. ) ೪-೪ ನೀ ಪರಿ ( ಜ. )
೫ ಭೇದಿ ( ಉ. ) ೬ ಮಾಜ ( ಇ. ) ೭ ಯಮೆ ( ಇ. ) ೮ ಚದುರ ( ಇ. )
* ಈ ಪದ್ಯವು ( ಇ ) ಪ್ರತಿಯಲ್ಲಿಲ್ಲ.

ಅಲ್ಲಮನು ತಾನೆಂಬ ಹೆಸರವ |
ನಲ್ಲಮಪ್ರಭುವಾಗಲಾಪನು |
ಭುಲ್ಲವಣಿಯಲಿ ನಿನ್ನ ಜವ್ವನ ಕೊಬ್ಬಿನಲಿ ಮಱೆದು ||
ಪಲ್ಲವಿ[೧]ಸಿ ನೀ ಕಾಮಿಸಿರ್ದೊಡೆ |
ಖುಲ್ಲತನದಲಿ ವಿಕೃತವೇಷದ |
ಲಲ್ಲಮನೆ ತಾ ಬಂದನೈಸಲೆ ಎಂದಳಾ ವಿಮಳೆ || ೧೮ ||

ಎಂದೊಡಾನೇನಱಿಯೆನಕಟಾ |
ಮಂದಮತಿಯೇ ಅಲ್ಲಮಪ್ರಭು |
ವೆಂದೆನಿಸಿಕೊಂ[೨]ಬುವನು ತಾ[೨] ಪ್ರತ್ಯಕ್ಷ ಪರಬೊಮ್ಮ ||
ಎಂದು ಹೇಳುವರೆಲ್ಲರಿವನೇ |
ಸಂದ ಮದ್ದಳೆಯಲ್ಲಮನು ಬಿಡು |
ಹೊಂದದೌ ನೀ ಹೇಳುವುದು ಹುಸಿಯೆಂದಳಾ ಮಾಯೆ || ೧೯ ||

ಅಕಟ ಮರುಳೇ ಅಲ್ಲಮಪ್ರಭು |
ಸಕಳರಿಗೆ ಸಾಕಾರ[೩]ವಾಗಿಹ |
ಸುಕರ ನಿರ್ಮಳ ಮತಿಗೆ ನಿರ್ಗುಣರೂಪನಾಗಿಹನು ||
ಪ್ರಕಟಿಸುವ ನೀ ನಿನ್ನ ವಿಷಯದ |
ವಿಕಳತನವನು ಬಿಟ್ಟು[೪] ಸಲೆ ಸಾ |
ತ್ವಿಕದ ಬುದ್ಧಿಯಲೀಕ್ಷಿಸೆಂದಳು ಮಾಯೆಗಾ ವಿಮಳೆ || ೨೦ ||

[೫]ಆದೊಡದನಾನಱಿಯೆನೌ ಬೇ |
ಕಾದೊಡಾ ಮದ್ದಳೆಗನನು ದಿಟ |
ಭೇದಿಸಲು ನೀ ಬಲ್ಲೆಯಾದೊಡೆ ತೋಱಿಸುವೆನವನ[೫] ||
ವಾದವೇತಕೆ ನಿನ್ನ ಮನಸಿಗೆ |
ವೇದಿಸುವ ದಿಟವಲ್ಲಮನೆಯುವ |
ನಾದನಾದೊಡೆ ಬಳಿಕ ನೋಡುವೆನೆಂದಳಾ ಮಾಯೆ || ೨೧ ||

---

೧ ತಲ್ಲಣಿ ( ಇ. ) ೨-೨ ಬನು ಕಣಾ ( ಜ. ) ೩ ಮಾನ್ಯ ( ಜ. ) ೪ ಮಾಡು ( ಮು. ) ೫-೫ ಆದಡೇನೌ ವಾದವೇತಕೆ | ಭೇದಿಸಲು ನಾನರಿಯೆ ದಿಟ ಬೇಕಾದೊಡೆಯು ತೋರುವೆನು ನೋಡುವುದಿಂದು ನೀನವನ|| ( ಇ. )

ಎನುತ ವಿಮಳೆಯು ಕೂಡಿಕೊಳುತಾ |
ವನಿತೆ ನಿತ್ಯಸ್ಥಿತಿಯು ದೇವಾ |
ರ್ಚನೆಗೆ ದೇವಾಲಯಕೆ ಹೋದಳು ಸಕಲ ವಿಭವದಲಿ ||
ಮನವೊಲಿದು ಮಧುಕೇಶ್ವರನ ವಂ |
ದನೆಯನೆಲ್ಲವ ಮಾಡಿ ಮಾಯಾಂ |
ಗನೆ ವಿರಾಜಿಸಿ ಬಂದು ನಿಂದಳು ನೃತ್ಯರಂಗದಲಿ || ೨೨ ||

ಹೂಡಿ ಹಣ್ಣಿದ[೧] ಜಗದ ಜಂತ್ರವ |
ನಾಡಿಸುವ ಮಾಯಾಂಗನೆಯು ತಾ |
ನಾಡಿಸುವೆನೆಂಬುದನು ಪ್ರತ್ಯಕ್ಷದಲಿ ತೋರ್ಪಂತೆ ||
ಆಡಿಸುವ ಮದ್ದಳೆಯ ಜೋಕೆಯ |
ಜೋಡಿಸುವನಲ್ಲಮನು ಪಾತ್ರವ |
ನಾಡುವವಳಾ ಮಾಯೆ ಲೋಕವ ಮರುಳು ಮಾಡುತಲಿ || ೨೩ ||

ನೋಟವತ್ತಲು ಮನದ ಬೆಸುಗೆಯು |
ಬೇಟವಿತ್ತಲು ಕಾಯ ಕರಣಗ |
ಳಾಟವತ್ತಲುವಂತರಂಗದ ಬಯಕೆಗಳ ಬಗೆಯು ||
ಕೂಟವಿತ್ತಲು ಕವಲುಗೊಂಡುದು |
ನಾಟಿ ಲಿಂಗದೊಳಲ್ಲಮನೊಳದು |
ನೋಟಕರಿಗಱಿದಾಯ್ತು ಭಾವಿಸೆ ಬೆಡಗು ಮಾಯೆಯಲಿ || ೨೪ ||

ಲಲಿತ ನಿರ್ಮಲ ಚಂದ್ರಕಾಂತದ |
ಶಿಲೆಯು ಹತ್ತಿರೆ ಲತೆಯು ದಾವಾ |
ನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ ||
ತಿಳಿಯಲಱಿಯದ ಜನಕೆ ಮಾಯೆಯ |
ತಳಿತ ಕಾಮಜ್ವಾಲೆಯಲ್ಲಮ |
ನೊಳಗೆ ಪ್ರತಿಬಿಂಬಿಸಿದುದಾತನೆ ಕಾಮಿಯೆಂಬಂತೆ || ೨೫ ||

---
೧ ಕೂಡೆ ಹಣ್ಣಿಸಿ ( ಜ. )

ಶೂಲಿಯೊಳು ^1^ತಾ ಹೂಣೆಸಿದ ಹೀ |
ಹಾ^1^ಳಿಯನು ಮಱುಕಳಿಸಿ ಕಾಮನ |
ದಾಳಿಯಲಿ ತಾ ಸಿಕ್ಕಿಮುಪ ನೆಱೆ^3^ ನೆನೆವ ವೇದೆಯ^2^ಲಿ ||
ತಾಳಮೇಳದ ಗತಿಯ ಗಮಕದ |
ಕೇಲಣೆಯ ಕಾಲಾಟ^4^ ವಿಘಟಿಸಿ |
ಚಾಳಿಯಲಿ ತಬ್ಬಿಬ್ಬುವೋಗು^5^ತಲಿರ್ದಳಾ ಮಾಯೆ * || ೨೬ ||

ಈತನೇ^6^ ದಿಟದಲ್ಲಮನೊ ಮೇ |
ಣೀತ ಮದ್ದಳೆಯಲ್ಲಮನೊ ನಾ |
ನೀ ತರುಣಿಗೀತನನು ತೋಱಿಸಿ ತಿಳಿಯಬೇಕೆನುತ ||
ಪ್ರೀತಿಯಿಂದಲಿ ತನ್ನ ಮನದೊಂ |
ದಾತುರತೆಯನು ಸ್ಥೈರಿಸುತ ಬಳಿ |
ಕೋತು ಮಿಗೆ ತನ್ನೊಳಗೆ ತಾನಿಂತೆಂದಳಾ ಮಾಯೆ || ೨೭ ||

ಸಂದಣಿಸುತಿಟ್ಟಣಿಸಿ ನೆಱೆ^7^ದಿಹ |
ಮಂದಿಯಲಿ ನಾನಿವನನನುಚಿತ |
ದಿಂದಲಿವಳಿಗೆ ನುಡಿದು ತೋಱುವುದೆಗ್ಗ^8^ತನವೆನುತ ||
ಅಂದು ವಿಮಳೆಗೆ ಜಾತಿ ಜಾಣೆಕೆ |
ಯಿಂದಲಭಿನವಲ್ ಪಾಡು ನೋಟಗ |
ಳಿಂದ ಬಳಿಕಲ್ಲಮನ ತೋಱಸುತಿರ್ದಳಾ ಮಾಯೆ || ೨೮ ||

ಆಕೆ ಕಡೆಗಣ್ಣಿನಲಿ ತೋಱದ |
ಡೀಕೆ ನಡುಗಣ್ಣಿನಲಿ ನೋಡುತ |
ವಾ ಕಳಾವಿದನಾಗಿ ಕಾಣಿಸುವಾತನಿಂಗಿತ^9^ವ ||
ಲೋಕದೊಳಗಿಂತಪ್ಪ ಮಾನವ |
ರಾಕೃತಿಯ ನಾ ಕಾಣೆನೆನುತಾ |
ಲೋಕಿಸಿದಳನಿಮಿಷತೆಯಿಂದಾ ವಿಮಳೆಯಲ್ಲಮನ || ೨೯ ||

* ಈ ಪದ್ಯವು ( ಇ. ) ಪ್ರತಿಯಲ್ಲಿ ಇಲ್ಲ.
೧–೧ ಹೂಣಿಸಿದ ಮೋಹದ|ರು ( ಜ. ) ೨ ಮೋಹದ ( ಜ. ) ೩ ಕುಳಾಸ ( ಉ, ಒ, ಕ, ಖ, ಗ, ಜ. ) ೪ ವೆಸಸು ( ಜ. ) ೫ ತಾ ( ಗ. ) ೬ ಮೆರೆ ( ಜ. ) ೭ ದಗಡು ( ಇ. ) ೮ ಯ ( ಉ. ) ೯ ನಳಬಳ ( ಜ. )

ಊಹಿಸುವೊಡಾ ದೇವ ಮಾನವ |
ಚೋಹವನು ತೊಟ್ಟಿ[1]ರ್ದನೋ ಮೇಣ್ |
ಮೋಹದಿಂದಾವೀಕ್ಷಿಸಲು ದಿಟವೆಮ್ಮ ಕಣ್ಣಿಂಗೆ ||
ರೂಹಿನಂದದೊಳಿರ್ದನೋ ಸಂ |
ದೇಹವಾಗಿದೆ ತಿಳಿವೊಡೀತನ |
ಗಾಹು[2] ನಮಗಱಿದಾದುದೆಂದಳು ವಿಮಳೆ ಮನದೊಳಗೆ || ೩೦ ||

ದಿಟಕೆ ಭಾವಿಸಲಾರ ಭಾವನೆ |
ಘಟಿಸಿದಂತಿರೆ ತನ್ನ ರೂಪನು |
ನಟಿಸಿ ತೋಱುವನಾದ ಕಾರಣ ವಿಮಳೆಯಱಿವಿಂಗೆ ||
ಅಟಮಟದಲಹುದಲ್ಲವೆಂಬೀ |
ನಟಣೆಯನೆ ನೆಲೆಗೊಳಿಸುತಿರ್ದನು |
ಪಟುತರಸ್ವಾತಂತ್ರ್ಯಮಹಿಮೆಯ ಮೂರ್ತಿಯಲ್ಲಮನು || ೩೧ ||

ತುಡುಕಿ ವಂದಿ[3]ಸಿ ನೋಡಲಳುಪಿನ |
ತೊಡಕು ತೊಲಗಿಸಿ ಬಳಿಕಲೀತನ |
ಬೆಡಗು ಬಿನ್ನಾಣವನು ಕಾಣಲಿಬಹುದು ನಾವೆನುತ ||
ನುಡಿದು ತೋಱದೆ ಕಣ್ಣ ಕಾಂತಿಯು |
ಕಡೆಗಳಲಿ ಕಾಣಿಸುತಲಿರ್ದಳು |
ಮಡದಿ ಮಾಯೆಗೆಯಲ್ಲಮನ ವರ ಮೂರ್ತಿಯನು ವಿಮಳೆ || ೩೨ ||

ಕಂಗಳಲಿ ಮಾತುಗಳು ತಿಳಿವೊಡೆ |
ಕಂಗಳಲಿ ಮಾಟ[4]ಗಳು ಬಗೆವೊಡೆ |
ಕಂಗಳಲಿ ಸಮ್ಮೋಹ[5]ಗಳು ಕಂಗಳಲಿ ನೇಹಗಳು ||
ಕಂಗಳಲಿ ಸರ್ವಪ್ರಪಂಚುಗ |
ಳಂಗನೆಯರಿಗೆ ಸಹಜವೆಂದೆನೆ |
ಕಂಗಳಿಂದಾ ವಿಮಳೆ ಸೂಚಿಸಲಱಿದಳಾ ಮಾಯೆ || ೩೩ ||

---

೧ ತೋರಿ ( ಮು. ) ೨ ರೂಹು ( ಇ. ) ೩ ಚಿ ( ಇ. ) ೪ ಕೂಟ ( ಮ. ) ; ಪ್ರೀತಿ ( ಇ. ) ; ನೋಟ ( ಒ. ) ೫ ಕಡು ಕೊಂಕು ( ಇ. )

ಬಳಿಕಲೊಯ್ಯನೆ ಬಱಿಯ ಬೇಟದ |
ಬಳಕೆ ಬಳಲಿತು ತನ್ನ ಪ್ರೈಜೆಯ |
ನೆಳಲು ನೆಲಸಿತು ಹೇವ ಹೆಚ್ಚಿತು ಕಾಂಕ್ಷೆ ಕವಲಾಯ್ತು ||
೧ತಿಳಿವು ತಿರುಗಿತು ಲಾಸ್ಯಲೀಲೆಯ |
ಚಳತೆ ಚಂಡಿಸಿ ಹಿಂಗಿ ಹೋಯಿತು |
ಹೊಳೆದುದಲ್ಲಮನಳಬಳವನಱಿವಾಸೆ ಮಾಯೆಯಲಿ೧ || ೩೪ ||

ಮುರಿದುದಾ ಮನವದಱ ಸಂಗಡ |
ಮುರಿದುದಾ ನಸುನೋಟವಾಗಳೆ |
ಮುರಿದುದಾ ಮುಖ ಮುತ್ತಿನೋಲೆಯ ಬೆಳಗ ಪಸರಿಸುತ ||
ತಿರುಗಿ ತೀವಿತು ಲಾಸ್ಯ ಮಧುಕೇ |
ಶ್ವರನ ಸಮ್ಮುಖದಿಂದಲೊಯ್ಯನೆ |
ಸರಿಸಗೊಂಡಿತು ಮತ್ತೆ ಮಾಯೆಯ ಮಾಟವಲ್ಲಮನ || ೩೫ ||

ನೋಟವೆಸೆವುದು ಮುನ್ನ ಮಟ್ಟಿ೨ದ |
ಬೇಟವಲ್ಲದೆ ಬೇಱೆ೩ ಬುದ್ಧಿಯ |
ಕೂ೩ಟದಿಂದ ಲತಾಂಗ ಲಂಬಿಸಿ೪ತಾನತ೫ಸ್ಥಿ೪ತಿಯ ||
ನಾಟೆ ನಲಿವುದು ಚಿತ್ತವೀ ನಟ೬ |
ನಾಟಕನ ಸಿಕ್ಕಿಸುವ ಬಗೆಯಲಿ |
ಮಾಟ ಮಕರಿಸ್ಸಿ ಕಾಣಲಾದುದು ಮತ್ತೆ ಮಾಯೆಯಲಿ || ೩೬ ||

ಈಕೆಯಂಗ೭ವನಱಿದು ನಾವಿ |
ನ್ನೇಕೆ ಸದಮಲ ಸಸ್ವ೮ರೂಪವ |
ಕಾಕರಿಗೆ ಕಾಣಿಸುವುದನುಚಿತವೆನುತ ತನ್ನೊಳಗೆ ||
ಸಾಕೆನುತ ನಟ್ಟ೯ವಿಗತನವನು |
ನೂಕುತಲಿ೯ ಮದ್ದಳೆಯ ತಾನೊಡ |
ಹಾಕಿ ನಗುತಲಿ ಹೋದನಲ್ಲಮನಖಿಳ ಜಗವರಿಯೆ || ೩೭ ||

---

೧-೧ ಹೊಳೆದುದಲ್ಲಮನಳಬಳವು ತಾ | ತಿಳುಹು ತಿರುಗಿತು ಹಾಸ್ಯಲೀಲೆಯ | ಚಳತೆ ಚಂಡಿಸಿ ಹಿಂಗಿ ಹೋಯಿತು ಮಾಯೆಮನದೊಳಗೆ ( ಇ. ) ೨ ಟ್ಟ ( ಅ. ) ೩ ಮಾ ( ಜ. ) ೪-೪ ತನ್ನ ಸ್ಥಿತಿಗ ( ಇ. ) ೫ ತನ ( ಓ. ) ; ನವ ( ಗ. ) ೬ ವೀಕೆಯ ( ಜ. ) ; ವಿಸಿ ನವ ( ಅ. ) ೭ ದ ( ಕ. ) ೮ ಸತ್ಸ್ವ ( ಜ. ) ೯-೯ ವತನವನದ| ನೋಕರಿಸಿ ( ಇ. )

ಹೊಸತಿದೇನಿದ್ದದ್ದು ಸುಮ್ಮನೆ |
ಗಸಣಿಯಿಲ್ಲದಿದೇಕೆಯಲ್ಲಮ |
ಬಿಸುಟು ಹೋದನು ಮದ್ದಳೆಯನೆಂದೆನುತಲಲ್ಲಿರ್ದ ||
ಶಶಿಮುಖಿಯರಾ ಮೇಳದವರಾ |
ಮುಸುಱಿ ನೋಡುವ ನೋಟಕರು [1]ಕಾ |
ಣಿಸದ ಕಾರ್ಯಕೆ ಬೆಗಡುಗೊಂಡರು[2] ಕೂಡೆ[1] ತಮತಮಗೆ || ೩೮ ||

ಆಯಿತೇ ಕಡೆಯಾಟ[3] ಹೂಣಿಕೆ |
ಹೋಯಿತೇ ಹುಸಿಯಾಗಿ ಕಾಮನ |
ಬಾಯ ಬಾರಿಗೆ ಬಿದ್ದೆನೇ ನಗುವವರಿಗೆಡೆಯಾಗಿ ||
ಹಾ ಎನುತ ಹಮ್ಮೈಸಿ ಹಲುಬುತ |
ಬಾಯ ಬಿಡುತಲಿ ಮಱುಗುತಿರ್ದಳು |
ಮಾಯೆ ಮಾಣದೆಯಲ್ಲಮಪ್ರಭುರಾಯನಗಲಿದರೆ || ೩೯ ||

ಬಾಲೆ ಹಂಬಲಿಸಿದೊಡೆ ಫಲವೇ |
ನೇಳು ತಡೆದಿರದ[4]ಲ್ಲಮನ ನೀ |
ರೇಳು ಲೋಕದಲಱಸಿ ನೋಡುವೆವೆನುತಲಾ ವಿಮಳೆ ||
ಹೇಳಿದೊಡೆಯಹುದೆನುತ ಚಿತ್ತವ[5] |
ತಾಳಿ ತರಹರಗೊಂಡು ಬಳಿಕಲಿ |
ಕಾಲು ನಡೆಯಲಿ ಮಾಯೆ ನಡೆದಳು ಕೆಳದಿಯರು ಸಹಿತ || ೪೦ ||

ನೆರೆದು ನೆಱ[6] ಬೆಱಗಾಗಿ ನೋಡಿರೆ[7] |
ಧರಣಿಪತಿಯ ಕುಮಾರಿ ಕಾಮಾ |
ತುರದಲಲ್ಲಮನೆಂಬ ಮದ್ದಳಿಗಂಗೆ ಮನಸೋತು ||
ಮರುಳುಗೊಂಡಕಟವನ ಬೆನ್ನಲಿ |
ಹರಿದು ಹೋಗುತಲಿಹಳೆಯೆ[8]ನುತಲಿ |
ಪುರದೊಳಗೆ ನೋಟಕರು ಸಂದಣಿಸಿದರು ಬೀದಿಯಲಿ || ೪೧ ||

---

೧–೧ ಶಂ | ಕಿಸುವ ಮನದೊಳು ಬೆರಗುವಿಡಿದರು ಕೂಡೆ ( ಗ. ) ೨ ಬೆರಗುವಟ್ಟರು ( ಇ. ) ೩ ಯಕಟ ( ಉ, ಒ, ಗ, ಚ, ಜ. ) ೪ ತಡೆಯದಿರ ( ಇ. ) ೫ ಚಿಂತೆಯ ( ಇ. ) ೬ ನೆರೆದ ಜನ ( ಗ. ) ; ನೆರವಿ ನೆರೆ ( ಇ. ) ೭ ನೋಡುತ ( ಇ. ) ೮ ಲೈದಳೆ ( ಗ, ಮ. )

ಹೋಗುತಿರ್ದಳು ಹೊಲಬ ಕೇಳುತ |
ಬೇಗ ಬೇಗದಲಲ್ಲಮನನಾ |
ವಾಗ ಕಾಬೆವೊ ಎಂಬ ಮನದಾ[1]ತುರದ ತವಕದಲಿ ||
ಆಗಲಡವಿಯ ಬಿದ್ದು ನೆಱೆ[3] ಭೂ |
ಭಾಗದಲಿ ವನಚರಿಯರೆಂಬವೊ |
ಲಾಗಿ ಮಾಯಾದೇವಿ ವಿಮಳೆ ಸಮಸ್ತ ಸಖಿನಿವಹ || ೪೨ ||

ಕಲ್ಲು ಕೊರಡುಗಳುರಿವ ಹುಡಿ ಜಡಿ |
ಮುಳ್ಳುಗಿಡು ಮಡು ತೆವರು ಮೊಳೆಗಳು |
ಹಳ್ಳ ಹಾವಸಿ ಹಾವು ಹುಲಿ ಕಾಡಾನೆ ಕೋಣಗಳು[2] ||
ಕೊಳ್ಳ ಕುತ್ತುಱು ಹೆಮ್ಮರಂಗಳು |
ಪಲ್ಲವಿಸಿ ಜೀರೆಂಬ ಕಾನನ |
ದಲ್ಲಿಯಱಸುತ ಬರುತಲಿರ್ದಳು ಮಾಯೆಯಲ್ಲಮನ || ೪೩ ||

ಬಿಸಿಲು ಸುಟ್ಟುರುಗಾಳಿ ದೆಸೆಗಳ |
ಮುಸುಗುತಿಹ ಕೆಂದೂಳಿ ಕಾಳ್ಗಿ |
ಚ್ಚೈಸೆವ ನಟ್ಟಡವಿಯಲಿ ನಡೆಳಿದ್ಯೈತರುತಳಿ ಕಾಲೊಡೆದು ||
ಬಸವಳಿದು ಬೀಳುತ್ತಲೇಳುತ |
ಹಸಿವು ತೃಷೆ ಬಳಲಿಕೆಗಳಲಿ ಧೂ |
ಷಿಸುತ ಬಂದಳು ಮಾಯೆ ತಾನಲ್ಲಮನನಱಸುತಲಿ || ೪೪ ||

ಸೂಡುತಲಿ ಬಿಡು ಜಡೆಗಳನು ಕೈ |
ಗೂಡುತಲಿ ಕಡವಸ ವಿಭೂತಿಯ |
ಗೂಡು ಸಂವರಿಸುತ್ತ ಲಾಕುಳ ಯೋಗವಟ್ಟಗೆಯ ||
ಜೋಡಿಸುತ ಜಪತಪಸಮಾಧಿಯ |
ಮಾಡುವವರಾ ಮಾಯೆ ಬರಲೆ |
ದ್ದೋಡಿದರು ಹುಲಿಗಂಡ ಹುಲ್ಲೆಗಳಂತೆ ದೆಸೆದೆಸೆಗೆ || ೪೫ ||

---

೧ ಕಾಮಾ ( ಅ. )  ೨ ಕಾಪ್ಯೋಣ ( ಇ. )  ೩-೩ ದರೆ ಶರುಣ ( ಜ. )



ಬಳ್ಳಿಗಾಂವಿಯಿಂದ ಸುಮಾರು ಆರು ಮೈಲು ಉತ್ತರಕ್ಕೆ ಅಡವಿಯಲ್ಲಿ
ದೇವಾಲಯದಲ್ಲಿರುವ ಬಂದಳಿಕಿ (ಮಾಯಾದೇವಿ) ಯ ವಿಗ್ರಹ

ಕರುಣಿಗಳ ಬಲ್ಲಹನು ಬೋಳೈಸು |
ರರಸ ಭಜಕರ ಬಂಧುವೆನಿಸುವ |
ಪರಮಪಾವನನಲ್ಲಮಪ್ರಭು ತಾನೆ ತನ್ನೊಳಗೆ[೧] ||
ವರ ತಪೋಧನರಂಜಿಕೆಯನಾ |
ತರುಣಿಯರ ಬಳಲಿಕೆಯ ನಾಸೆ |
ಪರಿಹರಿಸಬೇಕೆನುತಲಾಕ್ಷಣ ಸುಳುಹಿಪು ತೋರಿದನು || ೪೬ ||

ನಿಲಿಸಿ ಭಯ ಬೇಡೆಂದು ತಾಪಸ |
ಕುಲಕೆಯುಭಯವ ಕೊಟ್ಟು[೩] ಕರುಣದ |
ಬಳಕೆಯಲಿ ತಾನವರಿಗೊಬ್ಬ ತಪಸ್ವಿಯಂದದಲಿ ||
[೪]ನಲಿದು ಹರಿತಹ ಮಾಯೆಯನು[೪] ಮೂ |
ದಲಿಸಿ ಮುರಿದೋಡಿಸುವೆನೆನುತಲಿ |
ಸುಳುಹುದೋರಿದನಾಕೆಗಲ್ಲಮ ಮುನ್ನಿನಂದದಲಿ || ೪೭ ||

ತೃಷೆಗಳಳಿತುವು ಕಾಣುತಲಿ ಕಡು |
ಪಸುಗಳಡಗಿದವಡವಿಯಲಿ ಕಂ |
ಪಿಸುತ ಮುಗ್ಗುತ ಕೆಡವುತಲಿ ಮಿಗೆ ಬಂದ ಬಳಲಿಕೆಯು ||
ಹುಸಕವಾದುದು ವಿಶ್ರಮಿಸಿದರು |
ಶಶಿಮುಖಿಯರೆಯ್ತಂದು ಕಾಣುತ |
ಮುಸುಕಿ ಮುತ್ತಿದರಲ್ಲಮನ ಶ್ರೀಪಾದಪಂಕಜವ || ೪೮ ||

ಲೇಸು ಮಾಡಿದೆಯಯ್ಯ ಮಾಯೆಯ |
ನೀಸುದಿನ ಮನವೊಲಿಸಿ[೫] ಕಡೆಯಲಿ |
ಘಾಸಿ ಮಾಡುವದುಚಿತವೇ ನಿನಗೆನುತ ಕೆಳದಿಯರು ||
ಆ ಸದಾನಂದೈಕಮೂರ್ತಿ ವಿ |
ಲಾಸಿಯಲ್ಲಮಲಿಂಗನಿದಿರಲಿ |
ಸೂಸಿದರು ತಮ್ಮೊಡತಿಯಾಸಱು ಬೇಸಱಿಲ್ಲವನು || ೪೯ ||

---

೧ ತನ್ನ ಮನದೊಳಗೆ ( ಇ, ಉ, ಕ. ) ೨ ಲಲ್ಲಮ ಕಾದು ( ಮ. ) ೩ ಸಿಪ್ತು ( ಕ. ) ೪-೪ ಹಳಿ ಹಳಿದು ಮಾಯೆಯನು ತಾ ( ಅ. ) ೫ ಹೊಂದಿದ್ದು ( ಅ. ) ; ನೀನೊಲಿದು ( ಗ. )

ಆರು ಮೊದಲಲಿ ಬಯಸ ಹೇಳಿದ |
ರಾರು ಕಾಣುತ ಕರೆಸ ಹೇಳಿದ |
ರಾರು ತನ್ನನು ಬಳಿಕ[೧]ದಾಸಿಸ ಹೇಳಿದವರಾರು[೧] ||
ನಾರಿಯರಿಗಿದು ಸಹಜ ಸಂಚಲ |
ಕಾರಣಿಕತನ[೨] ತನ್ನ ತಾನೇ |
ದೂರಿಸಿದೊಡಾನೇನ ಮಾಡುವೆನೆಂದನಲ್ಲಮನು || ೫೦ ||

ಹೇಳಬಾರದು[೩] ನೀನು ಮಾಡಿದ |
ಬೇಳುವೆಯು ಬೇಗೆಯನು ಲೋಗರ |
ನಾಳವಾಡಿಯೆ ನುಡಿದೆಯಲ್ಲದೆ ನೀನು ಕುಹಕದಲಿ ||
ಕೀಳಿಲಲಿ ಬಾಯ್ಬಿಟ್ಟು[೪] ಮಾಯೆಯ |
ವೇಳೆಯನು ಕಾಯ್ದಿರ್ದು[೫] ಕಡೆಯಲಿ |
ಕೇಳು[೬] ಮಾಡಿಯೆ ನುಡಿದೆಯೆಂದರು ಸತಿಯರಲ್ಲಮನ || ೫೧ ||

ತಾನೆ ಕಂಗೆಟ್ಟಿರಲು ಕರುಣಿಸಿ |
ನಾನು ಸುಳಿದರೆ ನನ್ನನಾರೆಂ |
ದೇನುವನು ಭಾವಿಸದೆ ಬೆಬ್ಬನೆ ಬೆಚ್ಚಿತಹಂಕರಿಸಿ ||
ತಾನೆ ತನ್ನ ವಿಕಾರದಿಂದಿರ |
ಲೇನು ಮಾಡುವೆ ಬಳಿಕ ಸಾಕೆಂ |
ದಾನು ಬಂದೆನು ಬಿಟ್ಟು ತಪ್ಪೇನೆಂದನಲ್ಲಮನು || ೫೨ ||

ಎಂದ ಮಾತನು ಕೇಳಿ ಕಡು ಖತಿ |
ಯಿಂದಲಹುದ್ಕೆ ಧೂರ್ತ ನೀ ಗತಿ |
ಯೆಂದು ನಂಬಿದೊಡೊಳ್ಳಿತಾಯಿತು ಬಳಿಕ ಮತ್ತೇನು[೭] ||
ಸಂದ ಸಟೆ ಕುತ್ಸಿತ ಕುಮಂತ್ರದ |
ಬಂದಿಕಾಱನು ಚಾಟು ಚಪಳಿಗ[೮] |
ನೆಂದು ನಾ ಮುಂದಱಿ[೯]ಯೆ[೯]ನೆಂದಳು ಮಾಯೆಯಲ್ಲಮನ || ೫೩ ||

---

೧-೧ ಪೇಕ್ಷೆಯ ಮಾಡ ಹೇಳಿದರು ( ಇ. ); ದಾಸಿನ ಮಾಡ ಹೇಳಿದರು ( ಒ, ಜ. ) ೨ ಣೀಕರು ( ಇ. ) ೩ ಬಹುದೇ ( ಅ, ಇ. ) ೪ ಮೇಳವಿಸಿ ಭಯವಟ್ಟು ( ಇ. ) ೫ ಗಾಳ ( ಇ. ) ೬ ಗೆ ( ಇ, ಗ, ಜ. ) ೭ ಮಾತೇನು ( ಇ. ) ೮ ಚಪಳ ಚತುರಿಕೆ ( ಇ. ) ೯-೯ ನೀ ಕೇಳೆಂದಳಾ ಮಾಯೆ ( ಜ. )

ಆರು ಮೊದಲಲಿ ಬಯಸ ಹೇಳಿದ |
ರಾರು ಕಾಣುತ ಕರೆಸ ಹೇಳಿದ |
ರಾರು ತನ್ನನು ಬಳಿಕ[೧]ದಾಸಿಸ ಹೇಳಿದವರಾರು[೧] ||
ನಾರಿಯರಿಗಿದು ಸಹಜ ಸಂಚಲ |
ಕಾರಣಿಕತನ[೨] ತನ್ನ ತಾನೇ |
ದೂರಿಸಿದೊಡಾನೇನ ಮಾಡುವೆನೆಂದನಲ್ಲಮನು || ೫೦ ||

ಹೇಳಬಾರದು[೩] ನೀನು ಮಾಡಿದ |
ಬೇಳುವೆಯು ಬೇಗೆಯನು ಲೋಗರ |
ನಾಳವಾಡಿಯೆ ನುಡಿದೆಯಲ್ಲದೆ ನೀನು ಕುಹಕದಲಿ ||
ಕೇಳಿಲಲಿ ಬಾಯ್ಬಿಟ್ಟು[೪] ಮಾಯೆಯ |
ವೇಳೆಯನು ಕಾಯ್ದಿರ್ದು[೫] ಕಡೆಯಲಿ |
ಕೇಳು[೬] ಮಾಡಿಯೆ ನುಡಿದೆಯೆಂದರು ಸತಿಯರಲ್ಲಮನ[೬] || ೫೧ ||

ತಾನೆ ಕಂಗೆಟ್ಟಿರಲು ಕರುಣಿಸಿ |
ನಾನು ಸುಳಿದರೆ ನನ್ನನಾರೆಂ |
ದೇನುವನು ಭಾವಿಸದೆ ಬೆಬ್ಬನೆ ಬೆಱೆತಹಂಕರಿಸಿ ||
ತಾನೆ ತನ್ನ ವಿಕಾರದಿಂದಿರ |
ಲೇನು ಮಾಡುವೆ ಬಳಿಕ ಸಾಕೆಂ |
ದಾನು ಬಂದೆನು ಬಿಟ್ಟು ತಪ್ಪೇನೆಂದನಲ್ಲಮನು || ೫೨ ||

ಎಂದ ಮಾತನು ಕೇಳಿ ಕಡು ಖತಿ |
ಯಿಂದಲಹುದ್ದೈ ಧೂರ್ತ ನೀ ಗತಿ |
ಯೆಂದು ನಂಬಿದೊಡೊಳ್ಳಿತಾಯಿತು ಬಳಿಕ ಮತ್ತೇನು[೭] ||
ಸಂದ ಸಟೆ ಕುತ್ಸಿತ ಕುಮಂತ್ರದ |
ಬಂದಿಕಾಱನು ಚಾಟು ಚಪಳಿಗ[೮] |
ನೆಂದು ನಾ ಮುಂದಱಿ[೯]ಯೆ[೯]ನೆಂದಳು ಮಾಯೆಯಲ್ಲಮನ || ೫೩ ||

---

೧-೧ ಪೇಕ್ಷೆಯ ಮಾಡ ಹೇಳಿದರು ( ಇ. ) ; ದಾಸಿನ ಮಾಡ ಹೇಳಿದರು ( ಒ, ಜ. ) ೨ ಣೇಕರು ( ಇ. ) ೩ ಬಹುದೇ ( ಅ, ಇ. ) ೪ ಮೇಳಪಿಸಿ ಭಯವಟ್ಟು ( ಇ. ) ೫ ಗಾಳ ( ಇ. ) ೬ ಗೆ ( ಇ, ಗ, ಜ. ) ೭ ಮಾತೇನು ( ಇ. ) ೮ ಚಪಳ ಚತುರಿಕ ( ಇ. ) ೯-೯ ನೀ ಕೇಳೆಂದಳಾ ಮಾಯೆ ( ಜ. )

ಕುಟಿಲ ಕುಚ್ಚಿತ ಧೂರ್ತ ದುರ್ಜನ |
ವಟಮಟಿಗತನ ಕಪಟ ಕಳವಳ |
ಸಟೆ ವಿಕಾರಗಳಲ್ಲಮನವೋ[1] ತಿಳಿಯೆ ಮಾಯೆಯವೋ ||
ದಿಟಕೆ ಬಲ್ಲ[2] ವಿರಿಂಚಿ ಹರಿ ಸುರ |
ಕಟಕ ವರಮುನಿ ಸಿದ್ಧ ಸಾಧಕ |
ಪಟುಗಳೆಲ್ಲರ ಕೇಳಿ ನೋಡೆನುತಿರ್ದನಲ್ಲಮನು || ೫೪ ||

ಒಳ್ಳಿಯವರ್ಕೈ ನೀನು ಕೋ[3]ಬಿಂದ |
ರೆಲ್ಲರೆಸ್ವಾಧೀನ ಪಕ್ಷದ |
ಬಲ್ಲಿದರು ಕೇಳವ[4]ರುಗಳ ಬಲ್ಲವಿಕೆ[4]ಗಳ ಕೇಡ[5] ||
ಎಲ್ಲವನು ಹೇಳುವೆನು ನಿನ್ನಯ |
ಸೊಲ್ಲ ಸೋಲಿಸಿ ಸಿಕ್ಕಿಸುವೆನೆನು |
ತಲ್ಲಿ ಮಾಯೆ ನಿಜ ಪ್ರತಾಪವನಾಡತೊಡಗಿದಳು || ೫೫ ||

ಹರಿಯಯೆದೆಯನು ಮೆಟ್ಟಿದೆನು ಶಂ |
ಕರನನರ್ಧಾಂಗದೊಳು ನೆಟ್ಟನೆ |
ಹರಿಸುಟಿಗೆಯಾಡಿದೆನು ಬ್ರಹ್ಮನ ಬಾಯ ಮುದ್ರಿಸಿದೆ ||
ಸುರನರೋರಗರೆಂಬ ಮಱವೆಯ |
ಮರುಳ ತಂಡವನೆನ್ನ ತೊತ್ತಿರ |
ಶರಣುಹೊಗಿಸಿದೆನೇನ ಕೇಳುವೆಯೆಂದಳಾ ಮಾಯೆ || ೫೬ ||

ಜಿನುಗು ಮತಿಗಳ ಸಿದ್ಧಸಾಧಕ |
ಮುನಿಗಳೆಂಬವದಿರುಗಳನು ನಾ |
ಮುನಿದು ಕಚ್ಚುಟ ಕಂತೆ ಬತ್ತಲೆ ಬೋಳು ಜೆಡೆ ಲೋಚು ||
ಅನಶನವ್ರತ ನಾರು ಬೇರೆಂ |
ಬನಿತಱಲಿ ದಂಡಿಸುವೆನಾ ಕಾ |
ನನದ ಮರುಳರ[6]ನೇನ ಕೇ[7]ಳುವೆಯೆಂದಳಾ ಮಾಯೆ || ೫೭ ||

---

೧ ಳೆಲ್ಲವೆಮ್ಮವೊ ( ಇ. ) ೨ ವನರಿವ ( ಗ. ) ೩ ತೋ ( ಅ, ಇ, ಗ. ) ೪-೪ ರ ಬಲ್ಲವಿವೇಕ ( ಕ, ಗ, ಜ. ) ೫ ಪರಿಯ ( ಇ. ) ೬ ಪಧಿಕರ ( ಅ, ಒ. ) ೭ ಹೇ ( ಉ. )

ಆದಿಯಂತವನಱಿಯದೆಲ್ಲರ |
ವೇದಿಸಿದೆನೆಂದಕಟ ಗರ್ವಿಸಿ |
ಹೋದೆ ನಿನ್ನ ನಿಜಸ್ವಭಾವದ ಮತ್ತತನದಿಂದೆ ||
ಆದೊಡವರಂತಿರಲಿ ಮಿಕ್ಕಿನ |
ವೇದ ಶಾಸ್ತ್ರ ಪುರಾಣವಾಗಮ |
ವಾದಿಯಾದವಱಿಂದೆ ಕೇಳೆನುತಿರ್ದನಲ್ಲಮನು || ೫೮ ||

ಬಿಟ್ಟು ಕಳೆ ಬಱುವಾತ ಶಬ್ದಗ |
ಳೊಟ್ಟಿಲೆಂಬುವು ತನ್ನ ಪಾದದ |
ಘಟ್ಟಣೆಯ ಧ್ವನಿಯವಱಲಾನಿನ್ನೇನ ಕೇಳುವೆನು ||
ಮುಟ್ಟಿ ತಿಳಿವೊಡೆ ಕೇಳು ನಿನ್ನಯ |
ಕಟ್ಟಳೆಯತನವೈಸೆ ಎನುತಾ |
ದಿಟ್ಟ ಮಾಯಾದೇವಿ ನುಡಿದಳು ಮತ್ತೆಯಲ್ಲಮನ || ೫೯ ||

ಎಲ್ಲರನು ನೀ ಜಱಿದು ಝಾಡಿಸಿ |
ಹೊಳ್ಳುಗಳೆದೊಡೆ ನಿನ್ನ ಲೆನ್ನಲಿ |
ಹೊಲ್ಲಪೊಳ್ಳತನಱಿವ ಮಾತಂತಿರಲಿ ಹೇಳೊಂದ ||
ಬಲ್ಲಿಯಾದೊಡೆ ನೀನು ಸಿನ್ನಯ |
ಖುಲ್ಲತನವನು ಬಿಟ್ಟು ನಿರ್ಮಳ |
ದಲ್ಲಿ ಮಾತಾಡೆಂದು ನುಡಿದನು ಮಾಯೆಗಲ್ಲಮನು || ೬೦ ||

ಹರಿಹರಬ್ರಹ್ಮಾದಿಗಳನೆ |
ಲ್ಲರನು ನಿನ್ನಾಧೀನವೃತ್ತಿಯ |
ಲಿರಿಸಿ ಮಿಗೆ ಱೋಡಾಡಿ ಕಾಡುವೆನೆಂದು ನೀ ನುಡಿದೆ ||
ಮರುಳೆ ನಿನ್ನನದಾರು ನಾನಾ |
ಪರಿಯಲಾಡಿಸುವವರು ನೀನಿದ |
ಪರಿಕಿಸದೆ ಗರ್ವದಲಿ ನುಡಿವರೆ ಮಾಯೆ ಕೇಳೆಂದ || ೬೧ ||

೧-೧ ರೂಪದ ಮದದ ( ಇ. ) ೨ ಮುನ್ನಿನ ( ಜ. ) ೩ ಯಾಗಿರ್ದರಲಿ ( ಇ. ) ೪ ಲಾಗಿಹವೆನ್ನ ( ಇ. ) ೫ ಯಾನಿವರಲಿನ್ನೇನ ( ಗ. ) ; ಯೆನಲಿಕಾನಿನ್ನೇನ ( ಜ. ) ೬ ಹೇ ( ಜ. ) ೭ ಗೆ ( ಅ. ) ೮ ಕೇಳಿನ್ನು ( ಇ. ) ೯ ಯೊಡನಾಡಿ ಕಾದುವೆ ( ಗ. )

ಆರನಾರಾಡಿಸುವರೆಂಬುದ |
ನಾರು ಬಲ್ಲರು ಸಾಕು ಬಱಿಯ ವಿ |
ಚಾರವಂತಿರಲಿನ್ನದೇಂ ಹಱಿಮಾತನಾಡಿದರೆ ||
ಸಾರಲಱಿವವೆ ನಮಗೆ ನಮ್ಮ ಮ |
ನೋರಥಂಗಳು ನಿನ್ನ ಧೂರ್ತ ವಿ |
ಕಾರವೆಲ್ಲವ ಬಿಟ್ಟು ಕೃಪೆ ಮಾಡೆಂದಳಾ ಮಾಯೆ || ೬೨ ||

ಮಾಡಿದನಿತಱ ಕರ್ಮಫಲ ಕೈ |
ಗೂ[೧]ಡಿತುಳ್ಳುದು[೨] ನಿನಗ[೩]ದೇನನು |
ಬೇಡುತಿಹೆ ಬೇಸಱದೆ ಬಱುದೆಗೆ ಬಂದು[೧] ಬೆಂಬಿಡದೆ ||
ಕಾಡಬೇಡಿನ್ನೇಳು ಸಖಿಯರ |
ಕೂಡಿಕೊಳುತಲಿ ಮರಳಿ ನಿನ್ನಯ |
ಬೀಡ ಸಾರುವದೊಳ್ಳಿತೆಂದನು ಮಾಯೆಗಲ್ಲಮನು || ೬೩ ||

ಭಾಷೆ ಸಲ್ಲದೆ ಹೋಯಿತೆನ್ನಯ |
ವಾಸಿ ವರ್ಧಿಸಿ ಹೊತ್ತುತಿದೆ ಕೈ |
ಲಾಸದವರಿದ ಕೇಳಿ [೪]ನಗುವಂತಾಯಿತೇ ಎನಗೆ[೪] ||
ಈಸು ಧಾವತಿಯಿಂದೆ ನಾ ಕಡು |
ಘಾಸಿಯಾದೆನು ಬೆಂದ ಹುಣ್ಣನು |
ಕೀಸುವರೆ ಕಂಬಿಯಲಿ ಕೇಳಕಟೆಂದಳಾ[೫] ಮಾಯೆ || ೬೪ ||

ಮಿಕ್ಕು ಮಿಗೆ ಸಾಸುವೆಯ ರಾಶಿಯು |
ನೊ[೬]ಕ್ಕಿದೆತ್ತಿಗೆ ಮೇದು[೭] ಮೆಲುಕಿಱಿ |
ವಕ್ಕಱುಂಟೇ ಮರುಳೆ ನೀನಾ ವಿಧಿಯ ಪರಿಗಳಲಿ ||
ಹೊಕ್ಕು ಹೋರಟೆಗೊಂಡು ಕಾಮದ |
ಲುಕ್ಕಿ ಬಳಿಕಿನ್ನೇನ[೮] ಕೃಪೆಯನು |
ಲೆಕ್ಕಿಸಲು ಕೈಸಾರಬಲ್ಲುದೆ ಮಾಯೆ ಕೇಳೆಂದ || ೬೫ ||

---

೧-೧ ಡಿದೆಯಿತರೆ ನಮಗದೇನನು | ಮಾಡಹೇಳುವೆ ನೀನು ಬಂದದ್ದೇನು ( ಜ. ) ೧ ಬಂದೆ ( ಇ. ) ೨ ಗೂಡಲುಳ್ಳುದು ( ಇ. ) ೩ ನೀನ ( ಉ. ) ೪-೪ ನುಡಿವಂತಾಯಿತಿಂದೆನಗೆ ( ಇ. ) ೫ ಕೃಪೆಯಾಗೆಂದಳಾ ( ಅ. ) ೬ ಸೊ ( ಜ. ) ೭ ಮೆದ್ದು ( ಜ. ) ೮ ಸ್ನನ್ನ ( ಅ. )

ಆವ ಪರಿಯಿಂದಾದೊಡೇನೈ |
ದೇವಪೂಜೆಯ ಮಾಡಿದೊಡೆ ಸಂ |
ಭಾವಿಸಲು ಬೇಡವೆ ಮದೀಯ ಮನೋರಥಾದಿಗಳ ||
ಭಾವಿಸಲು ಬರುತಿದೆ ನಿರರ್ಥಕೆ |
ದಾವತಿಯೆ ಕಡೆತನಕ ದಿಟಕೆಯ |
ದಾವ ಕೊಱತೆಯ ನಾನು ಮಾಡಿದೆನೆಂದಳಾ ಮಾಯೆ || ೬೬ ||

ತರಳೆ ತನ್ನಯ ಹೊನ್ನು ಸಲ್ಲದೆ |
ತಿರುಗಿ ಬಂದೊಡೆಯಕ್ಕಸಾಲೆಯ |
ದುರುಳತನದಲಿ ಬಯ್ಯಬಹುದೇ ನೀನು ಮತಿಗೆಟ್ಟು ||
ಹರನನರ್ಚಿಸುವಂಗಭೇದಾಂ |
ತರವನಱಿಯದೆ ಸಟೆಯ ಭಕ್ತಿಯ |
ಭರದಲೀತಕೆ ಫಲವ ಬಯಸುವೆ ಮಾಯೆ ಕೇಳ್[೧]ಂದ || ೬೭ ||

ನಾನು ನಿನ್ನಲಿ ಸುಖವ ಸುಱಿದು[೨] ಸು |
ಮಾನದಲಿ ನಿನ್ನಿಂದ ಶಿವತ |
ತ್ವಾನುಭಾವದ ನಿಜವನಱಿದೆನ್ನಯ ಪ್ರತಿಜ್ಞೆಯನು ||
ಊನವಿಲ್ಲದೆ ಸಲಿಸಿ ಶಿವನಾ |
ಸ್ಥಾನದಲಿ ನಾ ಮೆಱೆವೆನೆಂಬಭಿ |
ಮಾ[೩]ನದಲಿ ನಂಬಿರ್ದೆ[೪]ನೆಂದಳು ಮಾಯೆಯಲ್ಲಮನ || ೬೮ ||

ಹಡೆವ ಸೂಳೆಗೆ ಸೊಗಸು[೫] ಹುಟ್ಟದೆ |
ಗುಡಿಯ[೬] ಸುಡುವಂದದಲಿ ನಿಜ ಜಂ |
ಜಡದಲಿಮ್ಮನವಾಗಿ ಭಕ್ತಿಯ ಮಾಡಿ ಸಂಫಲವ[೭] ||
ಪಡೆಯಲಿಲ್ಲದೆ ಬಂದು ನೀ ಬ[೮]ಱು |
ನುಡಿಗಳಿಂದಲಿ ನಮ್ಮ ಮೆಲ್ಲನೆ |
ತೊಡಕಿಕೊಂಡೊಡೆ ಸಿಕ್ಕನಲ್ಲಮ ಮಾಯೆ ಕೇಳೆಂದ || ೬೯ ||

---

೧ ಹೋಗೆ ( ಅ. ) ೨ ಸುಳುಹನರಿದು ( ಅ. ) ೩ ವಿಧಾ ( ಗ. ) ೪ ನಾಂ ಬಂದೆ ( ಕ. )
೫ ಸೊಬಗು ( ಇ, ಉ, ಒ, ಕ, ಗ, ಜ. ) ೬ ಲ ( ಇ, ಉ, ಒ, ಜ. ) ೭ ಸತ್ಪಥವ ( ಇ. )
೮ ಬಿ ( ಇ. ) ; ದು ( ಉ. )

ನಮ್ಮನೊಲ್ಲದುದಲ್ಲದೀ ಪರಿ |
ನಮ್ಮನೆಲ್ಲರ ಮುಂದೆ ಭಂಗಿಸಿ |
ಹೆಮ್ಮೆಗೆಡಿಸುವ ಪರಿಯ ನೋಡಾ ಎನುತ ಮನ ಮಱುಗಿ ||
ಇಮ್ಮೆ ಬೆಂದವಳಿದ್ದಲಂತಿರೆ |
ಹಮ್ಮವಿಸಿಯೊಱಗುತಲಿ ವಿಮಳೆಯ |
ನೆಮ್ಮದಳು ನಿಲಲಾಱದಾಳಾಪಿಸುತಲಾ ಮಾಯೆ || ೨೦ ||

ಬೆಱಗುವಡೆದಿರೆ ನೆಯ್ದಿಲೆಗೆ ನೇ |
ಸಱನ ನೆಮ್ಮುಗೆಯಾದ ತೆಱನಲಿ |
ಮುಱಿವಡೆದ ಮಾಯಾಂಗನೆಯ ಮುಖಭಂಗವನೆ ಕಂಡು ||
ಮಱುಗುತಿರ್ದರು ಕೂಡೆ ಕೆಳದಿಯ |
ರುಱುಬಿ ಸುಮ್ಮನೆ ಮಾಱು ಮಾತಿಗೆ |
ಹಱಿವನೆಣಿಸುತ ವಿಮಳೆ ಬಳಿಕಿಂತೆಂದಳಲ್ಲಮನ || ೨೧ ||

ಶರಣಜನ ರಕ್ಷಾಮಣಿಯೆ ಕಿಂ |
ಕರಚಕೋರಸುಧಾಕರನೆ ಭಾ |
ಸುರದಯಾಂಭೋನಿಧಿಯೆ ನೀನೀ ಸ್ತ್ರೀಯ ತನುಮನವ ||
ಒರಿಸಿ[೧] ನೋಡಿದೊಡಲ್ಲಿ ಭಾವಿಸೆ |
ಹುರುಳು ಬಳಿಕೇನುಂಟು ನಿನ್ನಯ |
ಕರುಣವಾಕೆಯ ಹರಣವೆಂದಳು ವಿಮಳೆ ವಿನಯದಲಿ || ೨೨ ||

ಬಾಲೆ ನೀರಿಗೆ ಹೆಪ್ಪ[೨]ನೆಱೆದರೆ |
ಹಾಲಿನಂತಿರೆ[೨] ಹೆತ್ತು ಭುಂಜಿಸಿ |
ಬಾಳಿದವರಾರುಂಟು ಭಾವಿಸಲಾ[೩] ಪ್ರಕಾರದಲಿ ||
ಕಾಳು ಮತಿಗಳಿಗಿನಿತು[೪] ಬುದ್ಧಿಯ |
ಹೇಳಿದರೆ ಫಲವೇನು ಸಾಕೀ |
ಖೂಳೆಗಾನಿನ್ನೇನ ಮಾಡುವೆ ವಿಮಳೆ ಕೇಳೆಂದ || ೨೩ ||

---

೧ ಒರೆದು ( ಅ, ಒ, ಗ, ಜ. ) ; ಅರಸಿ ( ಇ. ) ೨-೨ ನಿತ್ತರೆ|ಹಾಲವಪ್ಪುದೆ ( ಅ. ) ೩ ದಿಟ ವಿನ್ನಾ ( ಜ. ) ೪ ಗೆಂತು ( ಒ. )

೧ಕೇಳುಗಬ್ಬುನವೆಣ್ಣ೧ ಕೋಪಿಸಿ |
ಕಾಲಲೊದೆದೊಡೆ ಮೇಣು ಕರುಣಿಸಿ |
ತೋಳಲಪ್ಪಿದೊಡೇನು ಪರುಷವ ಗಂಡನದಱಂತೆ ||
ಬಾಲೆಗೆಂತಾದೊಡೆಯು ನಿನ್ನ ಸ |
ಮೇಳ ಘಟಿಸಿದ ಬಳಿಕ ಮಾಯೆಯ |
ಪಾಲಿಸಲು ಬೇಕೆನುತ ನುಡಿದಳು ವಿಮಳೆಯಲ್ಲಮಗೆ || ೭೪ ||

ವನಿತೆ ನಿನ್ನಯ ಮಾತಹುದು ಕ |
ಬ್ಬುನವದಾದೊಡೆ ಪರುಷ ಮುಟ್ಟಲು |
ಕನಕವಹುದಲ್ಲದೆ ವೃಥಾ ಹಳೆ ಹಂಚು ಹೊನ್ನಹುದೆ ||
ಮನಸು ಸಂ೨ಚಲವಾದ ಮಾಯಾಂ |
ಗನೆಯದೇನನು ಮುಟ್ಟೆ ಮಾಡಿದೊ |
ಡಿನಿತು ಸಂಫಲ೪ವಾಗಲಱಿಯದು೫ ವಿಮಳೆ ಕೇಳೆಂದ || ೭೫ ||

ದೇವ ತಪ್ಪಿದೊಡೇನು ನೀನು ಕೃ |
ಪಾವಲೋಕನದಲಿ ನಿರೀಕ್ಷಿಸಿ |
ದೇವಿಯರ ಹೊಣಿಕೆಂಯ ಸಲಿಸಿದರೇನು ಕುಂದಹುದೆ ||
ದೇವತನಕೂಣೆಯವೆ ಬಱದೆ ವೃ |
ಥಾ ವಿಳಾಸದ ಮಾತ ಬೀಱದೆ |
ಕಾವುದೈ ಕರುಣದಲಿ ಮಾಯೆಯನೆಂದಳಾ ವಿಮಳೆ || ೭೬ ||

ಒಂದು ಬೀಜವ ಬಿತ್ತಿ ಮೇಲ್‌ಮ |
ತ್ತೊಂದು ಫಲವನು ಬಯಸಿ ಬಾತೊಡೆ |
ಬಂದುದಹುದೇ ತನಗೆ ದಿಟವೀ ಮಾಯೆ ಮರುಳಾಗಿ ||
ಮುಂದುಗಾಣದೆ ಮದದ ತಾಮಸ |
ದಿಂದೆ ಚಂಚಲಭಕ್ತಿಭರದಲಿ |
ಬಂದೊಡುಂಟೇ ಸಂ೬ಫಲಂಗಳು ವಿಮಳೆ ಕೇಳೆಂದ || ೭೭ ||

೧–೧ ಕೇಳು ದೇವರೆ ನೀನು ( ಗ. ) ೧ ವೆಂದು ( ಜ. ) ೨ ಚಂ ( ಅ. ) ೪ ನಿಷ್ಫಲ ( ಇ. ) ೪ ಸತ್ಫಲವಾಗಲರಿವುದೆ ( ಅ. ) ೫ ಸತ್ ( ಅ, ಇ, ಗ, ಜ. )

ಆದೊಡೆಲೆ ಘನಮಹಿಮ ನಿನ್ನಯ |
ಪಾದಗಳನೆಂತಾದೊಡೆಯು ಸಂ |
ಪಾದಿಸಿದ ಬಳಿಕಿನ್ನು ನಿನ್ನಯ ಕರುಣವಿದ್ದಂತೆ ||
ಕಾದು ರಕ್ಷಿಸು ಮನಸು ಬಂದೋ |
ಪಾದಿಯಲಿಯೆಂದೆನುತ ಮಧುರಾ |
ಮೋದ ವಚನವ ಸುರಿವು[೧]ತಿರ್ದಳು ವಿಮಳೆಯಲ್ಲಮಗೆ || ೭೮ ||

ವಿಮಳೆ ವಿಮಳೆಯೆನಿಪ್ಪ ಹೆಸರನು |
ಕಮಳಸಂಭವ ನಿನಗೆ ಸಲಿಸಿದ |
ನಮಳಮತಿಯುವ[೨]ನಹುದು ಚಾಗುರೆ ಎನುತ ಪರಿಣಮಿಸಿ ||
ಕ್ರಮದಲಿನ್ನಾದೊಡೆಯು ಮಿಗೆ ವಿ |
ಶ್ರಮಿಸಬೇಕೆಂದೆನುತ ಬಳಿಕ |
ಲ್ಲಮನು ಮಿಗೆ ವಿನಯದಲಿ ಮಾಯಾದೇವಿಗಿಂತೆಂದ || ೭೯ ||

ಕಾಮವೆತ್ತಲು ಪರಮತತ್ವದ |
ಸೀಮೆಯೆತ್ತಲು ತಿಮಿರವೆತ್ತಲು |
ತಾಮರಸಸಖನೆತ್ತಲರಿಸಿನವೆತ್ತ ಬಿಸಿಲೆತ್ತ ||
ಭ್ರಾಮಕದ ನುಡಿ ಸಾಕು ನೀನೆ |
ತ್ತಾ ಮಹಾಘನವೆತ್ತ ಮರುಳೇ |
ಕ್ಷೇಮದಲಿ ನೀ ಬಂದ ಬಟ್ಟೆಯಲಬಲೆ ಹೋಗೆಂ[೩]ದ || ೮೦ ||

ಕನಸು ಮನಸಿನೊಳಾಗಳೆನ್ನಯ |
ತನುವಿನಲಿ ನೀ ಸುಳಿದು ಮಚ್ಚಿಸಿ |
ಯಿನಿತು ಧಾವತಿಗೊಳಿಸಿ ನಿಷ್ಕರುಣದಲಿ[೪] ನೀನೆನ್ನ ||
ಕನಲಿ ನುಡಿದೊಡೆ ನಾನು ಬಿಡುವೆನೆ |
ತನಗೆ ತತ್ತಡೆ ಭಾವಿಸಲು ಸಾ |
ವನಿತು ಬಂದೊಡೆ ಬರಲಿ ಬಿಡೆ ನಾನೆಂದಳಾ ಮಾಯೆ * || ೮೧ ||

---

೧ ನಾಡು ( ಗ. ) ; ನುಡಿವು ( ಒ. ) ೨ ನೀ ( ಇ. ) ೩ ಸಾರೆಂ ( ಇ. ) ೪ ನಿಷ್ಠುರದಲ್ಲಿ ( ಗ. )
* ಈ ಪದ್ಯವು ( ಉ ) ಪ್ರತಿಯಲ್ಲಿಲ್ಲ.

ಕನಸಿನಲಿ ಚೇಳೂಱಿದೊಡೆ ವೇ |
ದನಿಸಿತೆಂದಿರದೆ[1]ದ್ದು ನರಳುವ |
ಮನುಜರುಂಟೇ ಮರುಳೆ ನಿನ್ನ ಮನೋವಿಕಾರಗಳು ||
ನಿನಗೆ ತೋಱಿದೊಡೆಮ್ಮೊಳೇತಕೆ |
ಮನಕತವ[2] ನೀ ಮಾಡುತಿಹೆ ನಾ |
ವಿನಿತು ಗಸಣೆಯ[3] ಗೊಡವೆಗಾಱ[3]ವು ಮಾಯೆ ಕೇಳೆಂದ || ೮೨ ||

ವಾಸಿ ಹುಟ್ಟಿದ ಬಳಿಕ ನಾನಿ |
ನ್ನೇಸುದಿನವಿದ್ದಾದೊಡೆನ್ನಯ |
ಭಾಷೆಯನು ನಾನುತ್ತರಿಸಬೇಕಲ್ಲದುಳಿದಂತೆ ||
ಆಸೆಯಿಲ್ಲದೆ ತಿರಿಗಿದೊಡೆ ಹೆಂ |
ಗೂಸುತನಕದು ಹಾನಿಯಾ[4] ಕೈ |
ಲಾಸಕಾನೆಂತೆಯ್ದುವೆನು ಕೇಳೆಂದಳಾ ಮಾಯೆ || ೮೩ ||

ಕಡಲನೀರುಗಳೆಲ್ಲವಮೃತದ |
ಮಡುಗಳಾದರೆಯಹವು ಸುರಗಿರಿ |
ಕುಡಿವಿಡಿದು ಹಬ್ಬಿದೊಡೆ ಹಬ್ಬುವುದವನಿಮಂಡಲವ ||
ಗಿಡುಗಳೆಲ್ಲವು ಕಲ್ಪತರುವಾ |
ದೊಡೆಯಹವು ತತ್ತದ[5]ನುಗಾಲಕೆ |
ಮಡದಿ ಮಾಯೆಗೆ ಪರಮ ತತ್ವಜ್ಞಾನವಿಲ್ಲೆಂದ || ೮೪ ||

ನುಡಿದು ಸುಣ್ಣನೆ ನೀನು ಮೆಲ್ಲನೆ |
ಸಡಿಲಿ [6]ಹೋದರೆ ನಾನು ನಿನ್ನನು[6] |
ಬಿಡುವೆನೇ ಕೇಳೆನ್ನ ಪ್ರೈಜೆಯ ಸಲಿಸಿದನ್ನಬರ ||
ಒಡಲು ನಿನಗಿಲ್ಲೆಂಬ ಬಿಂಕದ |
ಬೆಡಗು ಬೇಡಿನ್ನೇನ ಮಾಡಿಯು |
ತುಡುಕಿದಲ್ಲದೆ ಮಾಣೆನೆಂದಂಗೈಸಿದಳು ಮಾಯೆ || ೮೫ ||

೧ ರುಳೆ ( ಇ. ) ೨ ತವಕ ( ಇ. ) ೩ ಬೇಟದ ( ಜ. ) ೪ ಯ್ಯೆ ( ಅ. ) ೫ ಪೊಂದಾ ( ಇ, ಜ. ) ; ಎತ್ತಾ ( ಉ, ಒ. ) ೬-೬ ಹೋಗುವೆನೆಂದೊಡೆಯು ನಾ ( ಅ. )
* ಈ ಪದ್ಯವು ( ಇ ) ಪ್ರತಿಯಲ್ಲಿಲ್ಲ.

ಬಯಲ ಬಂಧಿಸಲೆಂದು ಕೃತನಿ |
ಶ್ಚಯವ ಮಾಡಲು ಸಿಕ್ಕಬಲ್ಲುದೆ |
ನಿಯತವೆನ್ನನು ಹಿಡಿದುಕೊಂಬೊಡೆ ನೋಡು ನೀನೆನುತ ||
ಪ್ರಿಯದಲಾಗಳೆ ತನ್ನ ನಿಜ ನಿ |
ರ್ಣಯವ ನಿರ್ಮಿಸಿ ನಿಮಿಷದಲಿ ನಿ |
ರ್ವಯಲಜಾಲವ ಬೀಸಿ ಹೋದನು ಮಾಯೆಗಲ್ಲಮನು || ೮೬ ||

ಜಾಱಿದನು ಬಳಿಕಾತನೀಕೆಗೆ |
ಹೇಱಿದುದು ಕಡು[1] ದುಗುಡ ಸಖಿಯರು |
ನೀಱೆಯನು ಸಂತೈಸಿದರು ನಾನಾ ಪ್ರಕಾರದಲಿ ||
ಗಾಱುದೂಱಿನ ಮಾಯೆಗೀಯೆಗೆ[2] |
ತೋಱಿಸುವನೇ ತನ್ನ ನಿಜವನು[3] |
ಮೀಱಿ ಮೀಸಲನಲ್ಲಮಪ್ರಭು ಗುರು ಗುಹೇಶ್ವರನು || ೮೭ ||

## ಅಂತು ಗತಿ ೭ಕ್ಕಂ ಪದ ೩೭೪ಕ್ಕಂ ಮಂಗಳಂ

---

೧ ಬಲು ( ಅ. ) ೨ ನಿನಗೆಯು ( ಗ. ) ೩ ದಲಿ ( ಉ, ಒ, ಕ. )

# ಬಸವಾದಿ ಪ್ರಮಥರು ಧರೆಗಿಳಿದ ಗತಿ

**ವಚನ**

ಪ್ರಥಮಕಾಲದಲ್ಲಿ ದೇವಗಣ ಮಹಾಗಣ ಸುರಗಣ ಕಿನ್ನರಗಣ ಸಹಿತ ನಮ್ಮ
ಬಸವಣ್ಣನು ಗಣಪ್ರಸಾದಿಯಾಗಿ ಮರ್ತ್ಯಲೋಕಕ್ಕೆ ಮಹವ ತಂದು ಶಿವಗಣವ
ಮಾಡಿದಾತನು ನಮ್ಮ ಬಸವಣ್ಣನು।
ಸ್ವರೂಪಸಾರಾಯವನು ಪದಾರ್ಥವೆಂದಾತ ನಮ್ಮ ಬಸವಣ್ಣನು।
ಕಲಿದೇವರದೇವಾ ನಿಮ್ಮ ಶರಣ ಬಸವಣ್ಣನಿಂದಾನು ಬದುಕಿದೆನು ॥ ೧ ॥

ಮಾರಾರಿಯ ಬೆಸನದಿಂದ ಧಾರುಣಿಗೆ ಬಸವನವತರಿಸಿ
ಸಾರಾಯ ಸದ್ಭಕ್ತಿಯನು ತೋರಿದನು ಶಿವಶರಣರಿಗೆಲ್ಲ।
ಭಕ್ತಿಯ ಪಥವ ಮುಕ್ತಿಯ ಭೇದವ ಸತ್ಯಶರಣರಿಗೆ ಉಪದೇಶವ ಮಾಡಿ
ನಿತ್ಯಲಿಂಗಾರ್ಚನೆಯೊಳಗೆನ್ನನಿರಿಸಿ ರಕ್ಷಿಸಿದಾತ ಚೆನ್ನಬಸವಣ್ಣ ಕಾಣಾ ಕಲಿದೇವರದೇವಾ ॥ ೨ ॥

**ಸೂಚನೆ**

ಗಿರಿಸುತೆಯ ಸಾತ್ವಿಕದ ಕಳೆಯನು।
ವರ ವೃಷೇಂದ್ರ ಪ್ರಮಥಗಣವನು।
ಧರೆಗೆ ಕಳುಹಿದನೀಶನೊಲಿದಲ್ಲಮನನರಿಯಲಿಕೆ ॥

ಲಿಂಗಭಕ್ತರು ತಿಳಿವುದೀ ಪ್ರಭು।
ಲಿಂಗಲೀಲೆಯೊಳಿನ್ನು ಮಾಯೆಯ।
ಭಂಗಿಸಿದ ನಿರ್ಲೇಪನಿಧಿಯಲ್ಲಮನ ಕೃಪೆಯಿಂದೆ ॥
ಹಿಂಗದವನೀತಳದ ಸಕಲ ಜ।
ನಂಗಳನು ಪಾವನವ ಮಾಡಲ।
ನಂಗರಿಪು ನಿಜಗಣವ ಕಳುಹಿದ ಕಥನಕಾರಣವ[೧] ॥ ೧ ॥

೧ ಕೌತುಕವ (ಅ.)

ಮಂದಮತಿಯಲಿ ನಿಜವ ಸಾಧಿಸ |
ಲೆಂದು ಕಳವಳಗೊಂಡು ಹೂಣಿಸಿ[೧] |
ಬಂದೊಡಲ್ಲಮಲಿಂಗ ಸಿಕ್ಕದೆ ಹೋದ ಭೇದದಲಿ ||
ಮುಂದುಗಾಣದೆ ಮೂರ್ಛೆ[೨]ವೋಗುತ[೨] |
ವೃಂದಮಧ್ಯದೊಳಾ ವಿಳಾಸಿನಿ |
ವೃಂದಸಹಿತ ಮಹಾ ಪ್ರಲಾಪಿಸುತಿರ್ದಳಾ ಮಾಯೆ || ೨ ||

ಮಗಳು ಮದ್ದಳೆಯುವನ ಬೆನ್ನಲಿ[೩] |
ಜಗುಳಿಹೋದುದ ಕೇಳಿ ಹರಿತಂ |
ದಗಣಿತ ವ್ಯಾಮೋಹದಲಿ ಮಾಯಾಂಗನೆಯ ಕಂಡು ||
ನಗೆಗೆಡೆಯ [೪]ಮಾಡಿದೆಯೆಲಾ ದೇ |
ಸಿಗನ ಸಂಗವ ಮಾಡಿ ಕೆಡಿಸಿದೆ[೪] |
ಮಗಳೆ ಎನುತಲಿ ಮಱುಗಿದನು ಮಮಕಾರ ಭೂಪಾಲ || ೩ ||

ಬೇಡ ಬೇಡೆಂದಾದಿಕಾಲದೊ |
ಳಾಡಿ ತೋಱಿತೆನೆ[೫] ಮಗಳೆ ತುದಿ[೬]ಯಲಿ |
ಕೇಡು ಬಹುದಿದಱಿಂದಲೆಂದಾನೇಸನೊದಱಿದೊಡೆ[೭] ||
ಕೇಡುಗೊಳಿಸಿದೆ ಕಡೆಯಲಡವಿಯ |
ಗೂಡಿದೌ ನೀನೆನುತ [೮]ಖತಿಯಲಿ |
ಮೂಡಿ[೮] ಮುಳುಗುತ ಮಿಡುಕುತಿರ್ದಳು ಮೋಹಿನೀದೇವಿ || ೪ ||

ಉಮೆಯ ನೇಮವ ಕೊಂಡು ತಾ ನ |
ಲ್ಲಮನ ಸಾಧಿಸಲೆಂದು ಬಂದಳು |
ನಿಮಗೆ ಹೇಳುವೆ ನಾನು ಚಿಂತಿಸಲಿಲ್ಲ[೯] ನೀವಿದಕೆ ||
ದ್ಯುಮಣಿಯಲ್ಲಮ ಸಿಕ್ಕದಾದನು |
ತಮದ ಮಾಯೆಗೆಯದಱ ಚಿಂತಾ |
ಭ್ರಮೆಯಲಡವಿಗೆ ಬಂದಳೆಂದಳು ವಿಮಳೆಯರಸಂಗೆ[೧೦] || ೫ ||

---

೧ ಹುರುಡಿಸಿ ( ಇ. ) ೨-೨ ಯಲಿ ತದ್ ( ಇ. ) ; ಯೊಳು ತಾ ( ಗ. ) ೩ ಸಂಗಡ ( ಅ. ) ೪-೪ ಮಾಡುವರೆ ಪರದೇ | ಸಿಗನ ಸಂಗಡ ಹರಿದಕಟ ಎಲೆ ( ಅ. ) ೫ ರಿದೆ ( ಅ, ಇ. ) ೬ ಕಡೆ ( ಅ, ಉ. ) ೭ ನೋಡಿದರೆ ( ಉ. ) ೮-೮ ಖಾತಿಯ | ಲಾಡಿ ( ಇ. ) ೯ ಲೇಕೆ ( ಮು. ) ; ಬೇಡ ( ಜ. ) ೧೦ ಮೋಹಿನಿಗೆ ( ಗ. )

# ಬಸವಾದಿ ಪ್ರಮಥರು ಧರೆಗಿಳಿದ ಗತಿ

**ವಚನ**

ಪ್ರಥಮಕಾಲದಲ್ಲಿ ದೇವಗಣ ಮಹಾಗಣ ಸುರಗಣ ಕಿನ್ನರಗಣ ಸಹಿತ ನಮ್ಮ
ಬಸವಣ್ಣನು ಗಣಪ್ರಸಾದಿಯಾಗಿ ಮರ್ತ್ಯಲೋಕಕ್ಕೆ ಮಹವ ತಂದು ಶಿವಗಣವ
ಮಾಡಿದಾತನು ನಮ್ಮ ಬಸವಣ್ಣನು ।
ಸ್ವರೂಪಸಾರಾಯವನು ಪದಾರ್ಥವೆಂದಾತ ನಮ್ಮ ಬಸವಣ್ಣನು ।
ಕಲಿದೇವರದೇವಾ ನಿಮ್ಮ ಶರಣ ಬಸವಣ್ಣನಿಂದಾನು ಬದುಕಿದೆನು ॥ ೧ ॥

ಮಾರಾರಿಯ ಬೆಸನದಿಂದ ಧಾರುಣಿಗೆ ಬಸವನವತರಿಸಿ
ಸಾರಾಯ ಸದ್ಭಕ್ತಿಯನು ತೋರಿದನು ಶಿವಶರಣರಿಗೆಲ್ಲ ।
ಭಕ್ತಿಯ ಪಥವ ಮುಕ್ತಿಯ ಭೇದವ ಸತ್ಯಶರಣರಿಗೆ ಉಪದೇಶವ ಮಾಡಿ
ನಿತ್ಯಲಿಂಗಾರ್ಚನೆಯೊಳಗೆನ್ನ ನಿರಿಸಿ ರಕ್ಷಿಸಿದಾತ ಚೆನ್ನಬಸವಣ್ಣ ಕಾಣಾ ಕಲಿದೇವರದೇವಾ ॥ ೨ ॥

**ಸೂಚನೆ**

ಗಿರಿಸುತೆಯ ಸಾತ್ವಿಕದ ಕಳೆಯನು ।
ವರ ವೃಷೇಂದ್ರ ಪ್ರಮಥಗಣವನು ।
ಧರೆಗೆ ಕಳುಹಿದನೀಶನೊಲಿದಲ್ಲಮನನಱುಹುಯಲಿಕೆ ॥

ಲಿಂಗಭಕ್ತರು ತಿಳಿವುದೀ ಪ್ರಭು ।
ಲಿಂಗಲೀಲೆಯೊಳಿನ್ನು ಮಾಯೆಯು ।
ಭಂಗಿಸಿದ ನಿರ್ಲೇಪಸಿದ್ಧಿಯಲ್ಲಮನ ಕೃಪೆಯಿಂದೆ ॥
ಹಿಂಗದವನೀತಳದ ಸಕಲ ಜ ।
ನಂಗಳನು ಪಾವನವ ಮಾಡಲು ।
ನಂಗರಿಪು ನಿಜಗಣವ ಕಳುಹಿದ ಕಥನಕಾರಣವ[1] ॥ ೧ ॥

---

೧ ಕೌತುಕವ ( ಅ. )

ಮಂದಮತಿಯಲಿ ನಿಜವ ಸಾಧಿಸ |
ಲೆಂದು ಕಳವಳಗೊಂಡು ಹೂಣಿಸಿ[೧] |
ಬಂದೊಡಲ್ಲಮಲಿಂಗ ಸಿಕ್ಕದೆ ಹೋದ ಭೇದದಲಿ ||
ಮುಂದುಗಾಣದೆ ಮೂರ್ಛೆ[೨]ವೋಗುತ[೨] |
ವೃಂದಮಧ್ಯದೊಳಾ ವಿಳಾಸಿನಿ |
ವೃಂದಸಹಿತ ಮಹಾ ಪ್ರಲಾಪಿಸುತಿರ್ದಳಾ ಮಾಯೆ || ೨ ||

ಮಗಳು ಮದ್ದಳೆಯವನ ಬೆನ್ನಲಿ[೩] |
ಜಗುಳಿಹೋದುದ ಕೇಳಿ ಹರಿತಂ |
ದಗಣಿತ ವ್ಯಾಮೋಹದಲಿ ಮಾಯಾಂಗನೆಯ ಕಂಡು ||
ನಗೆಗೆಡೆಯ [೪]ಮಾಡಿದೆಯೆಲಾ ದೇ |
ಸಿಗನ ಸಂಗವ ಮಾಡಿ ಕೆಡಿಸಿದೆ[೪] |
ಮಗಳೆ ಎನುತಲಿ ಮಱುಗಿದನು ಮಮಕಾರ ಭೂಪಾಲ || ೩ ||

ಬೇಡ ಬೇಡೆಂದಾದಿಕಾಲದೊ |
ಳಾಡಿ ತೋಱಿ[೫]ನೆ ಮಗಳೆ ತುದಿ[೬]ಯಲಿ |
ಕೇಡು ಬಹುದಿದಱಿಂದಲೆಂದಾನೇಸನೊದಱಿದೊಡೆ[೭] ||
ಕೇಡುಗೊಳಿಸಿದೆ ಕಡೆಯಲಡವಿಯ |
ಗೂಡಿದೌ ನೀನೆನುತ [೮]ಖತಿಯಲಿ |
ಮೂಡಿ[೮] ಮುಳುಗುತ ಮಿಡುಕುತಿರ್ದಳು ಮೋಹಿನೀದೇವಿ || ೪ ||

ಉಮೆಯ ನೇಮವ ಕೊಂಡು ತಾ ನ |
ಲ್ಲಮನ ಸಾಧಿಸಲೆಂದು ಬಂದಳು |
ನಿಮಗೆ ಹೇಳುವೆ ನಾನು ಚಿಂತಿಸಲಿಲ್ಲ[೯] ನೀವಿದಕೆ ||
ದ್ಯುಮಣಿಯಲ್ಲಮ ಸಿಕ್ಕದಾದನು |
ತಮದ ಮಾಯೆಗೆಯದಱ ಚಿಂತಾ |
ಭ್ರಮೆಯಲಡವಿಗೆ ಬಂದಳೆಂದಳು ವಿಮಳೆಯರಸಂಗೆ[೧೦] || ೫ ||

೧ ಹುರುಡಿಸಿ ( ಇ. ) ೨-೨ ಯಲಿ ತದ್ ( ಇ. ) ; ಯೊಳು ತಾ ( ಗ. ) ೩ ಸಂಗವ ( ಅ. ) ೪-೪ ಮಾಡುವರೆ ಪರದೇ | ಸಿಗನ ಸಂಗಡ ಪರಿದಕಟ ಎಲೆ ( ಅ. ) ೫ ರಿವೆ ( ಅ, ಇ. ) ೬ ಕಡೆ ( ಅ, ಉ. ) ೭ ನೋಡಿದರೆ ( ಉ. ) ೮-೮ ಖಾತಿಯ | ಲಾಟಿ ( ಇ. ) ೯ ಲೇಕೆ ( ಮು. ) ; ಬೇಡ ( ಜ. ) ೧೦ ಮೋಹಿನಿಗೆ ( ಗ. )

ಹುಸಿಯನಾಡಳು ವಿಮಳೆ ನಾನಾ |
ಶಶಿಧರಗೆ ಪೈಜೆಯನು ಮಿಗೆ ಪಸ |
ರಿಸಿದೆ ಕೈಲಾಸದಲಿ ಬಂದೆನು ತನ್ನಿಮಿತ್ತದಲಿ ||
ಆಸಮನಲ್ಲಮ ಸಿಕ್ಕದೀಪರಿ[1] |
ನುಸುಳಿ ಹೋದನು ನೀವು ನಮ್ಮಯ |
ದೆಸೆಗೆ ಚಿಂತಿಸಬೇಡೆನುತಲಿಂತೆಂದಳಾ ಮಾಯೆ || ೬ ||

ಕಾರಣವ ಕೈಕೊಂಡು ನಿಮ್ಮ ಕು |
ಮಾರಿಯಾದೆನು ಬಂದು ನ[2]ಮ್ಮಯ |
ಕಾರಿಯವು ಕೈಗೂಡದಾಯಿತ್ತೆನುತ ಪೆತ್ತರಿಗೆ[3] ||
ಹಾರಬೇಡಿನ್ನೆಮ್ಮನೆನುತಲಿ |
ಘೋರನೆದ್ದಾ ಮಾಯೆ ವಿಮಳಾ |
ನಾರಿ ಸಹಿತವೆ ಹೋಗುತಿರ್ದಳು ರಜತಪರ್ವತಕೆ || ೭ ||

ಅಳಲಿದರು ಮಗಳಗಲಿದರೆ ಮಿಗೆ |
ಬಳಲಿದರು ಭಾರಂಕದಲಿ [4]ಕಡು |
ಗಳಲಿದರು ಕಂದಿದರು ಕಳವಳಿಸಿದರು[4] ಮೋಹದಲಿ ||
ತೊಳಲಿದರು ಕಾನನದೊಳಗೆ [5]ಹಂ |
ಬಲಿಸಿ[5]ದರು ಹಮ್ಮೈಸಿದರು ಕೋ |
ಮಳೆಯ ಕಾಣದೆ ಮೋಹಿನಿಯು ಮಮಕಾರ ಭೂಮಿಪನು || ೮ ||

ಕೇಳಿ ಬಂದನು ಬಳಿಕ ಭೂಮೀ |
ಪಾಲಕನ ಗುರು ತಾನೆನುತ್ತಾ |
ವೇಳೆಯಲಹಂಕಾರನಾ ಮಜುಕವನು ಮಾಣಿಸುತ[6] ||
ಹೇಳೆನೇ ನಾನಂದು ಕಾರಣ |
ಬಾಲಿಕೆಯ ಪರಿಗಳನು ಕಾಣುತ |
ಕಾಲದಲಿ ನಿಮಗರಿಯಬಾರದೆ ಭೂಪ ಕೇಳೆಂದ || ೯ ||

---

೧ ದಾದನು ( ಇ. )  ೨ ಬಳಿಕಲೆ ( ಗ. ) ; ಯಾಗುತ ಬಂದೆನೆ ( ಅ. )  ೩ ಲಿಲ್ಲರಿಗೆ ( ಅ. ) ; ಪಿತರರಿಗೆ ( ಉ, ಕ, ಚ. )  ೪-೪ ಕಳ | ವಳಿಸಿದರು ಕಡುದುಃಖದಿಂದಾತ್ಮಜೆಯ ( ಅ. )
೫-೫ ಬಲು | ಜ್ವಲಿಸಿ ( ಇ. )  ೬ ಸಲು ( ಇ. )

ಏನು ಕಾರಣ ಬಂದಳೋ ಬಳಿ |
ಕೇನು ಕಾರಣ ಹೋದಳೋ ನಾ |
ವೇನ ಬಲ್ಲೆವು ಬಱಿದೆ ಚಿಂತಿಸಬೇಡ ಸಾಕೇಳು ||
ನೀನು ನಿಜಪುರಕೆನುತಲೊಡಗೊಂ |
ಡಾ ನರೇಂದ್ರನ ಸತಿಸಹಿತ ದು |
ಮ್ಮಾನವನು ಪರಿಹರಿಸಿ ತಂದನು[೧] ಬಳಿಕಹಂಕಾರ || ೧೦ ||

ಜನಪ ಕೇಳೈ ತಥ್ಯವನು ಮೋ |
ಹಿನಿಗೆ ಮಮಕಾರಗೆಯಹಂಕಾ |
ರನ ಮಹಾ ಕೃಪೆಯುಳ್ಳೊಡಂತಾ ಮಾಯೆ ತಾನೆನಿಪ ||
ತನುಜೆಯರು ಹುಟ್ಟುವುದಪೂರ್ವವೆ |
ಎನುತಲಾಪ್ತರು ಮಂತ್ರಿಗಳು ತ |
ಜ್ಜ[೨]ನಪತಿಯ ಸಂತೈಸಿ ಸುಖದಿಂದಿರ್ದರವನಿಯಲಿ[೩] || ೧೧ ||

ವಿಮಳೆ ಸಹಿತವೆ ಹೋಗಿ ತನಗ |
ಲ್ಲಮನು ಸಿಕ್ಕದೆ ಹೋದ ಕಾರ್ಯ |
ಕ್ರಮವನಾಗಳೆ ಮಾಯೆ ಹೇಳಿದಳತ್ತ ವಿಸ್ತರಿಸಿ ||
ಉಮೆಯದೆಲ್ಲವ ಕೇಳಿ ಚಿಂತಾ |
ಭ್ರಮೆಯಲಿರುತಿರಲಱಿದು ಬಂದಾ |
ರಮಣಿಯನು ಸಂತೈಸಿ ನುಡಿದನು ನಗುತ ಶಶಿಮೌಳಿ || ೧೨ ||

ಸಿಡಿಲುವಕ್ಕಿಯ ಪಕ್ಕವನು ಕಿ |
ತ್ತಡಬಳದ ಬಾಣಸವ ಮಾಡುವ |
ಕಡುಗಲಿಗಳಾರುಂಟು ಕಾಳೋರಗನ ನಿದ್ರೆಯನು ||
ಕೆಡಿಸಿ ಬದುಕುವ ಕೀಲಣದ ಗಾ |
ರುಡಿಗರಾರುಂಟೆನ್ನ ತತ್ವದ |
ತೊಡಕು ದುರ್ಘಟ ಚಿಂತೆಯೇತಕೆ ಗಿರಿಜೆ ಕೇಳೆಂದ || ೧೩ ||

೧ ಸುತಿರ್ದನು ( ಇ. ) ೨ ಮಿಗೆ। ಜ ( ಇ. ) ೩ ರೊಲವಿನಲಿ ( ಅ, ಒ. )

ಅಲ್ಲಮನ ಮುಖದಿಂದಲೀಕೆಯ |
ನಲ್ಲವೆನಿಸಿದೆ ನೀನೆ ಬಳಿಕೀ |
ನಲ್ಲ೧ದೆನ್ನ ಸಮಾನ ಮಾಯೆಯು ಜಱಿದು ಜಾಡಿಸುವ ||
ಬಲ್ಲಿದರದಾರುಂಟು ನಮ್ಮಯ |
ಸೊಲ್ಲಿಗಾಯಿತು ಸೋಲವೆನುತಾ |
ವಲ್ಲಭಗೆ ದುರ್ಲಭಗೆ ಸುಲಭಗೆ ನುಡಿದಳಾ ಗಿರಿಜೆ || ೧೪

ನೀನೆ ನಿನ್ನಯ ಗರ್ವತನದ |
ಜ್ಞಾನದಲಿ ಮಾಯೆಯನು ಕಳುಹಿದೊ |
ಡಾ ನಿರೂಪವು ಸಚ್ಚಿದಾನಂದೈಕರಸಮಯನು ||
ತಾನು ಸಿಕ್ಕುವನೇ ವೃಥಾ ದು |
ಮ್ಮಾನವೇಕೆಂದೆನುತಲೀಶ್ವರ |
ಮಾನಿನಿಯ ಮೂದಲಿಸಿ ನುಡಿವನು ನಗುತ ವಿನಯದಲಿ || ೧೫ |

ಎಲೆ ಸದಾಶಿವ ನಿನ್ನೊಳಾದೊಡೆ |
ಚಲಕೆ ನಾನಂಜುವೆನು ನಿನ್ನಯ |
ಬಲುಹಿಗಾನಿದಿರಲ್ಲ ನಿನ್ನಯ ಕರುಣವಿದ್ದ೨ಂತೆ ||
ಸಲಹಿ ನಿನ್ನ ನಿಜಸ್ವರೂಪದ |
ನಿಲವನಱುಹಿಸಿಯೆನ್ನ ಸಲುಗೆಯು |
ಸಲಿಸಬೇಕೆಂದಗಜೆ ನುಡಿದಳು ಮತ್ತೆ ಪಶುಪತಿಗೆ || ೧೬ |

ಆ ನುಡಿಯ ಕೇಳುತ್ತ ಕರುಣಾಂ |
ಭೋನಿಧಾನನು ಮೆಚ್ಚಿಯಾದೊಡೆ |
ನೀನು ಮುನ್ನಲಿ ನಿನ್ನ ತಾಮಸಗುಣದ ಮಾಯೆಯನು ||
ಏನು ಕಾರಣ ಕಳುಹಿ ಭಾಷೆಗೆ |
ಹೀನವನು ನೀ ಹಡೆದೆ ನಾವಿದ |
ಕೇನ ಮಾಡಲಿಬೇಕು ಬೆಸನನು ಗಿರಿಜೆ ಹೇಳೆಂದ || ೧೭ |

---

೧ ಯ್ಯೆಸಲಿ । ಅಲ್ಲ ( ಅ. ) ೨ ಬಂದ ( ಅ. )

ಮೂಗು ಹೋಗಿಹ ಮುಸುಡಿನವ[1]ಗಿದಿ |
ರಾಗಿ ಕನ್ನಡಿದೋಱ ಲಜ್ಜೆಯ |
ಬೇಗೆಯಲಿ ಬೇಯಿಸುವನಂತಿರೆ ಮೂದಲಿಸಲೇಕೆ ||
ತಾಗಿ ತಲೆಯೊಡೆದವರು ಭಾವಿಸೆ |
ಬಾಗದಿಹರೇನಂತುಕಾರಣ |
ಹೋಗಲಿನ್ನಾ ಮಾತೆನುತಲಿಂತೆಂದಳಾ ಗಿರಿಜೆ || ೧೮ ||

ಆವ ಪರಿಯಿಂದಱಿವೆನಾದೊಡೆ |
ದೇವ ನಿನ್ನ ನಿಜಸ್ವರೂಪದ |
ಭಾವವನು ಪ್ರಜ್ವಲಿಸಿ ತಿಳಿವಂತೆನಗೆ ಕೃಪೆ ಮಾಡಿ ||
ಕಾವುದೆನೆ ಪಾರ್ವತಿಗೆ ದೇವರ |
ದೇವನೀಕೆಯನಿನ್ನು[2] ಕರುಣಿಸಿ |
ಪಾವನವ ಮಾಡುವೆನು ನಾನೆನುತಭವನಿಂತೆಂದ || ೧೯ ||

ನಿನ್ನ ನಿರ್ಮಳ ಸಾತ್ವಿಕದ ಸಂ |
ಪನ್ನ ಕಳೆಯನು ಕಳುಹಿ ಧರೆಯೊಳು |
ಚೆನ್ನೆಯಾಗಿರೆ ಜನಿಸಿ ನೆಱ ನಿಷ್ಕಾಮ[3] ಭಕ್ತಿಯಲಿ ||
ಮುನ್ನಲಿರುತಿರಲಲ್ಲಮಪ್ರಭು |
ತನ್ನ ತಾನೇ ನಿಜವ ತೋಱುವ |
ನಿನ್ನ ಸಂಶಯವಿಲ್ಲ ದಿಟವಿದು ಗಿರಿಜೆ ಕೇಳೆಂದ || ೨೦ ||

ಎನೆ ಹಸಾದವ ಹಾಯ್ಕಿ[4]ಬದುಕಿದೆ |
ನೆನುತ ಬಂಜೆಗೆ ಬೇಹ ಬಯಕೆಯ |
ತನುಜನಾದಂತಾಕೆಯಾ ನುಡಿಗೇಳಿ ಪರಿಣಮಿಸಿ ||
ಮನದೊಳುತ್ಸಾಹಿಸುತ ತನ್ನಯ |
ವಿನುತ ಸತ್ವಗುಣಸ್ವರೂಪವ |
ನನುವಿನಲಿ ಸಂಜನಿಸ ಕಳುಹಿದಳುಮೆ ಧರಾತಳಕೆ || ೨೧ ||

೧ ಮುಖದವರಿ ( ಖ. ) ೨ ಸಿಂತು ( ಉ. ) ೩ ನಿಷ್ಕಲವಾದ ( ಇ. ) ೪ ಸಲಿಸಿ ( ಇ. )

ಬಳಿಕ ಸಂತೋಷದಲಿ ತನ್ನಯ |
ಸಲುಗೆ ಬಿನ್ನಹವೆಂಬ ಬೀಜದ |
ಬೆಳೆಗೆ ಹದವಳೆ ಹಣ್ಣಿ ಪಸರಿಸಿತೆನುತೆ ಹರುಷದಲಿ ||
ನಲಿದು ನಗುತಲಿ ಪರಮಪಾವನ |
ಸುಲಭ ಕರುಣಾಕಾರ[1] ಶಿವ ನಿ |
ನ್ನೊಲವಿನಿಂದಾನಿನ್ನು ಬದುಕಿದೆನೆಂದಳಾ ಗಿರಿಜೆ || ೨೨ ||

ಆ ನುಡಿಯ ಮಾರ್ಕೊ[2]ಂಡು ಶಿವ ಶಿವ |
ದೇನನಾಡಿದೆ ತಾಯೆ ನೀವೆಂ |
ದೂ ನಿಧಾನಿಸಲಚಲ ಸುಖಿಗಳು ಶಿವನ ಕರುಣದಲಿ ||
ಹಾನಿಯಾವುದು ಮುನ್ನಲೀಗಲಿ |
ದೇನು ಬಂದುದು ತಾವು ಹೊಲ್ದ ನಿ[3] |
ಧಾನ ತಮಗಹುದೇನು ವಿಸ್ಮಯ[4]ವೆಂದ ವೃಷಭೇಂದ್ರ || ೨೩ ||

ಇಲ್ಲದುದು ಬಹುದಿಲ್ಲ ದಿಟ ಮು |
ನ್ನುಳ್ಳುದೇ ಬಹುದಂತು [5]ಮುಂದಣಿ |
ಗು[5]ಳ್ಳ ಸಿದ್ಧಿಗೆಯುವರ ವಾಸನೆ ನೀಡಿ ಸಿಲುಕು[6]ವುದು ||
ಬಲ್ಲೆ ನೀನದ ನಿನ್ನ ಭಾವನೆ |
ಯೊಳ್ಳಿತ್ತೆ ಎಂದೆನುತ ಗೌರೀ |
ವಲ್ಲಭನು ವರ ವೃಷಭರಾಜನ ಹೊಗಳುತಿಂತೆಂದ || ೨೪ ||

ಹೂಳಿದರ್ಥವನಱಿ ಹಡೆವನ[7] |
ಕಾಲು ಕೊಂಡೊಯ್ವಂತೆ ನಿನ್ನಯ |
ನಾಲಿಗೆಯೆ ತಾ ನುಡಿವುತಿದೆ ಶುಭಸೂಚನಾರ್ಥವನು ||
ಹೇಳಲೇನಿನ್ನಲ್ಲಮನ ಸ |
ಮ್ಮೇಳದಲಿ ಸುಖಿಯಾಗು ಹೋಗಿ |
ನ್ನೇಳೆನುತಲಾ ವೃಷಭರಾಜಂಗಭವನಿಂತೆಂದ || ೨೫ ||

---

೧ ಕರಸೆ ( ಇ. )  ೨ ಸೊಳಕೊ ( ಒ.) ; ಕೈಕೊ ( ಚ. )  ೩ ವಿ ( ಇ. )  ೪ ಸೋಜಿಗ ( ಒ, ಜ. ) ; ನಿಷ್ಟಯ ( ಖ. )  ೫-೫ ಕಾರಣ । ವು ( ಇ, ಉ. )  ೬ ನಿಲ್ಲು ( ಅ. )  ೭ ವಣಿಸಿ ( ಇ. )

ನೀನು ಧರೆಯಲಿ ಮೆಱೆ[1]ಯದಿರ್ದೊಡೆ |
ತಾನು ಸಿಕ್ಕುವನಲ್ಲವಲ್ಲಮ[1] |
ನೀನು ಭಕ್ತಿಯ ಮಾಡಿ ಕಾಣಿಸೆ[2] ನಿನ್ನ ಕತದಿಂದೆ ||
ಸ್ವಾನುಭಾವ ಸುಖಸ್ವರೂಪನಿ |
ಧಾನವನು ಸಾಧಿಸಲಿ ಸರ್ವರು |
ಮಾನನಿಧಿ ಕೇಳೆನುತ ಬೆಸಸಿದನೀಶ ವೃಷಭಂಗೆ || ೨೬ ||

ಈತನೇ ಬಳಿಕಿನ್ನು ದಿಟವಾ |
ಭೂತಳದೊಳಲ್ಲಮನನಱಿವ ಮ |
ಹಾತಿಶಯವಹ ಭಕ್ತಿಯನು ನೆಱೆ ಮಾಡಿ ಮೆಱೆವವನು[3] ||
ಏತಕೀ ಭ್ರಮೆಯೆನುತ ಮದಮತಿ |
ಗೋತು ವೃಷಭನನಣಕವಾಡುತ |
ಮಾತನಾಡಿದರಲ್ಲಿ ಕೆಲಬರು ಶಿವನ ಸಭೆಯೊಳಗೆ || ೨೭ ||

ದೂಷಕರ ನುಡಿಗೇಳಿ ಮನದಲಿ |
ರೋಷವನು ತಾಳಿದನೆ ಮದದಲಿ[4] |
ವಾಸಿಯನು ಮಾಡಿದೊಡೆ[5] ಮಾರುತ್ತರವನುಸುರಿದನೆ ||
ಈಸು ಶಮೆ ದಮೆ ಸಮತೆಯುಳ್ಳ ಸ |
ದಾ ಶುಚಿಗಳಾರೆನುತ ವೃಷಭನ |
ನಾ ಸದಾಶಿವ ಪೊಗಳುತಿರ್ದನು ಪಂಚವದನ[6]ದಲಿ || ೨೮ ||

ಮರುಳರಿವದಿರು ವೃಷಭರಾಜನ |
ಪರಿಯನಱಿಯದೆ ನುಡಿವರಾದೊಡೆ |
ಧರೆಯೊಳುದಯಿಸಿ ನೋಡಲಾತನ ಭಕ್ತಿಯುನ್ನತಿಯ ||
ಹಿರಿದು ತಮ್ಮಯ ಮನದ ಮದ[7]ಮ |
ತ್ಸರವನೀಗಲಿಯೆನುತಲಾ ಶಂ |
ಕರನು ಬಳಿಕವರುಗಳನಟ್ಟಿದನಂದಿಳಾತಳಕೆ || ೨೯ ||

೧-೧ ಯುತಿರ್ದೊಡೆ | ತಾನು ಬೆಸಸುವನಲ್ಲವುಪ್ರಭು ( ಇ. ) ೨ ಸು ( ಅ, ಜ. ) ೩ ನೇ ( ಉ, ಗ, ಜ. ) ೪ ಶಿವ ಶಿವ ( ಗ. ) ೫ ಮಾಡಿದನೆ ( ಇ, ಒ, ಕ. ) ೬ ಭಟ್ಟರಂದ ( ಉ. ಕ. ) ; ಮಧುರವಚನ ( ಖ. ) ೭ ಲಿಹ ( ಅ. )

ಮೆಱೆ೧ದು ಭೂಮೀತಳದೊಳುದಯಿಸಿ |
ನೆಱೆ ವಿಚಾರಿಸಿ ನಿಮ್ಮ೨ ನಿಮ್ಮಯ |
ಕೊಱತೆಗಳನಲ್ಲಲ್ಲಿ ಸಾಧಿಸಿ ಮನಸು ದಣಿವಂತೆ ||
ನೆಱತೆಯೆನಿಸುವುದ೩ಚಲ ಪದವಿಯ |
ನಱುವುದೆನುತಲಿ ಕಳುಹಿದನು ಜಗ |
ದೆಱೆಯ೪ ಪಶುಪತಿ ವೃಷಭ ಮೊದಲಾಗಿರ್ದ ಶಿವಗಣವ || ೩೦ ||

ಬೀಳುಕೊಂಡುದು ಪ್ರಮಥಗಣದೊಳ |
ಗೇಳುನೂರೆಪ್ಪತ್ತು ಗಡಣಕೆ೫ |
ಮೇಳವಾಯಿತು ರುದ್ರಕನ್ನೆಯರಲ್ಲಿ ಕೆಲಕೆಲರು ||
ಹೇಳಲೇನಾ ಚಂದ್ರಧರನ ಕೃ |
ಪಾಳುತನವನು ಶಿವಗಣದ ಸುಖ |
ದೇಳಿಗೆಯನವರವರ ಹರುಷದ ಮನದ ಹರವರಿಯ || ೩೧ ||

ಹರಿ ವಿರಿಂಚಿ ಸುರೇಂದ್ರ ಸುರಮುನಿ |
ವರರು ಹರುಷಿತರಾಗಿ ದೇವಾ |
ಪರಮ ಪಾವನವಾಯ್ತು ಧಾರುಣಿ ಹಲವು ಮಾತೇನು ||
ನಿರುಪಮದ ಗುರುಲಿಂಗಜಂಗಮ |
ದಿರವನಱೆವೊಡೆ ೬ಸಾಧ್ಯವಿನ್ನಾ |
ವರ ವೃಷೇಂದ್ರನ ಕತದಲೆಂದುದು೬ ಕೂಡೆ ತಮತಮಗೆ || ೩೨ ||

ಅಲ್ಲಮಪ್ರಭು ಪಾದಪಂಕಜ |
ದಲ್ಲಿ ಮಧುಕರನಾಗಿ ಮುಂಡಿಸಿ |
ಯೊಳ್ಳಿತೆನಿಪ ಶಿವಾನುಭಾವಾಮೃತದ ಬಂಡುಂಡು ||
ಬಲ್ಲಿತಹ ಬಗೆಯೆಂಬ ಹಸಿವಿನ |
೭ಹೊಲ್ಲವೆಯ ನೆಱೆ ನೀಗ೭ಬೆಂಕೆಂ |
ದೆಲ್ಲ ಬಂದರು ಬಳಿಕ ವೃಷಭ ಪ್ರಮಥಗಣವಿಳೆಗೆ || ೩೩ ||

**ಅಂತು ಗತಿ ೮ಕ್ಕಂ ಪದ ೪೦೭ಕ್ಕಂ ಮಂಗಳಂ**

೧ ಹರಿ ( ಜ. ) ೨ ಸೋಡಿ ( ಅ. ) ; ನೀವು ( ಗ, ಮು. ) ೩ ಸಿರ್ದ ( ಜ. ) ೪ ವರಿಯೆ ( ಜ, ಮು. ) ೫ ಗಣಕೆ ಸ ( ಕ. ) ೬-೬ ವರ ವೃಷೇಂದ್ರನ | ಕರುಣಸಂಗದ ಕತದಲೆಂದರು ( ಗ, ಜ. ) ೭-೭ ಗಲ್ಲಣೆಯುನೀಡಾಡ ( ಅ. )

# ಪ್ರಮಥರು ಕಲ್ಯಾಣಕ್ಕೆ ಬಂದ ಗತಿ

**ವಚನ**

ಪ್ರಾಣಲಿಂಗದ ಪೂರ್ವಾಶ್ರಯವ ಕಳೆಯಲೆಂದು ಲಿಂಗಪ್ರಾಣಿಯಾದ ।
ಲಾಂಛನದ ಪೂರ್ವಾಶ್ರಯವ ಕಳೆಯಲೆಂದು ಜಂಗಮಪ್ರಾಣಿಯಾದ ।
ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು ಮಹಾಪ್ರಸಾದಿಯಾದ ।
ಈ ತ್ರಿವಿಧದ ಪೂರ್ವಾಶ್ರಯವ ಕಳೆಯಲೆಂದು ಬಸವಣ್ಣನು ಮರ್ತ್ಯಕ್ಕೆ ಬಂದನು ಕಾಣಾ ಗುಹೇಶ್ವರಾ ॥ ೧ ॥

**ಸೂಚನೆ**

ವಸುಧೆಯೊಳು ಮಹದೇವಿಯಕ್ಕನು ।
ಬಸವರಾಜನು ಪ್ರಮಥಗಣವಾ ।
ವಿಷಮವಾದಿಗಳೆಲ್ಲರುದಯಿಸಿ ಬಳೆದರೊಲವಿನಲಿ ॥

ಪ್ರೇಮದಿಂದಲಿ ಕೇಳುವುದು ನಿ ।
ಸ್ಸೀಮರೆನಿಸುವ ವೀರಶೈವ ।
ಸ್ತೋಮವೆಲ್ಲವು ಮಿಗೆ ಪುರಾತನ[1]ರಾವಪರಿಯಿ[1]ಂದೆ ॥
ಭೂಮಿಯಲಿ ಸಂ[2]ಜನಿಸಿ ಬಳೆದ ಮ ।
ಹಾ ಮನೋಹ[3]ರ ಚಾರು ಚರಿತೋ ।
ದ್ದಾಮತೆಯ ಸಂಗತಿಯನೀ ಪ್ರಭುಲಿಂಗಲೀಲೆಯಲಿ ॥ ೧ ॥

ಇಳೆಯೊಳುಡುತಡಿಯೆಂಬ ಪಟ್ಟಣ ।
ದೊಳಗೆ ವೀರ ಶಿವಾಗಮಿಕ ಸಿ ।
ರ್ಮಳನ ವಲ್ಲಭೆಯೆನಿಪ ಸುಮತಿಯ ಗರ್ಭಶುಕ್ತಿಯಲಿ ॥
ಚೆಲುವೆಯಾದ ಕುಮಾರಿಯೆಂಬ ।
ಗ್ಗಳದ ಮುತ್ತುದಯಿಸಿತು ಧರಣೀ ।
ತಳದೊಳಗೆ ಪಾರ್ವತಿಯ ಸಾತ್ವಿಕ[4] ಗುಣವೆ[5] ರೂಪಾಗಿ ॥ ೨ ॥

---

೧-೧ ಪರಿಯನೊಲವಿ ( ಕ. ) ೨ ಸಲೆ ( ಕ. ) ೩ ಹಂತ ( ಬ. ) ೪ ಪಾವನ ( ಖ. ) ೫ ಕಳೆಯೆ ( ಜ. )

ಹೆಟ್ಟುಗೆಗೆ ಶಿವಯೋಗರಾಜ್ಯದ |
ಪಟ್ಟಗಟ್ಟುವರಂತೆ ನೊಸಲಿನೊ |
ಳಿಟ್ಟರಮಲ ವಿಭೂತಿಯನು ಭವಭಯದ ಸೋಂಕುಗಳು ||
ಮುಟ್ಟದಂತಿರೆ ರಕ್ಷೆಯೆಂದೆನೆ[1] |
ಕಟ್ಟಿದರು ಕಂಠದಲಿ ಲಿಂಗವ |
ನೊಟ್ಟಜೆಯಲಾ ಸುಮತಿ ನಿರ್ಮಳರಾ ಕುಮಾರಿತಿಗೆ || ೩ ||

ಪರಮನಿಕ್ಕೆಯ ಮುಟ್ಟಿ ತೋಱುವ |
ಪರಿಯಲಾತ್ಮಜೆಯುತ್ತಮಾಂಗದೊ |
ಳಿರಿಸಿ ಹಸ್ತವನಲ್ಲಿ ಬೆರಸುವುದೆನುತ ಕಿವಿಯೊಳಗೆ ||
ನೆರಹುವಂತಿರೆ ಶೈವ ಪಂಚಾ |
ಕ್ಷರಿಯನುಪದೇಶಿಸಿ ವಿನೂತನ |
ಹರುಷದಲಿ [2]ಹರಸಿ[3]ದನು ನಿರ್ಮಳ ಮತ್ತೆ[2] ನಿಜಸುತೆಯ || ೪ ||

ತೀವಿ ತನುವಿನಲತಿ ಮಹತ್ತ್ವರ |
ದೇವತಾಕಳೆಯಿರಲು ಮಿಗೆ ಮಹ |
ದೇವಿಯೆಂಬೀ ಹೆಸರನಿಟ್ಟರು ನಿಜ ಕುಮಾರಿತಿಗೆ ||
ಭಾವೆ ಬಳೆವುತಲಿರಲು ನಿರ್ಮಳ |
ದೇವ ಸುಮತಿಯರೀಪ್ಸಿತಾರ್ಥವ[4] |
ನೀವುತಿಹ ನಡೆ ನುಡಿಯಲೊಪ್ಪುವ ಕಲ್ಪಲತೆಯಂತೆ || ೫ ||

ಈಕೆ ಭಕ್ತಿಯ ಬಳ್ಳಿಯಂತೆಯು |
ನೇಕ ಪರಿಯಲಿ ಬಳೆವುತಿರ್ದಳು |
ಲೋಕದೊಳು ತಾನಲ್ಲದಿಲ್ಲೆನಲ[5]ತುಳ ಮಹಿಮೆ[6]ಯು[5]ಳಿ ||
ಆಕೆಯಂತಿರಲಿತ್ತಲೊಲಿದು ಪಿ |
ನಾಕಿ ಕಳುಹಿದ ಮಹಿಮರೆಲ್ಲರು |
ಬೇಕು ಬೇಕೆಂ[7]ಬೆಡೆಗಳಲಿ ಸಂಜನಿಸ ತೊಡಗಿದರು || ೬ ||

---

೧ ಯೆನುತಲಿ ( ಗ. ) ೨-೨ ನೋಡಿದರು ನಿರ್ಮಳ ಸುಮತಿ ( ಇ. ) ೩ ನೋಡಿ ( ಒ. ಕ. ) ೪ ರಿಂಗೆ ಪ್ರೇಮವ ( ಇ. ) ; ರಿಚ್ಛಿತಾರ್ಥವ ( ಗ. ) ; ರಿಷ್ಟಸಿದ್ಧಿಯ ( ಜ. ) ೫-೫ ಖಿಳ ವಿಭವದ ( ಇ. ) ೬ ಭಕ್ತಿ ( ಅ. ) ; ಭಾಗ್ಯ ( ಒ. ) ೭ ಡೆಂ ( ಇ, ಗ, ಚ. )

ಶುದ್ಧ ಭಕ್ತಿಯ ಭರದ ಮೊಱಡಿಯ |
೧ಮುದ್ದಯನ ಸತಿಯುದರ೧ನಿಧಿಯಲಿ |
ಸಿದ್ಧರಾಮಶಶಾಂಕನೆಂಬ ಮಹಾ ಮನೋಹರನು ||
ಉದ್ಧರಿಸ ಹುಟ್ಟಿದನು ಯೋಗಿ ಸ |
ಮೃದ್ಧ೨ ಸೊನ್ನಲಪುರದೊಳೊಪ್ಪಿರು |
ತಿರ್ದನಾತನನೇಕ ವಿಭವದಲಖಿಳ ಜಗವಱಿಯೆ || ೭ ||

ಗೋಚರಿಸದ೩ನುಪಮದ ಭಕ್ತಿಯ |
ನಾಚರಿಸಬೇಕೆಂದು ಮಡಿವಳ |
ಮಾಚಿದೇವನು ಹುಟ್ಟಿದನು ಶಿವಭಕ್ತರುದರದಲಿ ||
ಈ ಚತುರ್ದಶ ಭುವನದೊಳು ಸಚ |
ರಾಚರವ ಪಾವನವ ಮಾಡುವ
ಸೂಚನೆಯ ಶಿವಲಿಂಗಭಕ್ತಿಯ ಮಾಡುತಿರುತಿರ್ದ || ೮ ||

ಒಳ್ಳಿತಾಗಿ ಯಥಾಕ್ರಮಕ್ರಮ |
ದಲ್ಲಿ ಪ್ರಮಥರು ರುದ್ರಕನ್ನೆಯ |
ರೆಲ್ಲರುದುಭವಿಸಿದರು ಶುದ್ಧ ಶಿವೈಕ್ಯರುದರದಲಿ ||
ಮೆಲ್ಲಮೆಲ್ಲನೆ ಬಳೆದು ತಮತಮ |
ಗುಳ್ಳ ಕಾಯಕವಿಡಿದು ಭೂತಳ |
ದಲ್ಲಿ ಮೆಱೆವುತ್ತಿರ್ದರೀಶ್ವರಭಾವಭಕ್ತಿಯಲಿ || ೯ ||

ದಾನ ಧರ್ಮ ಪರೋಪಕಾರ ವಿ |
ಧಾನ ಗುರು ಶಿವಭಕ್ತಿಯುಕ್ತಿಯ |
ನೂನ ರೀತಿಯಲಿಂಗಳೇಶ್ವರ ಬಾಗವಾಡಿಯಲಿ ||
ಮಾನನಿಧಿಗಳು ಸುಕೃತಿಗಳು ಮಹಿ |
ಮಾನತೆಯಲಿರುತಿಪ್ಪರದನಾ |
ನೇನ ಹೇಳುವೆ ಮಾದರಸ ಮಾದಾಂಬಿಕೆಯರಿರವ || ೧೦ ||

---

೧-೧ ಮುದ್ದವೆಯ ಜಠರಾಂಬು ( ಓ, ಖ, ಗ, ಚ. ) ; ಮುದ್ದಲವ್ವೆಯ ಜಠರ ( ಇ. ) ೨ ಪ್ರ।ಬುದ್ಧ ( ಅ, ಓ. ) ; ಸ।ಮುದ್ರ ( ಇ, ಕ, ಖ, ಗ, ಚ. ) ೩ ಲ ( ಇ. )

ಆಕೆ ತಾನು ಪತಿವ್ರತಾ ಶೀ |
ಲೈಕೆ ಮಾದರಸಾಂಕನಾದೊಡೆ |
ಯೇಕ[1]ಪತ್ನೀವ್ರತಗುಣಾನ್ವಿತನ[1]ವರ ಜಠರದಲಿ ||
ಲೋಕದೊಳು ಗುರುಶಿಷ್ಯಸಂಗನಿ |
ರಾಕುಳ[2]ಕೆ ಸುಜ್ಞಾನವುದಯಿಸು |
ವಾ[2]ಕೃತಿಯ ಸುಕುಮಾರ ಸಂಜನಿಸಿದನು ಜಗವಱಿಯೆ || ೧೧ ||

ಅಳನು ಮಿಡುಕನು ಮಿನುಗಿಸನು ಕಂ |
ಗಳನಿದೇನೆಂದವರು ಕಂಡು |
ವ್ಮಳಿಸಿ [3]ಪಿತರುಗಳಱ[3]ವು ಮಱಹಿನಲಿ[3]ರಲು ಶಿವನೊಲಿದು ||
ತೊಳಗಿ ಬೆಳಗುತ ಬಂದು ಮಿಗೆ ಮನೆ |
ಯೊಳಗೆ ಕುಳ್ಳಿತು ಶಿಶುವ ನಿಜಕರ |
ತಳದೊಳೆತ್ತಿದನೊಲವಿನಿಂದಲಿ ಭಕ್ತವತ್ಸಲನು || ೧೨ ||

ಪರಮು ನೀನಹೆಯೆಂದು ನೊಸಲಲಿ |
[4]ಬರೆವನಂತಿರಲಿಟ್ಟು[4] ಭೂತಿಯ |
ನಿರುತ ನಿನ್ನುವನಗಲಿ ನಾನಿರೆನೆಂದು ಕುಱುಹಾಗಿ ||
ನೆರಹುವಂತಿರೆ ದಿವ್ಯಲಿಂಗವ |
[5]ಕೊರಳಿನಲಿಯುವ[5]ಧರಿಸಿ ಕರುಣಾ |
ಕರ ಸದಾಶಿವನಾ ಮಹಾತ್ಮಗೆ ತಾನೆ ಗುರುವಾದ || ೧೩ ||

ನಂಬುಗೆಯು ಕೊಡುವಂತೆ [6]ಹಸ್ತವ |
ನಿಂಬಿನಲಿ ಮಸ್ತಕದೊಳಿರಿ[6]ಸುತ |
[7]ಲುಂಬ ತಾಣವಿದೆಂದು ಕಿವಿಯಲಿ ಪೆ[8]ಚ್ಚಿ ಪೇಳ್ವಂತೆ[7] ||
ಶಂಭು ಪಂಚಾಕ್ಷರಿಯ ನೇಮಿಸಿ |
ತುಂಬಿ ತನುವಿಗೆ ಬಸವ ನೀನೆಂ |
ದೆಂಬ ನಾಮುವನಿಟ್ಟು ಹೋದನು ದೇವ[9] ನಿಮಿಷದಲಿ || ೧೪ ||

---

೧-೧ ಲಿಂಗದ ನಿಷ್ಠೆಯುತನಾಗ ( ಜ. ) ೨-೨ ವ ತಾನುಂಟುಮಾಡುವ | ಆ ( ಇ. ) ೩-೩ ಮಾತಾಪಿತರುಗಳು ಮಲಗಿ ( ಇ. ) ೪-೪ ಭರವಸದಲಿಟ್ಟನು ವಿ ( ಗ. ) ೫-೫ ಪುರಹರನು ತಾ ( ಗ. ) ೬-೬ ಮಸ್ತಕ | ದಿಂಬಿನಲಿ ಶುಭಕರವ ನಿಲಿ ( ಅ. ) ೭-೭ ಬೆಂಬಳಿಗೆ ಶಿವ ಬಂದು ಕರ್ಣಕೆ ಮಂತ್ರವನು ಪೇಳಿ ( ಗ. ) ೮ ವು ( ಇ. ) ; ಮ ( ಖ. ) ; ಪ ( ಕ, ಚ. ) ೯ ಶಿವನು ( ಜ. )

ಮಗನು ನಿಶ್ಚೈ[೧]ತನ್ಯದಿಂದಿರೆ |
ಬೆಗಡುಗೊಂಡಳವಳಿದು ಮಱುವೆಯ |
ತ[೨]ಗಹು ತೆಗೆದೆಚ್ಚಱಿಕೆ ತೋಱಿತು ಜನನಿಜನಕರಿಗೆ ||
ಬಗೆವೊಡಿದು ಕನಸಲ್ಲ ಕರ ಸೋ |
ಜಿಗವಲಾ ಪ್ರತ್ಯಕ್ಷವೆನುತವ |
ರುಗಳು ಲಿಂಗವಿಭೂತಿಸಹಿತಿಹ ಸುತನ[೩] ನೋಡಿದರು || ೧೫ ||

ನೋಡಿಯುಪದೇಶವನು ಶಂಭುವೆ |
ಮಾಡಿ [೪]ಹೆಸರನು ಬಸವನೆಂದೇ[೪] |
ಕೂಡಿ ಕೊಟ್ಟನಲಾ ಶಿವಾ ನಮ್ಮಯ ಸಭಾಗ್ಯ[೫]ತೆಗೆ ||
ನೋಡಲೆಣೆಯಾ[೫]ರುಂಟೆನುತ ಕೈ |
ಗೂಡಿ ಪುತ್ರೋತ್ಸಾಹ ಧರ್ಮವ[೬] |
ಮಾಡಿ ಮಾದರಸಾಂಕ ವೈವೆಚ್ಚಿದನು ಹರುಷದಲಿ || ೧೬ ||

ಆದುವಾತಗೆ ನಾಮಕರಣಗ |
ಳಾದಿಯಾದ ಸಮಸ್ತ ವಿಭವ ವಿ |
ನೋದವಾತಗೆ ಮಱೆದ ಮಾತನು ನೆನಸಿಕೊಟ್ಟಂತೆ ||
ವೇದ ಶಾಸ್ತ್ರ ಪುರಾಣವಾಗಮ |
ವಾದಿಯಾಗಿಹ ಕರ್ಮ ಕಳೆಗಳು |
ವೇದಿಸಿದವೊಮ್ಮಿಂಗೆ[೭] ಕೇಳಲು ಬಸವರಾಜಂಗೆ || ೧೭ ||

ಉಪನಯನ ಲಕ್ಷವನು[೮] ಮುಂದಾ |
ವಿಪುಲಮತಿಗ[೯]ಲ್ಲಮನು ತೋಱಿಸು |
ವುಪಮೆಯನು ಸೂಚಿಸುವ ಪರಿಯಲಿ ಬಸವರಾಜಂಗೆ ||
ಉಪನಯನವಾಯಿತ್ತು ವಿಭವದೆ |
ತ್ರಿಪುರವೈರಿಯ ಭಕ್ತಿಭಾವದ |
ಲಪರಿಮಿತ ಮಹಿಮೆಯನು ತೋಱಿದನಾ ಮಹಾತ್ಮಕನು || ೧೮ ||

---

೧ ನಿಜ ಚೈ ( ಖ. ) ೨ ತೆ ( ಒ, ಖ. ) ೩ ಶಿಶುವ ( ಒ, ಖ, ಜ. ) ೪-೪ ಬಸವಾ ಎಂಬ ನಾಮವ ( ಅ. ) ೪ ಬುದ ( ಜ. ) ೫–೫ ವನು|ನೋಡಲಿನ್ನಾ ( ಇ. ) ೬ ವೆಲ್ಲವ ( ಜ. ) ೭ ಮ್ಮೊಮ್ಮೆ ( ಇ. ) ೮ ಲಕ್ಷಣವ ( ಅ, ಖ. ) ; ವನು ಮುದದಿ ( ಕ. ) ೯ ಯ ( ಅ, ಖ. )

ಇತ್ತಲಿವರಿರುತಿರ್ದರಾಗಳೆ |
ಯತ್ತ ಪರವಾದಿಗಳು ಜನಿಯಿಸಿ |
ಮತ್ತೆಯವರೊಳಗೊಬ್ಬನತಿಬಳ ವೀರಬಿಜ್ಜಳನು ||
ಉತ್ತಮದ ಕಲ್ಯಾಣದಲಿ ನೃಪ |
ವೃತ್ತಿಯಿಂದಿರುತಿರ್ದ[೧]ನೇಕ |
ಚ್ಛತ್ರದಲಿ ಭೂಮಿಯನು ಪಾಲಿಸುತಿರ್ದನೊಲವಿನಲಿ || ೧೯ ||

ಜನಪನಿರುತಿರಲತ್ತಲಿತ್ತಲು |
ಜನನಿ ಜನಕರ ಬೀಳುಕೊಂಡನು |
ವಿನಯದಲಿ ತಮ್ಮಕ್ಕ ನಾಗಾಯಿಗಳ ಸಹವಾಗಿ ||
ಅನುಕರಿಸಿ ನಡೆತಂದು ತನ್ನಯ |
ಮನವೊಲಿದು ಬಸವಣ್ಣ ಹೊಕ್ಕನು |
ಜನಪ ಬಿಜ್ಜಳನಾಳುತಿಹ ಕಲ್ಯಾಣಪುರವರ[೨]ವ || ೨೦ ||

ಆ ನರೇಂದ್ರನ ಕಂಡು ಬಳಿಕಾ |
ಸ್ಥಾನಮಧ್ಯದೊಳೊಂದು ದಿವಸವ |
ನೂನಕಾರಣ ಲಿಖಿತ ಬಿದ್ದಿರಲದನು ತಿಳಿ[೩]ದೋದಿ ||
ಆ ನರೇಂದ್ರಂಗಪರಿಮಿತದ ನಿ |
ಧಾನವನು ತಾ ತೆಗೆಸಿ ಸಲಿಸಿ[೪]ದ |
ನೇನನೆಂಬೆನು ಬಸವರಾಜನ ಘನ ಮಹೋನ್ನ[೫]ತಿಯ[೬] || ೨೧ ||

ಭೂತಳಾಧೀಶ್ವರನ ಮನದೊಳ |
ಗೀತ ಕಾರಣಪುರುಷನಹ [೭]ಸಂ |
ಕೇತ ಮಿನುಕ[೮]ಲು[೭] ಕೊಟ್ಟನಂದು ಮಹಾ ಪ್ರಧಾನಿಕೆಯ ||
ಪ್ರೀತಿಯಿಂದೆ ವಿವಾಹವನು ವಿ |
ಖ್ಯಾತಿ ಮಿಗೆ ವಿಭವದಲಿ ಮಾಡಿದ |
ನೋತು ಬಿಜ್ಜಳರಾಯನೆಮ್ಮಯ ಬಸವರಾಜಂಗೆ || ೨೨ ||

---

೧ ದಾ ಭೂಪ ( ಅ. ) ೨ ಪಟ್ಟಣ ( ಇ. ) ೩ ತೆಗೆ ( ಜ. ) ೪ ತೋರಿ ( ಅ, ಒ. ) ೫ ಮಹಿಮೆಯುನ್ನ ( ಅ. ) ೬ ಮಹಾತ್ಮೆಯನು ( ಇ, ಜ. ) ೭-೭ ನೆಂ | ದಾತ ಹರುಷದಿ ( ಅ. ) ೮ ವೆಸುತ ( ಉ, ಕ. )

ಮಿಕ್ಕು ಭಕ್ತಿಯಲೊಂದು ದಿವಸದ |
ಲಕ್ಕ ನಾಗಾಯಿಗಳು ಬಸವನ |
ಒ[೧]ಕ್ಕುಮಿಕ್ಕ ಮಹಾ ಪ್ರಸಾದವನುಣಲು ಕ್ಷಣ[೨]ದೊಳಗೆ ||
ತಕ್ಕ ಶಿವತತ್ವಸ್ವರೂಪವೆ |
ಸಿಕ್ಕಿ ಬೆಳೆದುದಯಿಸಲು ಕಾಣುತ |
ಲಕ್ಕ[೩]ನಾ[೪] ಬಸವೇಶ್ವರನ ಹೆಸರಿಟ್ಟಳಾ ಶಿಶುಗೆ[೩] || ೨೩ ||

ಧಾರುಣೀವಳಯದಲಿ ಕೀರ್ತಿಯು |
ದಾರದಿಂದಿರುತಿರ್ದನುಮೆಯ ಕು |
ಮಾರ ಷಣ್ಮುಖನಂತೆ ಸಕಳಕಳಾವಿಶಾರದನು[೫] ||
ವೀರಶೈವಾಗಮದ ವಿವಿಧವಿ |
ಚಾರಪರ[೬] ಗುರುಲಿಂಗಜಂಗಮ |
ಸಾರ ಪರಮಾರಾಧ್ಯರೆಮ್ಮಯ ಚೆನ್ನಬಸವಣ್ಣ || ೨೪ ||

ಪರಮ ಪೂರ್ವಾಚಾರ್ಯ ಬಸವೇ |
ಶ್ವರನಿಗೊಬ್ಬ ಕುಮಾರನಾದನು |
ಧರಣಿಯೊಳಗಪ್ರತಿಮ ಗುಣಗಣನಿಲಯ[೭]ನಾತಂಗೆ ||
ವರದ ಕೂಡಲ ಸಂಗಮೇಶನ |
ನಿರುತ ನಾಮವನಿಟ್ಟು[೮] ಸುಖದಿಂ |
ದಿರುತಲಿರ್ದನು ಬಸವದಂಡಾಧೀಶನೊಲವಿನಲಿ || ೨೫ ||

ಆದಿಯಲಿ ಕೈಲಾಸದೊಳು ಸಂ |
ವಾದವನು ಮಾಡಿದರ್ವ[೯]ರೆಲ್ಲರ |
ಮೂದಲಿಸಿ ಸತ್ತ್ವವರನೆತ್ತಿಯನೇಕ ಮಹಿಮೆಯನು ||
ಮೇದಿನಿಗೆ ತಾ ಮೆಱೆದು ನೆಱೆ ಪರ |
ವಾದಿಗಳು ತಲೆದೂ[೧೦]ಂಗೆ ತನ್ನ ವಿ |
ನೋದದಿಂದಿರುತಿರ್ದನೆಮ್ಮಯ ಬಸವದಂಡೇಶ || ೨೬ ||

---

೧ ಲೊ ( ಅ, ಉ, ಕ, ಖ. ) ೨ ಮನ ( ಜ. ) ೩-೩ ಬಸವೇಶ್ವರನ ಹೆಸರನು ಇಟ್ಟಳರ್ತಿಯಲಿ ( ಜ. ) ೪ ರಿಂ ( ಇ. ) ೫ ವಿಳಾಸದಲಿ ( ಅ. ) ; ವಿನೋದದಲಿ ( ಇ. ) ೬ ಶ್ರೀ ( ಅ. ) ೭ ವಿಭವ ( ಇ. ) ೮ ವಹ ಹೆಸರಿಟ್ಟು ( ಇ. ) ೯ ದಿಸಿದ ಮಹಮಹಿಮ ( ಜ. ) ೧೦ ವಾ ( ಉ. )

ಖೂಢಿ ಮುಚ್ಚಲು[೧] ಹಲವು ಪರಿಯ ಪ |
ವಾಡಗಳ ಮೆಱೆವುತ ನಿರಂತರ |
ನೀಡುತಿರ್ದನು ನಿಷ್ಠೆಯಿಂದಲಿ[೨] ಲಿಂಗಜಂಗಮಕೆ ||
ಬೇಡಿದವರಿಗೆ ಬೇಡಿತನು ಕೈ |
ಗೂಡಿಸುತ[೩] ದಾಸೋಹತನದಲಿ[೪] |
ಮಾಡುತಿರ್ದನು ಬಸವದಂಡಾಧೀಶ ಭಕ್ತಿಯಲಿ || ೨೭ ||

[೫]ಮರ ಶಿಲಾ ಪಶು ದೇಹ[೬]ಗೇಹ[೫]ದೊ |
ಳಿ[೬]ರಲು ನಾವಿನ್ನಾಱಿವೆ[೭]ನುತಲಿ |
ಸುರತರುವೆ ಕೆಯ್ಯಾಗಿ ಚಿಂತಾಮಣಿಯೆ ಮನವಾಗಿ ||
ಸುರರ ಧೇನುವೆ ಶಬುದವಾಗಿಯೆ |
ನೆರೆದು ನೆಲಸಿದುವೆನಲು ಬಸವನ |
ಕರ ಮನೋ[೮]ವಚನಂಗಳಿತ್ತವು[೮] ಸುಖವನಖಿಳರಿಗೆ || ೨೮ ||

ಸೋಕು ಸುಯಿ ನುಡಿ ನೋಟ ಮನವೋ |
ಕೈಕ ಪರುಷಗಳಾಗಿ ವೇದಿಸಿ |
ಬೇಕು ಬೇಕೆಂಬುದ ನಿರಂತರ ಲಿಂಗಜಂಗಮಕೆ ||
ಸಾಕು ಸಾಕೆನೆ ದಣಿಯೆ ನೀಡುತ |
ನೇಕ ವಸ್ತುವ ನಿಚ್ಚ ನಿಚ್ಚಲಿ |
ಲೋಕವನು ಪಾವನವ ಮಾಡಿದ ಬಸವ ಭಕ್ತಿಯಲಿ || ೨೯ ||

ಬಗೆವೊಡೀಪರಿ ಭಕ್ತಿಯಾ ಕೃತ |
ಯುಗದಲಿಲ್ಲೆನೆ ಮಿಕ್ಕ ಕಕ್ಕಿನ |
ಯುಗದಲೆಂದೂ ಇಲ್ಲವಿದು ಪೊಸತೆನುತೆ ಜಗದೊಳಗೆ ||
ನೆಗಳಿ ನಿರ್ವಂಚನೆಯ ಭಕ್ತಿಯ |
ಮೊಗದು ಗಣತಿಂತಿಣಿಗಳಿರ್ದರು |
ಜಗದೊಳಚ್ಚರಿಯಾಗಿ ನಿರ್ಮಳ ಭಾವಶುದ್ಧಿ[೧೦]ಯಲಿ || ೩೦ ||

---

೧ ಯರಿಯಲು ( ಜ. ) ೨ ನಿಚ್ಚ ನಿಚ್ಚಲು ( ಜ. ) ೩ ಸಲೆ ( ಉ, ಒ, ಕ, ಗ, ಜ, ಮು. )
೪ ವನು ತಾ ( ಜ. ) ೫–೫ ಪರುಷ ಪಶು ತರು ದೇವಲೋಕ ( ಗ. ) ೬–೬ ದೊಳಗಿರು | ೭ ತಿ ( ಒ. )
೭ ನ್ನೇಳೆಯೆ ( ಇ. ) ೮–೮ ವಾಕ್ಕೀವುತಿರ್ದುವು ( ಇ. ) ೯ ಡೆ ( ಇ, ಖ, ಜ. ) ೧೦ ಭಕ್ತಿ ( ಜ. )

ಮಲಯಜದ ಮರ[೧]ಗಾಳಿಸೋಂಕಿನ |
ಲುಳಿದ ಮರ ಪರಿಮಳಿಸುವಂತಿರೆ |
ತಿಳಿಯಲೆಂದಲ್ಲಮನ ಕಾರಣ ಬಸವನುದಯಿಸಲು ||
ಇಳೆಯೊಳಾ ಮಹಿಮನ ಪದಾಂಬುಜ |
ಗಳ ರಜಸ್ಸಿನ ರೇಣುಸಂಗದ |
ಬಲುಹಿನಲಿ ಶಿವಭಕ್ತರಾದರು ನರರು ತಮತಮಗೆ || ೩೧ ||

ಭಕ್ತರಿಲ್ಲದ ರಾಜ್ಯವಿಲ್ಲೆನೆ |
ಭಕ್ತರಿಲ್ಲದ ದೇಶವಿಲ್ಲೆನೆ |
ಭಕ್ತರಿಲ್ಲದ ಗ್ರಾಮ ಗೃಹವೊಂದಿಲ್ಲವೆಂದೆನಲು ||
ಭಕ್ತಿ ಮಿಗೆ ಪೂರೈ[೨]ಸಿ ಭಾವಿಸೆ |
ಭಕ್ತಿಯುಗ[೩]ವಾಗಿರ್ದುದಿಳೆ ಶಿವ |
ಭಕ್ತಿಸೃಷ್ಟಿಯದೆನಲು ಬಸವನ ಘನದ ಮಹಿಮೆಯಲಿ || ೩೨ ||

ಒಂದು ಕಲ್ಯಾಣದ ಶಿವೈಕ್ಯರ[೪] |
ನಿಂದ ನಿಲವಿನ ಮಹಿಮೆಯಂತಿಂ |
ತೆಂದು [೫]ಹೇಳಲಿಕಱಿಯೆನ[೫]ಱಿದುದನೊಂದ ಹೇಳುವೆನು ||
ಇಂದುಮೌಳಿಯ ಸಗುಣಮೂರ್ತಿಯ |
ತಂದುವೂಡುವರುಡಿಸುವರು ಮಿಗೆ |
ಬಂಧುತನಮೊದಲಾದ ನಾನಾಪರಿಯಲೊಲಿಸುವರು || ೩೩ ||

ಮಿಕ್ಕ ಠಾವಿನ ಶಿವನ ಭಕ್ತರ |
ಲೆಕ್ಕವನು ಹೇಳುವರೆಯಗಣಿತ |
ವುಕ್ಕುತಿರ್ದುದು ಧರಣಿ ಭಕ್ತಿರಸಾಬ್ಧಿಯೆಂಬಂತೆ ||
ಹೊಕ್ಕು ನೋಡಿದೊಡಾವ ಕಡೆಯಲಿ |
ತಕ್ಕ ತಕ್ಕಂದದಲಿ ಶಿವನನು |
ಸಿ[೬]ಕ್ಕಿಸುವ ಶಿವಭಕ್ತರಿರ್ದರು ಕೂಡೆ ಧಾತ್ರಿಯಲಿ || ೩೪ ||

---

೧ ತಂ ( ಇ. ) ೨ ಪ್ರಜ್ವಲಿ ( ಇ. ) ೩ ಮಯ ( ಇ, ಖ. ) ೪ ರು ( ಜ. ) ೫-೫ ಬಲ್ಲವರಾರುವ ( ಅ. ) ೬ ಲೆ ( ಚ. )

ಸ್ವಾತಿ ನಕ್ಷತ್ರದ ಸುವೃಷ್ಟಿಗೆ |
ಯೋತು ಬಾಯ್ಗಳ ಬಿಟ್ಟು ಚಿಪ್ಪುಗ |
ಳಾತುಕೊಂಡಿಪ್ಪಂತೆ ನಮ್ಮಯ ಗುರು ಗುಹೇಶ್ವರನ ||
ಖ್ಯಾತ ಕರುಣಾಮೃತವನಮಲ |
ಪ್ರೀತಿಯಿಂದಲಿ ಹಾರುತಿದ್ದರು |
ಭೂತಳದ ಶಿವಲಿಂಗಭಕ್ತರು ಕೂಡೆ ತಮತಮಗೆ || ೩೫ ||

## ಅಂತು ಗತಿ ೯ಕ್ಕಂ ಪದ ೪೪೨ಕ್ಕಂ ಮಂಗಳಂ

# ಮಹಾದೇವಿಯಕ್ಕನ ಗತಿ

**ವಚನ**

ಮುಡಿ ಬಿಟ್ಟು ಮೊಗ ಬಾಡಿ ತನು ಕರಗಿದವಳ ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ |
ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ ಬಲುಹಳಿದು ಭವಗೆಟ್ಟು ಛಲವಳಿದು
ಭಕ್ತೆಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ || ೧ ||

ಎರದ ಮುಳ್ಳಿನಂತೆ ಪರ ಗಂಡರೆನಗವ್ವಾ |
ಸೋಂಕಲಮ್ಮೆ ಸುಳಿಯಲಮ್ಮೆ ನಂಬಿ ನಚ್ಚಿ ಮಾತಾಡಲಮ್ಮೆನವ್ವಾ |
ಚೆನ್ನಮಲ್ಲಿಕಾರ್ಜುನನಲ್ಲದುಳಿದ ಗಂಡರ ಉರದಲ್ಲಿ ಮುಳ್ಳುಂಟೆಂದು ನಾನಪ್ಪಲಮ್ಮೆನವ್ವಾ || ೨ ||

ಕಾಯ ಕರ್ರನೆ ಕಂದಿದರೇನಯ್ಯಾ ಕಾಯ ಮಿರ್ರನೆ ಮಿಂಚಿದರೇನಯ್ಯಾ |
ಅಂತರಂಗ ಶುದ್ಧವಾದ ಬಳಿಕ ಕಾಯವೇನಾದರೇನಯ್ಯಾ |
ಚೆನ್ನಮಲ್ಲಿಕಾರ್ಜುನದೇವರಿಗೊಲಿದ ಕಾಯವೇನಾದರೆ ನಿಮಗೇನಯ್ಯಾ || ೩ ||

ಎರೆಯಂತೆ ಕರಕರಗಿ ಮಳಲಂತೆ ಜರೆಜರೆದು ಕನಸಿನಲಿ ಕಳವಳಿಸಿ ಆನು ಬೆರಗಾದೆ |
ಆವುಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದೆ | ಆಪತ್ತಿನ ಸಖಿಯರನಾನಾರುವನು ಕಾಣೆ |
ಅರಸಿಕಾಣದ ತನುವ ಬೆರಸಿ ಕೂಡದ ಸುಖವ ನೀನೆನಗೆ ಕರುಣಿಸಾ ಚೆನ್ನಮಲ್ಲಿಕಾರ್ಜುನಾ || ೪ ||

**ಸೂಚನೆ**

ತನಗೆ ಮನಸೋತಿರ್ದ ಕೌಶಿಕ |
ಜನಪತಿಯನೊಲ್ಲದೆ ವಿರಕ್ತಿಯ |
ನನುಕರಿಸಿ[1] ಮಹದೇವಿ ನಡೆದಳು ಭಕ್ತಿವೇದೆಯಲಿ ||

ಭಂಗವೇ ಬಸುರಾದ ವಿಷಯಸು |
ಖಂಗಳಿಗೆ ಮಿಗೆ[2] ಹೇಸಿ ನಿರ್ವಿಷ |
ಯಾಂಗದಿಂ[3]ದಲಿ ಗುರು ಗುಹೇಶ್ವರ ಪಾದಪಂಕಜದ ||
ಸಂಗವನು ಮಾಡುವರೆ ಕೇಳುವು |
ದಂಗವಿಸಿ ಮಹದೇವಿಯಕ್ಕನ |
ಸಂಗತಿಯ ಸಂಭ್ರಮದ ಸಂ[4]ಧಿಂಸು ಪದದ ಪದ್ಧತಿಯ || ೧ ||

---

೧ ವಿಡಿದು ( ಒ, ಕ, ಖ, ಗ, ಘ, ಚ. ) ೨ ಮನ ( ಗ. ) ೩ ಯಂಗಳಿಂ ( ಉ, ಕ. ) ೪ ಶರ ( ಜ.)

ಇತ್ತಲೀ ಮಹದೇವಿ ಮಿಗೆ ಬಳೆ |
ವೃತ್ತಲಿದ್ದಳು ಜವ್ವನದ ಕಳೆ |
ವೆತ್ತು ಭರದಲಿ ಪುಟವನಿಕ್ಕಿದ ಮಿಸುನಿಯಂದದಲಿ ||
ಉತ್ತಮದ ಮೈಲುಳಿಯ ಕಾಂತಿಯ |
ಮತ್ತಗಜಗಮನದ ವಿಳಾಸದ |
ತೆತ್ತವಣೆಯ [೧]ನವೀನರೀತಿಯ[೧] ಜಾತಿಭಾವದಲಿ || ೨ ||

ತುಂಬಿ ಲಿಂಗದ ನಿಷ್ಠೆಯೊಡನೆ ನಿ |
ತಂಬ ಮೊಲೆ ಮುಡಿ ಹೆಚ್ಚಿ ಬಳೆದುವು |
ಶಂಭುವಿನ ಸತ್ಕರ್ಮ ಭಕ್ತಿ ಜ್ಞಾನವೆಂಬಂತೆ ||
ಶಂಬರಾರಿಯ ಶಸ್ತ್ರಹತಿಯ ವಿ |
ಡಂಬನೆಯ ಧಿಕ್ಕರಿಸಿ ತೋಱುವೆ |
ನೆಂಬ ಭರದಲಿ ಜವ್ವನವ ಹೇಱಿದಳು ಮಹದೇವಿ || ೩ ||

ಇರುತಲೊಂದಾನೊಂದು ದಿನವಾ |
ಪುರದರಸ ವೈಹಾಳಿಯಿಂದೆ |
ಯ್ತರುತಿರಲು ಸಂಭ್ರಮವ ಕೇಳುತ ಬಂದು ಬಾಗಿಲಲಿ ||
ತರುಣಿ ನಿಂದು ನಿರೀಕ್ಷಿಸುತ್ತಿರೆ |
ಧರಣಿಪತಿ ಕಾಣುತ್ತ ಕಾಮಾ |
ತುರತೆ ಮಿಗೆ[೨] ಕಂಗೆ[೩]ಟ್ಟು ಕಳವಳಿಸಿದನು ನಿಮಿಷದಲಿ || ೪ ||

ಕನ್ನೆಯಿವಳಾರವಳು[೪] ಕೇಳಿದು |
[೫]ಬನ್ನಿರೋ ಎನೆ ಹರಿದು ತಿಳಿದಾ[೫] |
ಕನ್ನೆಯಿಂತಪ್ಪವರ ಮಗಳೆಂದಱುಹಿದರು ಚರರು ||
ತನ್ನ ಮನದೊಳಗೆಣಿಸುತೀಕೆಯ |
ನಿನ್ನು ವ[೬]ರಿಸುವೆನೆಂಬ ಭರವಾ[೭] |
ಸನ್ನಿಸಲು ಕೌಶಿಕ ಮಹೀಪತಿ ಹೊಕ್ಕನರಮನೆಯ || ೫ ||

---

೧-೧ ಲಿ ರತಿಯ ಸೋಟದ ( ಗ. ) ೨ ಯಲಿ ( ಗ. ) ೩ ಕೆಣ್ಣೆ ( ಜ. ) ೪ ರೆಂದು ( ಇ, ಗ. )
೫-೫ ಬನ್ನಿರೆನೆ ಹರಿತಂದು ಕೇಳಲು ( ಇ. ) ೫ ಕೇಳಿ ಬಂದಾ ( ಅ. ) ; ಬೇಗ ಹರಿದಾ ( ಒ. )
೬ ತ ( ಅ, ಇ, ಖ, ಗ. ) ೭ ಭರವಸ ( ಚ. )

ಎಳೆದು ತರಿಸಿದೊಡವಳ ಮನಸಿಗೆ |
ಮುಳಿಸು ಮೇಲಪಕೀರ್ತಿ ಕೆಲಬರ |
ಕಳುಹಿ ತಿಳಿವೆನೆನುತ್ತ ಹೆಗ್ಗಡಿತಿಯರನಟ್ಟಿದರೆ[೧] ||
ಬಳಿಕಲವರೆಯ್ತಂದು ಮಿಗೆ ನಿ |
ರ್ಮಳನ ಸುಮತಿಯು ಕೇಳಿದರೆ ನೃಪ |
ಕುಲದವಗೆ ಕುಡೆವೆಂದರವರಾ ನಿಜ ಕುಮಾರಿತಿಯು || ೬ ||

ಅರಸಗಿದಿರೇ[೨] ನೀವು[೩] ಸುಮ್ಮನೆ |
ಸರಸದಿಂದಲಿ ಕೊಡುವು[೪]ದೊಳ್ಳಿತು[೫] |
ವಿರಸವಾದೊಡೆ ನೀವು ಮಾಡುವುದೇನು ಭೂಪತಿಯು ||
ಮರುಳುತನಗ[೬]ಳು ಬೇಡ[೬] ನಿಮ್ಮಯ |
ತರುಣಿಯುಂಡುಟ್ಟಿಹಳು[೭] ನಾನಾ |
ಪರಿಯಲೊಳ್ಳಿಹ ದಾಯವೆಂದ[೮]ಱುಹಿದರು[೮] ನಿರ್ಮಳಗೆ || ೭ ||

ತಾಯ ಮಾಱಿಯೆ ತೊತ್ತ ಕೊಂಬೀ |
ದಾ[೯]ಯವನು ಸುಡು ವಿಷಮು[೧೦] ಕುಲದಲಿ |
ಕಾಯದಾಸೆಗೆ ಕೊಳುಕೊಡೆಯ ಕಳವಳಿಸಿ ಮಾಡಿದೊಡೆ ||
ನಾಯಕದ ನರಕಗಳು ತಪ್ಪವು |
ರಾಯ ಮಾಡುವುದೇನು ಬಳಿಕೀ |
ನಾಯತವು ಸಾಕೆನುತ ನಿರ್ಮಳನವರಿಗಿಂತೆಂದ || ೮ ||

ಆಕೆಯನು ಕೇಳುವುದು ದಿಟ ಬಳಿ |
ಕಾಕೆ ಸಣ್ಣಹ ಮಗಳೆಯದಱಿಂ |
ದಾಕೆಯನೆ ನೆಱೆ ತಿಳಿದೊಡಂಬಡಿಸುವುದು ಬುದ್ಧಿಯಲಿ ||
ಆಕೆ ತಾನಹುದೆಂದಳಾದರೆ |
ಯಾಕೆಯನು ನಾವಾಗಳಿತ್ತವ |
ರೇಕೆ ಬಹು ಮಾತೆನುತ ನಿರ್ಮಳ ನುಡಿದನಬಲೆಯರ[೧೧] || ೯ ||

---

೧ ನು ( ಜ. ) ೨ ನಲ್ಲಿಗೆ ( ಜ. ) ೩ ರಾರಿಲ್ಲ ( ಗ. ) ೪ ಯೀವು ( ಜ. ) ೫ ದುಚಿತವು ( ಅ. ) ೬-೬ ಳ ಬಿಟ್ಟು ನಿಮ್ಮಯ | ತರಳೆಯನು ಕೊಡಿರೆಂದು ( ಅ ) ೭ ಸಾಕು ( ಗ. ) ೮-೮ ರು ಸುಮತಿ ( ಜ. ) ೯ ಕಾ ( ಜ. ) ; ಬವಿ | ಡಾ ( ಇ. ) ೧೦ ರಾಜ ( ಅ. ) ೧೧ ವರೊಡನೆ ( ಜ. ); ಸತಿಯರಿಗೆ ( ಇ. )

ಅನುಮತಿಸಿ ನಾರಿ[1]ಯರು ಬಳಿಕಾ |
ವನಿತೆಯನು ಕೇಳಿದರೆ ತನ್ನೊಳು |
ನೆನೆವಳೊಂದನು[2]ಮಾನವನು ತಾನೇ[2] ವಿವೇಕದಲಿ ||
ಜನಪನಳುಪಿಗೆ ಹೞುವ ಮಾಡು[3]ವೆ |
ನೆನುತಲಾ ಮಹದೇವಿ ಜಾಣೆನ |
ವಿನಯದಲಿ ನಸುನಗುತಲಾಳಾಪಿಸಿದಳೊಳಗೊಳಗೆ || ೧೦ ||

ಪರಿಮಳವನಾರಿಕ್ಕಿದರು ಕ |
ರ್ಪೂರಕೆ ಕೋಗಿಲೆಗಾರು ಸೊಗಸಿನ[4] |
ಸ್ವರವ ಕಲಿಸಿದರಂಚೆಗಾರಡಿಯಿಡಲು ಕಲಿಸಿದರು ||
ಪರಿಕಿಸುವೊಡವಕಾ ಗುಣಂಗಳ |
ನೆರವು ತಂದರೆ ಮನದಲಂತಾ |
ಪರಿಯಲಾ ಮಹದೇವಿ ತಾನೇ ನೆನದಳೊಂದನುವ || ೧೧ ||

ನಾನೆ ಬೇಕಾಗಿರ್ದೊಡವನಾ |
ನೇನ ಹೇಳಿದ ಮಾಡಲೆನುತಾ |
ಮಾನಿನಿಯರೊಳು ನುಡಿದು ಮಧುರಾಳಾಪ ವಚನದಲಿ ||
ಆ ನರೇಂದ್ರನೆ ಬಂದು ನನ್ನ ಮ |
ನೋನುರಾಗವ ಸಲಿಸುವಂತಿರೆ |
ತಾನು ಶಪಥವ ಮಾಡಬೇಕೆಂದಳು ಮಹಾದೇವಿ || ೧೨ ||

ಐಸಲೇ[5] ಎನುತದನು ಹೋಗಿ ವಿ |
ಳಾಸಿನಿಯರಱುಹಿದೊಡೆ ಕೇಳಿ ಮ |
ಹಾ ಸುಮಾನದಲರಸು ಬಂದನು ನಿರ್ಮಳನ ಮನೆಗೆ ||
ಕಾಸಿ ಕರಗಿದ ಲೋಹದಂತಿರೆ |
ಘಾಸಿಯಾಗುತ ಮತ್ತೆ ಮನದಭಿ |
ಲಾಷೆ ಹೆಚ್ಚಿತು ಮಾನಿನಿಯ ಕಾಣುತ ಮಹೀಪತಿಗೆ || ೧೩ ||

---

೧ ವಿನಯದಿಂ ಕೆಳದಿ ( ಇ. ) ೨-೨ ತನ್ನ ತಾ ತಿಳಿದತಿ ( ಅ. ) ; ವನು ವಿಚಾರಿಸಿ ತಾ ( ಇ. )
೩ ಸೊಡ್ಡು ( ಇ. ) ೪ ಚೆಲುವಹ ( ಗ. ) ೫ ಲೇಸು ಇದು ( ಜ. )

ಲಲನೆ ಕೇಳೌ ನಿನ್ನ ಬಯಕೆಯ |
ಸಲಿಸುವೆನು ಮೊದಲಲ್ಲಿ ಬಳಿಕಾ |
ನೊಲಿಸಿಕೊಂಬೆನು ನಿನ್ನನಂತಲ್ಲದೆ ದುರುಕ್ತಿಯಲಿ ||
ನೆಲನೊಡೆ[೧]ಯ ನಾನೆಂಬ ಗರ್ವದ |
ಬಲುಹುಗಿಲುಹನು ಮಾಡಿದೊಡೆ ಕೇ |
ಳಿಲಗೆ ತನ್ನಯ ಸತ್ಯಭಾಷೆಯನೆಂದನವನೀಶ || ೧೪ ||

ಹುಸಿಯ ನುಡಿವನ ಜೀವಹಿಂಸೆಯ |
ದೆಸೆಗೆ ನಲಿವನ ತಾಯಿಮಕ್ಕಳ |
ಬೆಸುಗೆಯನು ಬಿಚ್ಚಿದನ ಮಿತ್ರಂಗೆರಡು ಬಗೆದವನ ||
ಹಿಸುಣಿಗನ ಕೃಪಣನ ವೃಥಾ ಕೋ |
ಪಿಸುವವನ ದುರ್ಗತಿಗಳಾಗಲಿ |
ಶಶಿಮುಖಿಯೆ ನಾ ಮರಳಿ ನಿನಗಳುಪಿದರೆ ಕೇಳೆಂದ || ೧೫ ||

ತನ್ನ ಕಾರಿಯವಾಗಬೇಕೆಂ |
ದನ್ನಿಗರ ಕೆಡಿಸುವ ನಿರಂತರ |
ತನ್ನ ಸತಿಯನು ಬಾಧಿಸುವ ಪರಸತಿಗೆ ವೇದಿ[೨]ಸುವ ||
ಕುನ್ನಿಗಳ ಗತಿಯಹುದು ತನಗೀ |
ನನ್ನಿಯನು ತಪ್ಪಿದೊಡೆ ಸಾಕೆಲೆ |
ಕನ್ನೆ ಸಂಶಯ ಬೇಡವಿನ್ನೇಳೆಂದನವನೀಶ || ೧೬ ||

ನಿಂದಕನ ನಿಷ್ಠುರನ ದಳದುಳ |
ಬಂಧಿಕಾಱನ ಬಾಹಿರನ ರಣ |
ಹಿಂದೆಗನ ಪ[೩]ತಿವಂಚಕನ ವಿಶ್ವಾಸಘಾತಕನ ||
ಬಂಧುಭೇದನ ಭಜಕ[೪]ಭಕ್ಷನ |
ನಿಂದಿತಾಹಾರಿಗನ ನರಕದೊ |
ಳೊಂ[೫]ದುವೆನು ನಾ ಮರಳಿ ನಿನಗಳುಪಿದರೆ ಕೇಳೆಂದ || ೧೭ ||

---

೧ ನೆರೆ ( ಅ. ) ೨ ಭೇದಿ ( ಇ. ) ; ಮೋಹಿ ( ಜ. ) ೩ ಸ ( ಇ, ಒ. ) ೪ ಜನಕ ( ಚ. )
೫ ಗತಿಯೊಳ | ಗೊಂ ( ಗ. )

ತನಗಿದೊಳ್ಳಿಹ ರೀತಿ ಸಮನಿಸಿ |
ತೆನುತ ನಿಶ್ಚ್ಲಸುತಲಿ ನುಡಿದಳು |
ವನಿತೆಯಾದೊಡೆಯೇನ ಹೇಳಿದ ಕೇಳ[೧]ದಾಕ್ಷಣವೆ ||
ಜನಪ ನಿನ್ನನು ಬಿಟ್ಟು ನಾ ಹೋ |
ಹೆನು ಯಥಾರ್ಥವಿದೆಂದು ದಿಟವನು |
ವನಿತೆ ನುಡಿಯಲು ಭೂಪನಾ ಮಹದೇವಿಗಿಂತೆಂದ || ೧೮ ||

ನೋಡುವರೆ ನಾ ನೀನು ಹೇಳಿದ |
ಮಾಡದಾಕ್ಷಣ ನೀನು ಸುಖದಿಂ |
ದಾಡುತಿಪ್ಪುದು ನಿನ್ನ ಬುದ್ಧಿಗೆ ಬಂದ ಪರಿಯಿಂದೆ ||
ನಾಡ ಮಾತಿನ್ನೇಕೆ ಕರುಣವ |
ಮಾಡಿ ನಿನ್ನ ಕೃಪಾನಿರೀಕ್ಷೆಯ |
ಜೋಡ ತೊಡಿಸೆನಗೆಂದನಾ ಮಾನಿನಿಗೆ ಮಹಿಪಾಲ || ೧೯ ||

ಆದೊಡಾಗಲಿಯರಸ ನಡೆಯೆನೆ |
ಮೇದಿನೀಪತಿ ಹರುಷದಿಂದಲಿ |
ಹೋದನಾಗಳೆ ಹೊಕ್ಕನರಮನೆಯನು ಸುಮಾನ[೨]ದಲಿ ||
ಆದರಿಸಿ ಶೃಂಗಾರ ಮಾಡಿ ವಿ |
ನೋದದಲಿ ದಂಡಿಗೆಯನೇಱಿಸು |
ತ್ತೈದಿದರು ಹೆಗ್ಗಡಿತಿಯರು ಮಹದೇವಿ ಸಹವಾಗಿ || ೨೦ ||

ಅರಮನೆಯ ಹೊಕ್ಕಳು[೩] ವಿಳಾಸದ |
ಲಿರುತಿರಲು ಮಹದೇವಿಯನು ಕಂ |
ಡರಸನೇಕಾಂತದಲಿ ತುಡುಕಿದೊಡಾಕೆ ವಿನಯದಲಿ ||
ಅರಸ ಸೈಱಿಸು ಮತ್ಪ್ರಿಯವನು |
ತ್ತರಿಸು ಬಳಿಕಂಗೈಸು[೪] ಎನಲಾ |
ತರುಣಿಗವನೀಪಾಲ ನುಡಿದನು ವಿನಯಪರನಾಗಿ || ೨೧ ||

---

೧ ಮಾಡ ( ಗ. )   ೨ ವಿನೋದ ( ಇ, ಉ. )   ೩ ತಿ ( ಅ. )   ೪ ಲಿ ರಮಿಸು ( ಗ. )

ಏನ ಮಾಡಲಿಬೇಕು ಹೇಳಲೆ |
ಮಾನಿಸಿಯೆ ಎನಲಾಕೆ ನುಡಿದಳು |
ನೀನು ಸಲೆ ಶಿವಭಕ್ತನಾದೊಡೆ ಕೂಡುವೆನು ನಿನ್ನ ||
ನೀನು ಭವಿಯಾಗಿರ್ದೊಡೊಲ್ಲೆನು |
ನಾನು ಹೇಳುವುದಿನಿತೆಯೆನಲು ಸು |
ಮಾನ ಹೋಗಿ ದುಮಾನವಾಯಿತು ಮತ್ತೆ ಜನಪತಿಗೆ || ೨೨ ||

ಗೂಗೆಗಾದಿತ್ಯನ ಕರಂಗಳು |
ಮೂಗರಿಗೆ ಮಾತುಗಳು ಡಂಬಕ |
ಯೋಗಿಗನುಭವ ಕೋಪಿಗುಪಶಮ[೧] ಸಾಯ್ಗೆ ನಾರಂಗ ||
ಮೂಗುಹೀನ[೨]ಗೆ ಮುಕುರವುಱಿಸಿಕೆ |
ಯಾ[೩]ಗಬಲ್ಲವೆ ಭಕ್ತಿಗೆಳಸದೆ |
ರೋಗಿಗೌಷಧಿಯರುಚಿಯಾದಂತಾಯಿತವನಿಪಗೆ || ೨೩ ||

ನಮಗೆ ಶಿವಭಕ್ತಿಯನು ಮಾಡುವ |
ಸಮಯವಳವಡದೆನಲು ನೃಪತಿಗೆ[೪] |
ರಮಣಿ ನುಡಿದಳು ನಮಗೆ ನಿಮ್ಮಯ ಸಂಗವಳವಡದು ||
ನಿಮಗೆ ನಾವಿನ್ನುತ್ತರಾಯಿಗ |
ಳೆಮಗೆ ಬಂಧನ ಬಿಟ್ಟುದೆನುತಾ |
ಕ್ರಮದಲುಟ್ಟು[೫]ಡಿಗೆಯನು[೬] ತೊಡಿಗೆಯನಿತ್ತ[೫]ಳರಸಂಗೆ || ೨೪ ||

ಆತನಿದ ನೆಱೆ ನೋಡುತಿವಳಿಗೆ |
ಭೂತ ಹೊಡೆಯಿತೊ ಮೇಣು ಪಿತ್ತದ |
ಧಾತು ಹೆಚ್ಚಿತೊ ಸುಖದಲುಂಡುಟ್ಟಿರಲು ಹೇಳಿದೊಡೆ ||
ಏತಕಿವಳು ವಿರಕ್ತೆಯೆನೆ ವಿಪ |
ರೀತದಲಿ ತಲೆಗೆದಱಿ ಬತ್ತಲೆ |
ಕೌತುಕವ ಮಾಡಿದಳು ಶಿವ ಎನುತರಸ ಬೆಱಗಾದ || ೨೫ ||

---

೧ ಗನುಗ್ರಹ ( ಇ. ) ೨ ಹೋದ ( ಅ. ) ೩ ಮೋರಲು | ಆ ( ಇ. ) ೪ ಕೇಳುತ ( ಅ, ಋ. )
೫-೫ ದ ಕಳೆದುಪೊಪ್ಪಿಸಿ ಕೊಟ್ಟ ( ಜ. ) ೬ ಡುಗೊರೆಯ ( ಗ, ಚ. )

ವಿಾಸಲಳಿಯಿತು ಬಯಕೆ ಮನದಭಿ |
ಲಾಷೆ ಜಾಱಿತು ಕಾಮುದಾತುರ |
ವೋಸರಿಸಿತೆಡೆವಱಿಯಿತಳುಪು ವಿವೇಕ ವರ್ಧಿಸಿತು ||
ಭಾಷೆ ಭರವೇಱಿತ್ತು ಮತ್ತೆ ಮ |
ಹೀಶನಾದೊಡೆ ಹೋಗಲೆನುತ ನಿ |
ರಾಸೆಯಿಂದಲಿ ಹೋಗಬಿಟ್ಟನು ಬಳಿಕಳಿ ಬಾಲಕಿಯ || ೨೬ ||

ಹಿಡಿದ ಲಿಂಗದ ವರ ವಿಭೂತಿಯ |
ತೊಡಹದಂಗದ ಮೆಯ್ಗೆ ಮುಸುಕಿದ |
ಬಿಡು ಮುಡಿಯ ಹೊದಕೆಯ ವಿಳಾಸತೆ ರಾಹು ಚಂದ್ರಮನ ||
ಹಿಡಿದು ನೆಟ್ಟನೆ ನಿಂದು ನಿಗುರುತಳ |
ಪೊಡವಿಯಲಿ ಬಂದಿರ್ದುದೋ ಎನೆ |
ಕಡು ವಿರಕ್ತಿಯ ವೇಷ ಕಾಣಿಸಿತಿಂದುವದನೆಯಲಿ || ೨೭ ||

ತಂದೆ ತಾಯ್ಗಳು ನಂಟರಿಷ್ಟರು |
ಬಂಧು ಬಳಗಗಳಿತರ ಜನಗಳು |
ಬಂದು ನಿಂದೆಲೆ ಅಕ್ಕ ನೀನಕಟೇಕೆ ಮರುಳಾದೆ ||
ಎಂದೆನಲು ಶಿವಗರ್ಪಿಸಿದ ತನು |
ವಿನ್ನು ಮೊದಲಾಗೆನ್ನ ಹಂಬಲ |
ನಿಂದು ಕಳೆವುದು ನೀವೆನುತ ಮಹದೇವಿ ಜಾಱಿದಳು || ೨೮ ||

ಐಸಲೇ ನಮಗೇನು ತನ್ನಯ |
ವಾಸಿಯಿಂದ ವಿರಕ್ತಿ ಬಂದುದು |
ವಿಾಸಲಳಿಯದೆ ಕನ್ನೆತನದಲಿ ಶಿವನನಪ್ಪುವೊಡೆ ||
ಲೇಸು ನಿಜ ಕುಲಕೋಟಿಗೆನುತವ |
ರೋಸರಿಸಿದರು ಬಳಿಕಲತಿ ಸುಖ |
ವಾಸದಲಿ ಮಹದೇವಿ ನಡೆದಳು ಭಕ್ತಿಭಾವದಲಿ || ೨೯ ||

---

೧ ತೆಸಕೆ ( ಗ. ) ೨ ಬೀಳುಕೊ ( ಅ. ) ೩ ಜರೆದು ( ಗ. ) ೪ ನಿಗುರುತಿರೆ ತಾ ( ಗ, ) ; ನಿಗುರಿ ನಿಂದೊಲ್ ( ಇ. ) ೫-೫ ನ । ಉಡುಪವದನೆ ವಿರಕ್ತಿಯಿಂ ಪೊರಮಟ್ಟಳರಮನೆಯ ( ಗ. ) ೬ ವು ಲೋಕ ( ಜ. ) ೭-೭ ಹೊಂದದಿರಿ ನೀವೆನುತಲಾ ( ಗ. ) ೮ ದೆ ( ಒ, ಕ, ಖ, ಚ, ಜ. )

ಕಾಯುವಳಿಯದೆ ಶಿವನ ಕೂಡು[೧]ವ |
ದಾಯುವನುಭವವಾವ ಘನ ಗುರು |
ರಾಯ[೨]ನಿಂದೆನಗಹುದೊ ಶಿವ ಶಿವ ಎನುತ ನೆನೆವುತಲಿ[೨] ||
ಆಯತಿಕೆಯಲಿ ನಗರವಿಪಿನನಿ |
ಕಾಯದಲಿ ನೆಱ[೩] ತೊಳಲಿ [೩]ಭಕ್ತ್ಯ[೩] |
ಪಾಯದಲಿ ಸುಳಿದಾಡು[೪]ತಿರ್ದಳು ಮತ್ತೆ ಮಹದೇವಿ || ೩೦ ||

ಎಲ್ಲಿ ಸಜ್ಜನವೆಲ್ಲಿ ನಿರ್ಜನ |
ವೆಲ್ಲಿ ಗಿಡು ಮಡುವೆಲ್ಲಿ ತರು ಗಿರಿ |
ಯೆಲ್ಲಿ ಗಂಹರವೆಲ್ಲಿ ಪೂಗೊಳವೆಲ್ಲಿ ಲತೆ ಪುಳಿನ ||
ಎಲ್ಲ ಎಡೆಯಲಿ ಹಾ[೪]ಡುತಾಡುತ |
ಮೆಲ್ಲಮೆಲ್ಲನೆಯುಱಸುತಿರ್ದಳು |
ಅಲ್ಲಮಪ್ರಭು ಗುರು ಗುಹೇಶ್ವರನನು ಮಹಾದೇವಿ[೫] || ೩೧ ||

**ಅಂತು ಗತಿ ೧೦ಕ್ಕಂ ಪದ ೪೭೩ಕ್ಕಂ ಮಂಗಳಂ**

೧ ಬೆರಸು ( ಇ. ) ೨-೨ ನಸು ನಾನೆಂದು ಕಾಂಬೆನೊ ಶಿವ ಶಿವಾ ಎನುತ ( ಗ. ) ೩-೩ ಕ್ರಿಯ | ಪಾಯವಿಲ್ಲದೆ ತೊಳಲು ( ಗ. ) ೪ ಎಲ್ಲೆಡೆಯೊಳೋಲಾ ( ಇ. ) ೫ ಪಾದ ಪಂಕಜವ ( ಉ. )

# ಗೊಗ್ಗಯ್ಯನ ಗತಿ

**ವಚನ**

ಕಾಣದುದನರಸುವರಲ್ಲದೆ ಕಂಡುದನರಸುವರೇ ।
ಘನಕ್ಕೆ ಘನವಾದ ವಸ್ತು ತಾನೆ ಗುರುವಾದ ತಾನೆ ಲಿಂಗವಾದ ತಾನೆ ಜಂಗಮವಾದ ತಾನೆ ಪ್ರಸಾದ
ವಾದ ತಾನೆ ಮಂತ್ರವಾದ ತಾನೆ ತಂತ್ರವಾದ ತಾನೆ ಯಂತ್ರವಾದ ತಾನೆ ಸಕಲ ವಿದ್ಯಾಸ್ವರೂಪವಾದ ।
ಇಂತಿವೆಲ್ಲವನೊಳಕೊಂಡು ಎನ್ನ ಕರಸ್ಥಲಕ್ಕೆ ಬಂದ ಬಳಿಕ ಇನ್ನು ನಿರ್ವಿಕಾರ ಕಾಣಾ ಗುಹೇಶ್ವರಾ
|| ೧ ||

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ
ಮಲತ್ರಯಂಗಳಂ ಕಳೆದುಳಿದು ನಿರ್ಮಲವಾದ ಶಿಷ್ಯನು ।
ಕಾಯಜೀವದ ಭ್ರಾಂತಿಸೂತಕವ ವಿವರಿಸಿ ಕಳೆದು ನಿಶ್ಯಂಕನಾದ ಗುರುವು ।
ಉಭಯ ಭಾವದೊಳಗೆ ಆವುದು ಮುಂದು ಆವುದು ಹಿಂದೆಂದರಿಯಲಹುದೇ ।
ಕರಸ್ಥಲಕೆ ಕಾರುಣ್ಯವ ಮಾಡಿದರೆ ಮನಸ್ಥಲಕೆ ಹಂಗಿಲ್ಲ ।
ಮನಸ್ಥಲದಲ್ಲಿ ಸೆರಗೊಡ್ಡಿ ಬೇಡಿದರೆ ಕರಸ್ಥಲದ ಲಿಂಗ ಕೈಸಾರಿತ್ತು ।
ಗುರುಸ್ಥಲದ ನಿಲವು ಪರಸ್ಥಲದಲಡಗಿದರೆ ಭಾವ ಬೆರಗಾಯಿತ್ತು ಗುಹೇಶ್ವರಾ || ೨ ||

**ಸೂಚನೆ**

ಬೆರಸಿ ತನ್ನೊಳಗನಿಮಿಷನನಾ ।
ಪರಿಯಲಲ್ಲಮನೊಂದು ವೇಷವ ।
ಧರಿಸಿ ಸುಳಿದನು ಲೀಲೆಯಿಂದೆ ಜಗದ್ಧಿ[೧]ತಾರ್ಥದಲಿ ||

ಹಸಿವನಳಿವರು ಜೀವಕಾಯದ ।
ಬೆಸುಗೆಯನು ಕಾಂಬುವರು ಬಿಂದುವ ।
ನೊಸರಲೀಯದೆಯೂರ್ಧ್ವ ಮುಖದಲಿ ಬಿತ್ತಿ ಬೆಳೆವವರು ||
ಉಸುರು ಪ್ರಾಣಾವಾಯುವಂ ಕೀ ।
ಲಿಸುವವರು ಸುಜ್ಞಾನಯೋಗ್ಯರು ।
ಸಸಿನೆ ಕೇಳುವುದೀ ಮಹಾ ಪ್ರಭುಲಿಂಗಲೀಲೆಯಲಿ * || ೩ ||

---

೧ ದಲಿ ಜಗಹಿ ( ಇ, ಉ. )
* ಈ ಪದ್ಯವು ( ಉ. ) ( ಜ. ) ಪ್ರತಿಗಳಲ್ಲಿ ಮಾತ್ರ ಅದೆ.

ನಿದ್ರೆಯನು ನೀಗುವರು ರೋಗದು |
ಪದ್ರವನು ನಿಲಿಸುವರು ಮಿಕ್ಕಿನ |
ಕ್ಷುದ್ರವ್ಯಾಧಿಯ ಭಂಗಿಸುವರು ಗುರೂಪದೇಶದಲಿ ||
ಮುದ್ರೆಯನು ಮುಟ್ಟುವರು ಸೌಖ್ಯಸ |
ಮೃದ್ಧಿಯೊಳಗೋಲಾಡುವರು ಶಿವ |
ಸಿದ್ಧರಪ್ಪರು ತಿಳಿವುದೀ ಪ್ರಭುಲಿಂಗಲೀಲೆಯಲಿ * || ೮ ||

ಕಾಳು ವಿಷಯದ ವಿಧಿಯ ದಾಳಾ |
ದೂಳಿಯಲಿ ಹತವಾಗಿ ಕಾಲನ |
ಕಾಲ ಬಾಯಲಿ ಬೀಳಲೊಲ್ಲೆವೆನಿಪ್ಪ ಸುಕೃತಿಗಳು ||
ಕೇಳುವುದು ಕಿವಿಗೊಟ್ಟು ಭಕ್ತಿಯ |
ಕಾಲು ಕೀ[೧]ಲನು ನುಡಿದು ತೋಱಿಸಿ |
ಪಾಲಿಸುವ ಪರ ಬೊಮ್ಮನಲ್ಲಮ ಸುಳಿದ ಸುಲಭತೆಯ || ೧ ||

ಲಿಂಗನಿಜವನು ಬಯಸಿ ಭಕ್ತಜ |
ನಂ[೨]ಗಳಿರುತಿರಲಲ್ಲಮುಪ್ರಭು |
ಲಿಂಗನಂತಿದ[೩]ನಱಿದು ತನ್ನ ಕಟಾಕ್ಷಕಾಂತಿಯು[೪]ಲಿ ||
ಹಿಂಗಿಸುವೆನೆಲ್ಲರ ಮನೋಮಯ |
ದಂ[೫]ಗದೊಳಹೊಱಗಿಡಿದ ತಮದ ತ |
ರಂಗಗಳನೆಂದೆನುತ ಕಾರಣ ಕಾಯದಲಿ ಸುಳಿದ || ೨ ||

ಸುಳಿದು ಸುಖದಲಿ ತನ್ನ ಲೀಲೆಯ |
ಬೆಳೆಸಬೇಕೆಂದೊಂದು ವೇಷದ |
ಹೊಳಹಿನಲಿ ಬರುತಿರಲು ಕ[೬]ಟ್ಟೆದಿರಿನಲಿ ಚೆಲುವಾಗಿ ||
ತಳಿತ ಕೆಂ[೭]ದಾವರೆಯ ನೆಯ್ದಿಲು |
ಗೊಳನ ನಾನಾಪರಿಯ ಪೂಗಿಡು |
ಗಳ ಲತಾಮಂಟಪ[೮]ದ ತೋಟವ ಕಂಡನಲ್ಲಮನು[೮] || ೩ ||

---

೧ ಶೀ (ಅ.) ೨ ಗ । ಣಂ (ಉ, ಕ.) ೩ ನೇ ತಾ (ಜ.) ೪ ಕರುಣದ (ಜ.) ೫ ದೇ । ಹಂ (ಗ.) ೬ ನೆ (ಅ.) ೭ ಹೊಂ (ಜ.) ೮-೮ ವು ಕಣ್ಗೆದಿರಾಯಿತಲ್ಲಮುನ (ಇ.)
* ಈ ಪದ್ಯವು (ಉ.) (ಜ.) ಪ್ರತಿಗಳಲ್ಲಿ ಮಾತ್ರ ಆದೆ.

ಆ ವನವ ಪಾಲಿಸುವನೊಬ್ಬನು |
ಪಾವನೀಕೃತ[೧]ಚಿತ್ತನೀಶ್ವರ[೨] |
ಭಾವಭಕ್ತನು[೩] ಗೊಗ್ಗಿದೇವನು ಕೃಷಿನಿಮಿತ್ತಿಳೆಯ[೪] ||
ತೀವಿಯುಗಳುತ್ತಿರ್ದನಾ ಪ್ರ |
ಸ್ತಾವದಲಿ ಕಂಡಲ್ಲಮಪ್ರಭು |
ದೇವ [೫]ತಾನಾತನ ಸಮೀಪಕೆ ಹೋಗಿ[೫] ನಿಂದಿರ್ದ || ೪ ||

ಮಿ[೬]ಕ್ಕು ಬೆವಸಾಯವನು ಮಾಡುವ |
ಹೆಕ್ಕಳದ ಹೋರಟೆಯ ಕಾಣುತ |
ಲಕ್ಕಱಿಂದಲಿ ನೋಡಿ ಕರುಣರಸಾರ್ದ್ರ[೭] ಚಿತ್ತದಲಿ ||
ಸಿಕ್ಕಿತಲ್ಲಾ ಲೋಕವೀಪರಿ |
ಕಕ್ಕುಲಿಸಿಯೊಡಲಾಸೆಗಱಿವನು |
ಲೆಕ್ಕಿಸದೆಯಕಟೆನುತಲಲ್ಲಮ ತನ್ನೊಳಿಂತೆಂದ || ೫ ||

ಆದೊಡಿನ್ನೀತನನು[೮]ಪಾಯ[೯]ದ |
ಭೇದದಿಂದೊಡಬಡಿಸಿ ಭಕ್ತಿಯ |
ಹಾದಿಯನು ಹತ್ತಿಸುವೆ ನಾನೇ ಲಿಂಗಮಾರ್ಗವನು ||
ಸಾಧಿಸುವ ಸಾಧಕನವೊಲು ಸಂ |
ವಾದಿಸುವೆನೀತನಲಿಯೊಂದು ವಿ |
ನೋದವನು ಮಾಡುವೆನೆನುತ್ತಲ್ಲಮನು ಬಗೆಗೊಂಡ || ೬ ||

ಬಳಿಕಲಾ ತೋಟಿಗನ[೧೦] ಬುದ್ಧಿಗೆ[೧೧] |
ತಿಳಿವ ತೀಡು[೧೨]ವೆನೆನುತ ಮಿಗೆ ಕಂ |
ಗಳಿಗೆ ಕಟ್ಟಿದಿರಾಗುತಲಿ ಶರಣಾರ್ಥಿಯೆಂದೆನಲು ||
ನಲಿದು ಕೇಳುತ ಕೂಡೆ ಶರಣಂ |
ದೊಲಿದು ನೀನಾರೆನುತ ವಿನಯಂ |
ಗಳಲಿ ತದ್ವನಪಾಲ ಕೇಳಿದನಲ್ಲಮಪ್ರಭುವ || ೭ ||

---

೧ ನಾತ್ಮಕ ( ಗ. ) ೨ ನಿರ್ಮಳ ( ಇ. ) ೩ ಭರಿತನು ( ಇ. ) ೪ ತ್ತದಲಿ ( ಇ. ) ೫-೫ ನಾತನ ಕಂಡು ಸನಿಯಕೆ ಬಂದು ( ಇ. ) ೬ ಹೊ ( ಇ. ) ೭ ಬ್ಧಿ ( ಖ. ) ೮ ಡೀತನನೊಂದು ( ಇ. ) ೯ ಜ್ಞಾನ ( ಒ. ) ೧೦ ಗೆ ( ಇ. ) ೧೧ ಯ ( ಇ. ) ೧೨ ತಿದ್ದು ( ಇ. ಗ. )

ಭಾವಿಸಲು ಶಿವಭಕ್ತರೆಂಬುವ |
ರಾವ ತಾವಿನಲಿಪ್ಪರವರ ಕೃ |
ಪಾವಲೋಕನ ಭಕ್ತಿ ಭಿಕ್ಷಾಂ[1]ದೇಹಿಗಳು ನಾವು ||
ಆವುದಱಿತೊಳಹುದಲ್ಲ[2]ದಲ್ಲಮ |
ದೇವನೆಂಬುದು ನಮಗೆ ಸಲೆ ಸಂ |
ಭಾವಿಸಿದ ಹೆಸರಾಗಿಹುದು ಭಕ್ತಯ್ಯ ಕೇಳೆಂದ || ೮ ||

ತಿಳಿದು ನಾನಾ ಪರಿಗಳಿಂದಲಿ |
ಗಳಿಸಿದರ್ಥವ ಲಿಂಗಜಂಗಮ |
ಗಳಿಗೆ ನೀಡುತಲೊಕ್ಕುಮಿಕ್ಕುದನುಂಡು ಸುಖಿಯಹುದು ||
ಇಳೆಯೊಳಿದು ಶಿವಭಕ್ತಿ ಬಱಿದೆಗೆ |
ತೊಳಲಿಯುಱಸಲದೇನು ಕಾರಣ |
ವೆಲೆ ಮರುಳೆ [3]ಕೇಳೆಂದನಾ ಗೊಗ್ಗಯ್ಯಗ[3]ಲ್ಲಮನು[4] || ೯ ||

ನಿಮ್ಮ ಹೆಸರೇನಯ್ಯ ಎಂದರೆ |
ನಮ್ಮ ಹೆಸರೀ[5] ಗೊಗ್ಗಯನು ಕೇ |
ಳೆಮ್ಮ ಮತವಿದು ಲೌಕಿಕರು ನಾವಱಿಯೆವೆನುವನು ||
ಸುಮ್ಮನಿರಬೇಡೆಮಗೆ ವಿವರಿಸಿ |
ನಿಮ್ಮ ಮನ[6]ಸಿನ ಬುದ್ಧಿಯಾ[6]ವುದ |
ನೆಮ್ಮಿಹುದು ಹೇಳೆಂದನಾ ಗೊಗ್ಗಯ್ಯನಲ್ಲಮಗೆ || ೧೦ ||

ಆವ ಬೆವಸಾಯವನು ಮಾಡಲು |
ಜೀವ[7]ವಧೆಗಳು ತಪ್ಪವದಱಲಿ[7] |
ದೇವನೊಲಿವನೆ ನೋವು ನಿಲುವುದೆ ಸಾವು ಹಿಂಗುವುದೆ ||
ಧಾವತಿಯೆ ಕಡೆತನಕ ತಪ್ಪದು |
ಭಾವಿಸುವೊಡದು ಭವಿಗಳಂಗವಿ |
ದಾವುದಲ್ಲದ ಮತವನೆಲೆ ಗೊಗ್ಗಯ್ಯ ಕೇಳೆಂದ || ೧೧ ||

---

೧ ಭಕ್ತದೇಹಿಕ ( ಜ. ) ೨ ರ ಸಂದಿಲ್ಲ ( ಜ. ) ೩-೩ ಭಕ್ತಯ್ಯ ನೀ॥ಕೇಳೆಂದನ ( ಅ. ) ೪ ನಲ್ಲಮಗೆ ( ಉ, ಒ, ಕ, ಜ. ) ೫ ನಾಮವು ( ಜ. ) ೬-೬ ದ ನಿರೂಪವಾ ( ಇ. ) ೭-೭ ವ್ಯಥೆಗಳು ತಪ್ಪವವರಲಿ ( ಅ. ) ; ಜಾಲಕೆ ನೋವು ತಪ್ಪದು ( ಇ. ) ; ವ್ಯಥೆ ತಪ್ಪುವುದೆಯಿದರಲಿ ( ಜ. )

ಇಲ್ಲಿ ಭಕ್ತಿಯ ಮಾಡುತಲಿ ಕಡೆ |
ಯಲ್ಲಿ ಕೈಲಾಸವನು ಹೊಕ್ಕೊ[೧]ಡೆ |
ಯೆಲ್ಲಿಹವು ಬಿಡು ನೋವು ಸಾವುಗಳೆಂಬ ಸಂಕಟವು ||
ಬಲ್ಲವರ ಕೇಳೆಮ್ಮ ನಂಬುಗೆ |
ಯಿಲ್ಲದಿರ್ದೊಡೆ ಮರುಳೆ ನೀನೆನು |
ತಲ್ಲಮ[೨]ನು ಗೊಗ್ಗಯ್ಯನನು ಬೋಧಿಸಿದ[೨]ನೀ[೩] ಮತವ || ೧೨ ||

ಅವಧರಿಸಿ ಕೇಳೆನ್ನ ಬುದ್ಧಿಯ |
ಹವಣ[೪]ನಾದರೆ ಜೀವವಣು[೪]ಮಾ |
ತ್ರವನು ನೋಯಿಸಿ ಭಕ್ತಿಯಲಿ ಕೈಲಾಸಪುರದೊಳಗೆ ||
ಭವನ ಬಸುಱ[೫]ೊಳಗಿರ್ದೊಡೆಯು ಸಂ |
ಭವಿಸುವುವು ಕಡು ನೋವು ಸಾವುಗ |
ಳಿವನು ಕಳೆವರ ಕಾಣೆನೈ ಗೊಗ್ಗಯ್ಯ ಕೇಳೆಂದ || ೧೩ ||

ಕೊಂದವಗೆ ಕೊಲೆ ತಪ್ಪದಾರೇ |
ನೆಂದೊಡೆಯು ಹರಿ ಹರ ವಿರಿಂಚಿಗ |
ಳೆಂಬ ಬಲ್ಲಿದರಾರು ದಿಟವವರಾದೊಡೆಯು ತುದಿಗೆ ||
ಬಂಧನಪ್ರದಬಾಹ್ಯಕರ್ಮವ |
ನೊಂದುಗೂ[೭]ಡಿದರಾದೊಡವರಿಗೆ |
ಸಂದ ನಿಜಸುಖವಿಲ್ಲವೈ ಗೊಗ್ಗಯ್ಯ ಕೇಳೆಂದ || ೧೪ ||

ಸಾವ್ಪೋಡೀ ಗುರುಲಿಂಗಜಂಗಮ |
ಸೇವೆ[೬]ತಾ ಮುನ್ನೇಕೆ ಹಸಿವಿನ[೬] |
ಬೇವಸಪಲಡಿಗಡಿಗೆ ಬೇವೊಡೆಯೊಕ್ಕುದುಣಲೇಕೆ ||
ಈ ವಿಧಿಯಲೇನುಂಟು ನೆಱೆ ನಿ |
ರ್ಭಾವದಂಗವನಱಿಯದನ್ನಕ |
ಸಾವುದಾದರೆ ಮಾಣದ್ದೈ ಗೊಗ್ಗಯ್ಯ ಕೇಳೆಂದ || ೧೫ ||

---

೧ ಸಾರ್ಪೊರ್ ( ಅ, ಒ, ಬ. ) ೨-೨ ನ ಗೊಗ್ಗಯ್ಯ ಭೋದಿಸುತಿರ್ದ ( ಉ, ಕ, ಚ, ಮ. ) ೩ ನನು ( ಜ.) ೪-೪ ಜೀವಾಸ್ರಯದ ಹುಳು ( ಜ. ) ೫ ಮಾ ( ಇ. ) ೬-೬ ಯೇತಕೆ ಹಸುತೃಷೆಗಳ ಸು ( ಇ. ) ೭ ತಪ್ಪ ( ಅ, ಒ. )



ಬಳ್ಳಿಗಾಂವಿಯಿಂದ ೧ ಮೈಲು ಉತ್ತರದಲ್ಲಿ ಮಾಳಗುಂಡಕೊಪ್ಪದ ಹತ್ತಿರಿರುವ ಅನಿಮಿಷನ ದೇವಾಲಯದ ಒಳಭಾಗ,
ಬಲಗಡೆಗೆ ಗೊಗ್ಗಯ್ಯನ ಗದ್ದುಗೆ

ಪರಿಕಿಸಲು ಗುರುಲಿಂಗಜಂಗಮ |
ದಿರವದಾವೆಡೆ[೧]ಯೆಂಬುದೀಯುಪ |
ಚರಣೆಗಱುಹಿಸದದಱ ಪರಿಯೆಂತೋ[೧] ಮಹಾದೇವ ||
ಅರಿದಲಾ ಎಂದೆನುತ[೨] ನೆವದಿಂ |
ದೊರೆದನಾ ಗೊಗ್ಗಯ್ಯಗಿಂತೀ |
ಪರಿಯನಲ್ಲಮಲಿಂಗನೊಲಿದನ್ಯಾಪದೇಶದಲಿ[೩] || ೧೬ ||

[೪]ಎಲ್ಲವನು ಕೇಳುತ್ತಲಾತನು[೪] |
ಹೊಲ್ಲವಾಯಿತು ಭಕ್ತಿಯೆಂಬುದು |
ಕಲ್ಲು ಕಡಲೆಯ ಮೆಲುವ ಪರಿಯಲ್ಲಾ ಮಹಾದೇವ ||
ಅಲ್ಲಮಾ ನಾವಱಿಯೆವೈ ನೀ |
ಬಲ್ಲೆ ನಿನ್ನಯ ಮನದ ಹರಿವನು |
ಸಲ್ಲದುಳಿದರಿಗೆಂದನಾ ಗೊಗ್ಗಯ್ಯನೊಲವಿನಲಿ || ೧೭ ||

ಮತ್ತೆಯಲ್ಲಮನಾದೊಡೊಂ[೫]ದು ನಿ |
ಮಿತ್ತ ದೃಷ್ಟಾಂತವನು ತೋಱಿಸಿ |
ಹತ್ತಿಸುವೆನೀತಂಗೆ ಹಾದಿಯನೆನುತಲತಿ ಕೃಪೆಯ ||
ಚಿತ್ತದಲಿ ಗೊಗ್ಗಯ್ಯನಗುಳುತ |
ಕಿತ್ತ ಹೆಂಟೆಯ ಕೆಳಗೆ ತೋಱಿದ |
ನುತ್ತಮದ ಹೊಂಗಳಸವೊಂದನು ನಿಮಿಷಮಾತ್ರದಲಿ || ೧೮ ||

ಏನಿದೇನೆಂದಿಬ್ಬರೊಲಿ[೬]ದನು |
ಮಾನದಿಂದಗುಳಲು ಸಮಾಧಿ |
ಸ್ಥಾನದಾ ದೇಗುಲವ ಕಂಡೊಳಪೊಕ್ಕು ಹರು[೭]ಷದಲಿ ||
ಮೌನದಿಂ ನಿಬ್ಬೆಱಗು ಹೊಡೆದವ |
ಧಾನದನಿಮಿಷದೃಷ್ಟಿ[೮]ಲಿಂಗ |
ಧ್ಯಾನದಂಗವ ಕಂಡರಾ ಗೊಗ್ಗಯ್ಯನಲ್ಲಮನು || ೧೯ ||

---

೧-೧ ಯೆಂಬ ಬುದ್ಧಿಯ | ಪರಿಚರಿಯಸರುಹಿಸುವ ಪರಿಯೆಂತೋ ( ಉ. ) ೧-೨ ಯೆಂಬುದನು ಪಿ | ಸ್ತರಿಸಿ ಹೇಳಲು ಹರಿಹರಬ್ರಹ್ಮಾದಿಯೆಲ್ಲರಿಗೆ || ಅರಿದು ತಾನೆಂದೆಂಬ ( ಗ. ) ೩ ದುಪದೇಶ ನೆವದಿಂದೆ ( ಇ. ) ೪-೪ ಅಲ್ಲಮಪ್ರಭು ಹೇಳೆ ಕೇಳುತ ( ಗ. ) ೫ ದೇವಸೊಂ ( ಗ. ) ೬ ರೊಂ ( ಉ. ) ೭ ನಿಮಿ ( ಗ. ) ೮ ದಿಷ್ಟ ( ಉ. )

ಅಂತರಂಗವ ಹೊಕ್ಕು ನೆಱೆ ನಿ |
ಶ್ಚಿಂತ ನಿಲ[1]ವನು[2] ನೋ[3]ಡುವನುಭವಿ |
ಯಂತೆ ಗುಹೆಯೊಳಗೊಂದು ಲಿಂಗಪ್ರಾಣತನುಮಯ[4]ದ ||
ಜಂತ್ರಗಿಟಿಗಿಟಿಯಾದ ಲಿಂಗದ |
ಚಿಂತೆಯಲಿ ಮರವಟ್ಟ ಮೆಯ್ಯ[5] ಮ |
ಹಂತನನು ಗೊಗ್ಗಯ್ಯನಲ್ಲಮ ಸಹಿತ ನೆಱೆ ಕಂಡು[6] || ೨೦ ||

ಮಾಡಬಲ್ಲರೆ ಭಕ್ತಿಯಂಗವ |
ನೋಡಿದ್ಧೆ ನಮ್ಮಯ್ಯನಿರವಿನ |
[7]ಗಾಡಿಯನು ಗಂಭೀರಭಕ್ತಿಯ ಗರುವ ಮೋಡಿಯನು[7] ||
ರೂಢಿಗೆ[8]ಕೋಭಾವನಿಷ್ಠೆಯ |
ಗೂಢನೆನುತನಿಮಿಷನ ಮಿಗೆ ಕೊಂ |
ಡಾಡಿ ಗೊಗ್ಗಯ್ಯಂಗೆಯಲ್ಲಮಲಿಂಗ ತೋಱಿದನು || ೨೧ ||

ಭಂಗಪದವಿಯನೊಲ್ಲೆನಿನ್ನೀ |
ಲಿಂಗದಲಿ ಸುಖಿಯಪ್ಪೆನೆಂದಾ |
ಭೃಂಗಿನಾಥನೆ ಶಿವಸಮಾಧಿಯಲಿದ್ದನೆಂಬಂತೆ ||
ಲಿಂಗದಲಿ ನೆಱೆ ನಟ್ಟ ನೋಟದ |
ಕಂಗಳೀ ಕರುಳಾಗಿಯೆಲುವೆ ಸ |
ದಂ[9]ಗದನಿಮಿಷನಿರವನಾ ಗೊಗ್ಗಯ್ಯನೀಕ್ಷಿಸಿದ || ೨೨ ||

ಇದೇ ಕಣಾ ಶಿವಲಿಂಗಭಕ್ತಿಯ |
ಹೃದಯವನು ಸಾಧಿಸುವ ಪರಿ ಭಾ |
ವದಲಿ ನೆಱೆ ನಟ್ಟಾಲಿಯಲಿ ನಿಬ್ಬೆಱಗಿನಂದ[10]ದಲಿ ||
ಇದನು ಸಾಧಿಸದನ್ಯವ್ಯವಸಾ |
ಯದಲಿ ಸಾ[1]ವೊಡೆ ಕಬ್ಬಿನಿಚ್ಚೆಗೆ |
ಬಿದಿರ ಮೆಲುವಂತಪ್ಪುದೈ ಗೊಗ್ಗಯ್ಯ ಕೇಳೆಂದ || ೨೩ ||

---

೧ ದನು ( ಜ. ) ೨ ಲಿಂಗವ ( ಚ. ) ೩ ದಂಗವ ಬೇ ( ಗ. ) ೪ ನ ( ಅ, ಚ. ) ೫ ಮರೆ ಹೊಕ್ಕ ಮಹಿಮ ( ಇ. ) ೬ ಕಂಡರನುಪಮನ ( ಇ. ) ೭-೭ ಗಾಢಭಕ್ತಿಯ ಗುರುವಿಕೆಯ ಗಂಭೀರ ಗಾಡಿಯನು ( ಗ. ) ೮ ವರ್ಗಂ ( ಗ. ) ; ವೆಸೆ। ವಂ ( ಕ. ) ೯ ಗ ( ಇ, ಉ, ಕ, ಗ. ) ೧೦ ನಡೆ ( ಇ. )

ಬಡವನಕ್ಷಂಯ[1]ನಿಧಿ[2]ನಿಧಾನವ |
ನೆಡಹುತಲಿ ಕಂಡಂತೆ ಕೈಕಾಲ್ |
ಮುಡುಬಗಳವಟ್ಟಂತೆ ಕುರುಡಗೆ ಕಣ್ಣು ಬಂದಂತೆ ||
ಬಿಡದೆಯಱಸುವ ಬಳ್ಳಿ ಕಾಲನು |
ತೊಡರಿತೆಂಬಂತೆನ್ನ ಬಯಕೆಯ |
ಕಡೆಯ ಕಂಡೆನೆನುತ್ತಲಲ್ಲಮ ನುಡಿದನುಚಿತದಲಿ[3] || ೨೪ ||

ಗುರುವೆ ಕರುಣಿಸು ಭಕ್ತಿಭಾವದ |
ಕ[4]ರುವೆ[5] ಕರುಣಿಸು [6]ಲಿಂಗನಿಷ್ಠೆಯ |
ಗರುವೆ[6] ಕರುಣಿಸು ಕರುಣಿಸೆನುತನಿಮಿಷನ ಕೊಂಡಾಡಿ ||
ನರನು ತಾ ದಿಟವೆಂಬ ಬಳಕೆಯ |
ಪರಿಯನಂಗೀಕರಿಸಿ ಪ[7]ರರಿಗೆ |
ಪರಮನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ || ೨೫ ||

ಅಱ[8]ಯುದವರಾಳೋಚನೆಗೆ ತನ |
ಗುಱು[8]ವ ಗುರುವನಿಮಿಷನು ತಾನೇ |
ನೆಱೆ ವಿನೂತನ ಶಿಷ್ಯನೆಂಬವೊಲಖಿಳ ಭಕ್ತರಿಗೆ ||
ಅಱುಹನಂಗೀಕರಿಸಿ[9] ತನ್ನಯ |
ಕುಱುಹಿನಾಕಾರದಲಿ ಕಲಿಸುವ |
ತೆಱನನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ || ೨೬ ||

ಹತ್ತೆ ಬಂದಿರೆ ಸೂಜಿಗಲ್ಲನು |
ಹತ್ತಿ ಮೋಹಿಪ[10] ಸೂಜಿಯಂತಿರೆ |
ತೆತ್ತಿಸಿದುದಾ ಸಚ್ಚಿದಾನಂದಸ್ವರೂಪೆನಿಪ ||
ನಿತ್ಯನಲ್ಲಮನಂಶವಾದ ನಿ |
ಮಿತ್ತವಾಕ್ಷಣ ಕಾಣುತವೆ ವ್ಯೈ |
ಯೆತ್ತಿತೊಯ್ಯನೆಯನಿಮಿಷಯ್ಯನ ಕೈಯ ಶಿವಲಿಂಗ || ೨೭ ||

೧ ಕ್ಷಿಗೆ ( ಇ. ) ೨ ಬರುತಿದಿರೊಳು ( ಗ. ) ೩ ದೇವನಿಂತೆಂದ ( ಗ. ) ೪ ತ ( ಇ, ಗ, ಚ. ) ೫ ತರಣಿ ( ಅ. ) ೬-೬ ಯುಕ್ತಿ ಮಾರ್ಗದ । ಸಿರಿಯೆ ( ಗ. ) ೭ ನ ( ಅ. ) ೮ ಗೊರೆ ( ಮು. ) ೯ ಅರಿವಿನಿಂಗಿತವನ್ನು ( ಚ. ); ಅರಿವಿನಂಗೀಕವನು ( ಅ, ಒ, ಕ, ಗ, ಜ. ) ೧೦ ಹೋಗುವ (ಜ.)

ನೋಟವೇ ಪ್ರಾಣಸ್ವರೂಪಿನ |
ಮಾಟವಾದ ನಿಮಿತ್ತ ಲಿಂಗದ |
ಕೂಟದೊಡನಾ[೧]ದನಿಮಿ[೨]ಷಯ್ಯನ ಜೀವಕಳೆ ಬಂದು ||
ನಾಟಿತೀತನ ದಿವ್ಯದೇಹದ |
ಕೋಟರದೊಳೇನೆಂಬೆನೈ[೩]ಕ್ಯದ |
ಮಾ[೪]ಟದಲಿ ಮಮಕರಿಸಿ ಮಕರಿಸಿ[೫] ಮೆಱೆ[೬]ದನಲ್ಲಮನು || ೨೮ ||

ಲಿಂಗದೊಡನನಿಮಿಷನ ನೋಟದ |
ಕಂಗಳಾತನ ಜೀವಕಳೆ ಹೆಱೆ[೭] |
ಹಿಂಗದಲ್ಲಮನಲ್ಲಿ ನೆಲಸಿದೊಡೀತನದ ಕಂಡು ||
ಅಂಗವಿಸುವೊಡೆಯೆಮ್ಮ ಬಱಿ[೮]ಯಱು |
ಮಿಂಗೆ ಭೇದಿ[೯]ಸಬಾರದಿವರನು |
ಸಂಗದಂಗವನೆನುತಲಾ ಗೊಗ್ಗಯ್ಯ ಬೆಱಗಾದ || ೨೯ ||

ಈ ಕೃಪಾಳುವೆ ದೇವನಾಗಲಿ |
ಬೇಕದಲ್ಲದೊಡನಿಮಿಷನ ತಾ |
ಸ್ವೀಕರಿಸುವನೆ ಕೂಡಬಲ್ಲುದೆ ಲಿಂಗವೀತನಲಿ ||
ಬೇಕೆನುತಲೆನಗೀ ರಹಸ್ಯದ |
ರೇಖೆಯ[೬]ನು ತೋಱಿ[೭]ಸುವನೇ ಭೂ[೮] |
ಲೋಕದೊಳಗಿದು ಪೊಸತೆನುತ ಗೊಗ್ಗಯ್ಯನಿಂತೆಂದ || ೩೦ ||

ಎಲೆ ಮಹಾತ್ಮನೆ ನಿನ್ನ ಸೂತ್ರದ |
ಹೊಲಬಿದಲ್ಲದೆ ಸುಮ್ಮನೀ ಪರಿ |
ಸಿ[೮]ಲುಕಬಲ್ಲುದೆ ನಿನ್ನೊಳೀ ಗುರು[೯]ಲಿಂಗಕಳೆ ಬಂದು ||
ನೆಲಸಿತದುಕಾರಣದಲಾನದ |
ತಿಳಿದೆನೀಗಳು ನೀನೆ ನಿರುಪಮ |
ನಿಳಯನಹೆಯೆನುತಲ್ಲಮನ ಗೊಗ್ಗಯ್ಯನಿಂತೆಂದ[೧೦] || ೩೧ ||

---

೧ ಳಗಾ ( ಜ. ) ೨ ವನಾ ಬಳಿಯಲ್ಲಿ ( ಗ. ) ೩ ಕೂ ( ಗ. ) ೪ ಸೌಖ್ಯದಿ ( ಚ. ) ೫ ಭಾವಿ ( ಅ. ) ೬ ವಿ | ವೇಕವ ( ಗ. ) ೭ ಮೂ ( ಗ. ) ೮ ನಿ ( ಗ, ಜ. ) ೯ ಶಿವ ( ಅ. ); ಳಿಂತೀ ( ಜ. ) ೧೦ ಹೊಗಳಿದನು ಗೊಗ್ಗಯ್ಯ ( ಅ. )

ಸಾರೆಯಲಿ ಶಿವಲಿಂಗಭಕ್ತಿಯ |
ದಾರಿಯನು [1]ನಾಸನಿಮಿಷನ ಸಾ |
ಕಾರದಲಿ[1] ಕಂಡ[2]ಱಿದೆನೀಗಳು ನಿನ್ನ ಕತದಿಂದೆ ||
ಸಾರಜಂಗಮಲಿಂಗವೆಂಬಾ |
ಕಾರದಲಿ ನೀ ಸುಳಿವುತೀಪರಿ[3] |
ಧಾರುಣಿಯ ಭಕ್ತರನು ಸಲಹೆನುತಿರ್ದನಲ್ಲಮಗೆ || ೩೨ ||

ಎನಲು ಶಿವಭಕ್ತಿಯ ರಹಸ್ಯದ |
ಘನವು ಗೊಗ್ಗಯ್ಯಂಗೆ ವೇದಿ[4]ಸಿ |
ದನುವ ತಾನ[5]ಱಿದಾ[6]ದೊಡಿದಕೇನಿಂತನೆಂದಂತೆ[5] ||
ಅನುಕ[7]ರಿಸಿ ಕಾಣಿಸುತ ಜಗತೀ |
ಜನವ ಸುಖಿಗಳ ಮಾಡುವೆನು ನಾ |
ನೆನುತಲಿರ್ದನು ಗುರು ಗುಹೇಶ್ವರಲಿಂಗ ಕರುಣದಲಿ || ೩೩ ||

ಜಗದ ಭಕ್ತರದಾವ ಮುಖದಲಿ |
ಹೊಗುತಲಿರ್ದರು ತಾನು ಬಳಿಕಾ |
ಬಗೆಯನಂಗೀಕರಿಸಿಕೊಂಡನು ತನ್ನ ಲೀಲೆಯಲಿ ||
ಬಿಗಿದ ಬೆಱಗಿನ ಕೈಯ ಲಿಂಗದ |
ತೆಗೆದ ಚಿತ್ತದ ನಟ್ಟ ನೋಟದ
ಮೊಗದ ಭಾವದ ಭಕ್ತಿಯಂಗವ[8] ತೊಟ್ಟನಲ್ಲಮನು || ೩೪ ||

ಒಡನೆ ಕಾಣುತಲಂತದನು ನೀ |
ನೊಡೆಯನಾಗಿಹುದೀ ಪರಿಯಲೀ |
ಪೊಡವಿಯಲಿ ಸದ್ಭಕ್ತರೆಲ್ಲರಿಗಱುವನೀವು[9]ತಲಿ ||
ನುಡಿದು ತೋಱಲದೇಕೆ[10] ನೀನೇ |
ನಡೆದು ತೋಱಿಸಿ ಲಿಂಗನಿಷ್ಠೆಯ |
ಹಿಡಿಹುಗೊಳಿಸುವುದೆಂದನಾ ಗೊಗ್ಗಯ್ಯನಲ್ಲಮಗೆ || ೩೫ ||

---

೧-೧ ಮಿಷದೇವನನುಯೀ । ಕಾರಣದಿ ( ಇ. ) ೨ ನಾನ ( ಉ. ) ೩ ಗಳು ( ಇ. ) ೪ ಧಿ ( ಇ, ಖ, ಗ. ) ೫-೫ ರುಹಿಸಿದೆನಿದೆಯಸಿಮಿಷಭಕುತಿಯಂತೆ ( ಇ. ) ೬-೫ ಡಿದನು ಲಿಂಗೈಕ್ಯಸಂಬಂತ ( ಗ. ) ೫ ನರಿದಂತೆ ( ಉ. ) ೭ ಚ ( ಒ, ಕ, ಖ. ) ೮ ನುವನು ( ಇ. ) ೯ ತೋರು ( ಗ. ) ೧೦ ತೋರುವನಂತೆ ( ಗ. )

ದೀನ ಮನದವನಂತೆ ಕಂಡ ನಿ |
ಧಾನವನು ತಾನೊಬ್ಬನುಂಬನೆ |
ಧಾನಿ ಲೇಸ್ಸೆ ನಿನ್ನ ಪರಿ ನೀ ಕಂಡ ಶಿವಪಥವ ||
ಮಾನವರಿಗಱುಹೆಂಬ ಮಹದಭಿ |
ಮಾನಿ ನೀನೇ ಜಗದ ಗುರುವೆಂ |
ದಾ ನಿರೂಪಮನಲ್ಲಮನ ಹೊಗಳಿದನು ಗೊಗ್ಗಯ್ಯ || ೩೬ ||

ಬಳಿಕಲಾ ಗೊಗ್ಗಯ್ಯ ನೆಱೆ[1] ನಿ |
ಶ್ಚಲದ ನೋಟದ ಲಿಂಗಭಾವದ |
ಬಳಕೆಯನೆ ಬಲಿದಿರುತಲಿರ್ದನು ನಿಜ ನಿವಾಸದಲಿ ||
ಇಳೆಯ ಭಕ್ತರ ಪಾವನವ ಮಾ |
ಡಲಿಕೆ ತಾನೇ ಕುಱುಹುವಿಡಿದ |
ಗ್ಗಳೆಯತನದಲಿ ನಡೆದನಲ್ಲಮಲಿಂಗ ಲೀಲೆಯಲಿ || ೩೭ ||

## ಅಂತು ಗತಿ ೧೧ಕ್ಕಂ ಪದ ೫೧೦ ಕ್ಕಂ ಮಂಗಳಂ

[1] ಈ ಪದ್ಯವು ( ಖ ) ಪ್ರತಿಯಲ್ಲಿಲ್ಲ.

# ಮುಕ್ತಾಯಿಯಕ್ಕನ ಗತಿ

**ವಚನ**

ಮುಕ್ತಿಗೆ ಮುಖವಾಗಿ ಯುಕ್ತಿಗೆ ಹೊರಗಾಗಿ
ಅರಿವಿಂಗೆ ಅರಿವಾಗಿಪ್ಪ ಭೇದವು ಎನಗೆ ಕಾಣ ಬಂದಿತ್ತು ನೋಡಾ ।
ನಿನ್ನೊಳಗಾಸೂರೆದು ನೋಡಿದಡೆ ಒರೆಯಿಲ್ಲದ ಚಿನ್ನದ ಪರಿಮಳ
ಎನ್ನ ಮನವನಾವರಿಸಿ ಪರಮ ಸುಖದ ಪರಿಣಾಮವನೊಳಕೊಂಡಿತ್ತು ನೋಡಾ ।
ಈ ಕುರುಹಿನ ಮೊಳೆಯ ಬರಿಯ ಬಯಲಲಿ ನಿಲಿಸಿ ನಿಲವ ನೋಡಿ ಕೂಡಾ
ನಮ್ಮ ಗುಹೇಶ್ವರನ ಶರಣ ಅಜಗಣ್ಣನೊಳಗೆ ನೀನು ನಿರಾಳಸಂಗಿಯಾಗಿ ॥ ೧ ॥

ದೇವ ದೇವ ಶರಣಾರ್ಥಿ ಎನ್ನ ಬಿನ್ನಪವ ಅವಧರಿಸಯ್ಯಾ ।
ಕೇಳಿದ ಸುಖ ಕಿವಿಗೆ ಬೇಟವಾಯಿತ್ತು ।
ಕಿವಿಗಳ ಬೇಟ ಕಂಗಳ ಮುಂದೆ ಮೂರ್ತಿಗೊಂಡಿತ್ತು ।
ಕಂಗಳ ಮುಂದೆ ಕಂಡ ಸುಖ ಮನಕ್ಕೆ ವೇದ್ಯವಾಯಿತ್ತು ।
ಘನಮಹಿಮರ ದರುಶನದ ಸುಖವ ನೆನೆದು ಮದವಳಿದು ( ಮರಣವ ಗೆಲಿದು ) ಮಹವನೊಡಗೂಡಿದ
ಎನ್ನ ಅಜಗಣ್ಣನ ಅಗಲದ ದುಃಖ ನಿಮ್ಮ ಸಂಗದಲ್ಲಿ ಸ್ವಯವಾಯಿತ್ತು ಕಾಣಾ ಪ್ರಭುವೇ ॥ ೨ ॥

**ಸೂಚನೆ**

ಭಕ್ತಿಯನು ಮುಕ್ತಾಯಿಗರುಹಿಸಿ[೧] ।
ಮುಕ್ತನಾದಜಗಣ್ಣನಿರವನು ।
ವ್ಯಕ್ತದಲಿ ವಿರಚಿಸಿದನೆಮ್ಮಯ ಗುರು ಗುಹೇಶ್ವರನು ॥

ನೆಟ್ಟನರುಹೂಡೆ ಗುಪ್ತಭಕ್ತಿಯ ।
ಬಟ್ಟೆಯನು ಬಯಸುವರು ಭಾವಿಸಿ[೨] ।
ಮುಟ್ಟೆ ಮೋಹಿಸಿ ಬಾಹಿರಂಗದ ಭ್ರಮೆಯ ಭರಗೆಡಿಸಿ ॥
ಕೆಟ್ಟ ಕಾಯದ ಕಳವಳಂಗಳ ।
ಕಟ್ಟಿ ಕಳೆದಾ ಪ್ರಳಯಕಾಲನ ।
ಮೆಟ್ಟಿ ನಡೆವರು ತಿಳಿವುದೀ[೩] ಪ್ರಭುಲಿಂಗಲೀಲೆಯಲಿ ॥ ೧ ॥

೧ ದ ( ಅ, ಜ. ) ೨ ಸೆ ( ಇ, ಒ, ಗ. ) ೩ ಕೇಳುವುದು ( ಜ. )

ಅಲ್ಲಮಪ್ರಭುರಾಯನಾನತ |
ರೆಲ್ಲರನು ಸಂಸಾರ ನಿರಸ[1]ದ[2] |
ಕಲ್ಲ ಕಾಱು[3]ವ ಕೋಟಲೆಯ ಮಾಣಿಸಿ ಶರೀರದಲಿ ||
ಸಲ್ಲಲಿತ ಲಿಂಗಾನುಭಾವದ |
ಬೆಲ್ಲವನು ಮೆಲಕಲಿಸಿ ನಿಜಸುಖ |
ದಲ್ಲಿ ನಿಲಿಸುವೆನೆನುತ ಬರುತಿರ್ದನು ವಿನೋದದಲಿ || ೨ ||

ಪೊಡವಿಯಲಿ ನೆಱೆ[4] ಗುಪ್ತಭಕ್ತಿಯ |
ಲ[5]ಡಗಿದ್ದೈ[6]ಕ್ಯಸ್ಥಳ[7] ಸಮಾಧಿಯ |
ನೊಡರಿಚಿದನಜಗಣ್ಣನೆಂಬ ಮಹಾತ್ಮನಾತಂಗೆ ||
ಒಡನೆ ಹುಟ್ಟಿದಳೊಬ್ಬಳಱಿಯದೆ |
ಕಡು ಖತಿಯಲಿರುತಿರಲಿಕಲ್ಲಮ |
ನಡೆದು ಬಂದನು ಮಾಣಿಸಲು ಮುಕ್ತಾಯ ಮನದಳಲ || ೩ ||

ಬರಲು ಮಿಗೆ ಕಾಣುತಲಿ ಸಲೆ ಸ |
ತ್ಕರಿಸಿ ವಂದಿಸಿ ತನ್ನ ಚಿಂತೆಯ |
ಪರಿಹರಿಸುವಂತಪ್ಪನೊಬ್ಬ ಮಹಾತ್ಮ ನೀನೆನಗೆ ||
ದೊರಕಿದೆಯೆಲಾ ಎನ್ನ ಪುಣ್ಯಕೆ |
ಸರಿಯದಾರೆ[8]ನುತಲ್ಲಮಪ್ರಭು |
ಬರೆಲು ಮುಕ್ತಾಯಿಗಳು ಪರಿಣಮಿಸಿದರು ಭಕ್ತಿಯಲಿ || ೪ ||

ತಾಯೆ ಭಕ್ತರಿಗುಂಟೆ ಚಿಂತೆಗ |
ಳಾಯಸಂಗಳು ಲೋಕಲೌಕಿಕ |
ರಾಯತವ ನೀ ನೆಗಳಿ ಬಱಿದೆಗೆ ಹಲವು ಹಂಬಲಿಸಿ ||
ಬಾಯ ಬಿಡಲಹುದೇ ವೃಥಾ ನೀ |
ಕಾಯದಜಗಣ್ಣಂಗೆ ಮರುಳೇ |
ಮಾಯೆ ಮೋಹವಿದೇತಕೌ ಮುಕ್ತಾಯಿ ಕೇಳೆಂದ || ೫ ||

---

೧ ವಿಷಯ ( ಇ. ) ೨ ನ ( ಚ. ) ೩ ಕರಗು ( ಇ, ಜ. ) ೪ ನಿಜ ( ಅ, ಮ. ) ೫ ತೊ ( ಇ, ಉ, ಚ. ) ೬ ಪೊಡಲಿಗ್ಗೈ ( ಖ. ) ೭ ಲಿಂಗೈಕ್ಯದ ( ಅ, ಒ, ಜ. ) ; ಸ್ಥಿತಿ ( ಇ. ) ೮ ವೇಸ ( ಗ. )

ಏನ ಮಾಡುವೆನಯ್ಯ ಎನ್ನ ನಿ |
ಧಾನವಪ್ಪ ಜಗಣ್ಣ ತಂದೆಯ |
ನಾನದೆಂತಗಲುವೆನು ನನಗಿದನನಿತ ಸೂಚಿಸದೆ ||
ತಾನು ಹೋದೊಡೆ ಬಳಿಕಲೆನಗಿ |
ನ್ನೇನು ಗತಿ[1]ಯೆಂದೆನುತ [2]ಕಡು ದು |
ಮ್ಮಾ[2]ನವೆ[1]ಲ್ಲವ ನುಡಿದಳಾ ಮುಕ್ತಾಯಿಯಲ್ಲಮಗೆ || ೬ ||

ಮರುಳಲಾ ನೀನಕ್ಕ ಮುನ್ನೇ |
ನಿರದಲಿದ್ದನೆ ಬಳಿಕಲೀಗಲಿ |
ಶರಿರವನು ಸಡಿಲಿಸಿದನೇ ಅಜಗಣ್ಣನಾರೆಂದು ||
ಪರಿಕಿಸದೆ ಹಂಬಲಿಸಲೇತಕೆ |
ಗುರು ಗುಹೇಶ್ವರ ಲಿಂಗ ಸಂಗದ |
ಶರಣನಾತನು ಮಱುಗದಿರು ಮುಕ್ತಾಯಿ ಕೇಳೆಂದ || ೭ ||

ಬೆಡಗನಾಡದಿರಯ್ಯ ಕೇಳೆ |
ನ್ನೊಡನೆ ಹುಟ್ಟಿದನೀಸು ದಿನವೊಂ |
ದೊಡಲುವಿಡಿದಜಗಣ್ಣನಿರ್ದನು ಗುಪ್ತಭಕ್ತಿಯಲಿ ||
ನಡೆದು ತೋಱಿಸುತೆಲ್ಲರಱಿಯಲು |
ಕಡೆಯಲೀ ಪರಿ ಕಾಣಬಾರದ |
ತೊಡಕನೊಡ್ಡಿದನೆಂದಳಾ ಮುಕ್ತಾಯಿಯಲ್ಲಮಗೆ || ೮ ||

ಕಾರಣವ ಕಾಣಿಸ[3]ದ ಮನದ ವಿ |
ಕಾರಿಗಳಿಗಾ[3] ಶರಣರೊಂದು ಶ |
ರೀರವನು ತೋಱಿದೊಡೆ ನಿನ್ನವರೆಂದು ನಂಬದಿರು[4] ||
ಹಾರವಿಸದಿರು ತಿಳಿದು ನೋಡಿ ವಿ |
ಚಾರಿಸುವೊಡಜಗಣ್ಣನೆಂಬನ |
ಪಾರ ಮಹಿಮನು ನಿತ್ಯನೌ ಮುಕ್ತಾಯಿ ಕೇಳೆಂದ || ೯ ||

೧-೧ ಯಿನ್ನೆನುತಲಂತದ | ಮಾಣದೆ ( ಇ. ) ೨-೨ ತನ್ನ ದು | ಮಾ ( ಉ. ) ೩-೩ ದೆ ಮನದಲಿ | ಕಾರಣಿಕರಾ ( ಜ. ) ೪ ಬುವರೆ ( ಅ. )

ಆತ ಮಹಿಮ[೧]ನು ನಿತ್ಯನಹನೀ |
ಮಾತು ಹುಸಿಯದು ತಪ್ಪದಾದೊಡೆ |
ಭೂತಳದೊಳಿರುತಿರದೆ[೨] ಗುಪ್ತಶಿವಾನುಭಾವನೆಯ ||
ರೀ[೩]ತಿಯಿಂದಜಗಣ್ಣನುಪಮಾ |
ತೀತನಾದ[೪]ನು ಬಳಿಕಲೆಮ್ಮಿರ |
ವೇತಕೆಂದೆನುತಿರ್ದಳಾ ಮುಕ್ತಾಯಿಯಲ್ಲಮಗೆ || ೧೦ ||

ಲೋಕ ಲೌಕಿಕರೊಡನೆ ಬಳಕೆಯ |
ದೇಕೆ ಪರಮಾರ್ಥದಲಿ ತಾನೇ |
ಕೈಕನಾದ[೫]ಹೆನೆಂದೆನುತಲಜಗಣ್ಣ ನಿರ್ವಯಲ ||
ಸ್ವೀಕರಿಸಿದೊಡೆ ನೀನು ನಿನ್ನವಿ |
ವೇಕದಲಿಯೊಂದೊಂದು ನುಡಿವುದು |
ಸಾಕೆನುತ ಮುಕ್ತಾಯ ಸಂತೈಸಿದನು ಪ್ರಭುರಾಯ || ೧೧ ||

ದೇವ ನಿಮ್ಮವರುಗಳ ಪರಿಯನು |
ನೀವೆ ಬಲ್ಲಿರಿ ಹಾವಿನಡಿಯನು |
ಹಾವುಗಳು ನೆಱೆ ಬಲ್ಲ[೬]ವಲ್ಲದೆ ನಮಗೆ ಗೋಚರವೆ ||
ಭಾವಿಸುವೊಡೆಮಗಿನ್ನು ಗತಿ ಮತಿ |
ಯಾವುದೆಂದೆನುತಲ್ಲಮಪ್ರಭು |
ದೇವರಿಗೆ ಮುಕ್ತಾಯಿ ಬಿನ್ನೈಸಿದಳು ಭಕ್ತಿಯಲಿ || ೧೨ ||

ಅಕ್ಕ ಕೇಳೌ ನಿನ್ನ ಹೆಸರಿಗೆ |
ತಕ್ಕ ಬಯಕೆಯ ನೀನು ಬಯಸಿದೆ |
ಮಿಕ್ಕ ಭವಭಾರಿಗಳು ಬಲ್ಲರೆ ಲಿಂಗ[೭]ಮಾರ್ಗವನು ||
ಹೊಕ್ಕು ಹೋರಟೆಯೆಲ್ಲವನು ಹೊ |
ಯ್ದಿಕ್ಕಿ ಸುಖಿಸುವೊಡಂ[೮]ತ್ಯ ನಿಜ ಪದ |
ದಿಕ್ಕೆ ನಿನಗಹುದೆಂದೆನುತ ಮುಕ್ತಾಯಿಗಿಂತೆಂದ || ೧೩ ||

---

೧ ಮುಕ್ತ ( ಉ, ಚ. ) ೨ ತಿರುತೆ ( ಉ. ) ೩ ಸೀ ( ಉ. ) ೪ ತ ( ಕ. ) ೫ ಕಾಕಿಯಾಗಿ ( ಗ. ) ೬ ಕಾಣುವವ ( ಉ. ) ೭ ನಿಮ್ಮ ( ಜ. ) ೮ ವುದಂ ( ಉ. ) ೯ ಯಾದಂದು ( ಗ. )

ಹಱುಂಗೊಲನ ಜೋಗೈಸಿಕೊಳುತಲಿ |
ತೊಱೆಯ ದಾಂಟುವರಂತೆ[1] ಲಿಂಗವ |
ನಱು[2]ವವರು ಕರ್ಮೇಂದ್ರಿಯಂಗಳನೊಯ್ಯನೋಸರಿಸಿ ||
ಹೊಱಗೆ ಮಾಡುವ ಮಾಟ[3]ವೆಲ್ಲಶಿವ |
ತೊಱೆವುದಂತರ್ಮಾರ್ಗವೊ[4]ಂದನೆ |
ಹೊಱುವುದಿದು[5] ಶಿವಭಕ್ತಿಯೆಸೌ ಮುಕ್ತಾಯಿ ಕೇಳೆಂದ || ೧೪ ||

ನಿಯತವಿದು ದೇಹಿಗಳು ಕರ್ಮೇಂ |
ದ್ರಿಯವ ಜಱು[6]ದೊ[7]ಡೆ ಜೀವವಾವಾ |
ಶ್ರಯದಲಿಹುದು ಮನಸ್ಸು ಮ[8]ಚ್ಚುವದೆಂತು ಪಟುವಾಗಿ ||
ಬಯಲು ತಾನಹ ಪರಿಯದಾವುದು |
ನಿಯಮಿಸ್ಸೈ ನೀನೆನಲು ನಿಜ ನಿ |
ರ್ಣಯವನಾ ಮುಕ್ತಾಯಿಗಲ್ಲಮಲಿಂಗನಿಂತೆಂದ || ೧೫ ||

ಕೇಳಿದೌ ಶಿಶುಗಳಿಗೆ ತಾಯ್ಮೊಲೆ |
ಹಾಲ ಜೀವನವಾದೊಡೆಯು ನೆಱೆ[9] |
ಪಾಲನೆಱೆವುತ ಮೆಲ್ಲಮೆಲ್ಲನೆಯಶನವನು ಸವಿ[10]ಂಸಿ ||
ಬಾಲಕರ ಪಟು ಮಾಡಬಲ್ಲ ಸ |
ಕೀಲಕರವೊಲು ಹೊಱಗೆ ಮಱೆದು ನಿ |
ರಾಳದಲಿ ನಿಲಲಱುವುದೌ ಮುಕ್ತಾಯಿ ಕೇಳೆಂದ || ೧೬ ||

ಪರಮತತ್ವವ ನುಡಿದು ಹೇಳು[11]ವ |
ಗುರುವೆ ನಿ[12]ನಗಿನ್ನೂ[13] ವಿಚಾರಿಸೆ |
ವರಮನೋವಾಕ್ಕಾಯಕರ್ಮಗಳಿರಲು ನೀವೆಮಗೆ ||
ಹಿರಿದು ಬಲ್ಲವಿಕೆಯಲಿ[14] ವಾಕ್ಯಾ[15] |
ತುರಿಯವನು ರಚಿಸಿದೊಡೆ ನಂಬುಗೆ |
ದೊರಕುವುದೆ ನಮಗೆಂದಳಾ ಮುಕ್ತಾಯಿಯಲ್ಲಮಗೆ || ೧೭ ||

---

೧ ರೈಸೆ ( ಇ. ) ೨ ಯ ( ಉ. ) ೩ ಕೂಟ ( ಜ. ) ೪ ದು ಸನ್ಮಾರ್ಗದಲಿಯೊ ( ಉ. ) ; ದು ಅಂತರ್ಜ್ಞಾನವೊ ( ಜ. ) ೫ ಯರಿತಿಹುದು ( ಜ. ) ೬ ತೊರೆವೊ ( ಜ. ) ೭ ಹೆ ( ಕ. ) ೮ ಎರೆ ( ಉ. ) ೯ ನ್ನ ( ಗ. ) ೧೦ ಲಿ ( ಉ, ಖ. ) ೧೧ ತೋರು ( ಇ. ) ೧೨ ನ ( ಗ. ) ೧೩ ನಿಮ್ಮಿಂದಲಿ ( ಉ. ) ೧೪ ವನಂತೆ ( ಕ. ) ೧೫ ವಿವೇಕಿಯೊಲು ಚಾ ( ಗ. )

ಅಹುದು ಮತ್ತೀನವ್ವ ದಿಟ ಘನ |
ಮಹಿಮನಾದರೆ ನೋಡಲಿದಿರಿ |
ಟ್ಟಿಹವೆ ನಿರ್ವಯಲಿಗೆ ಮನೋವಾಕ್ಕಾಯಕರ್ಮಗಳು ||
ವಿಹಿತವಾ ನಿರ್ಣಯವನಱಿವೊಡೆ |
ಬಹಳವದು ಸಂಕೋಚ[೧]ದಲಿ ನಿ |
ರ್ವಹಿಸಿ ಹೇಳುವೆನೆನುತಲಲ್ಲಮನಾಕೆಗಿಂತೆಂದ || ೧೮ ||

ಬೆಂದ ನುಲಿಯಾಕಾರವಾಗಿಹು |
ದೆಂದೊಡದು ನೆಯಿವವರ ಕೆಲಸಕೆ |
ಬಂದುದುಂಟೇ ಮರುಳೆ ಲಿಂಗಜ್ಞಾನವಹ್ನಿಯಲಿ ||
ಬೆಂದು ಹೋದೊಡಲುಗನು[೨] ಭಾವಿಸ |
ಲೊಂ[೩]ದುವಿಲ್ಲದ ಬಯಲುಗನೊಳಿ |
ನ್ನೊಂದು ಕಲ್ಪಿಸಲಾಗದೌ ಮುಕ್ತಾಯಿ ಕೇಳೆಂದ || ೧೯ ||

ಒಡೆಯ ಚಿತ್ತಯಿಸಯ್ಯ ನಿರ್ವಯ |
ಲೊಡಲುಗನು ನೀನಹುದು ದಿಟವಾ |
ದೊಡೆಯದೆಂತೆನ್ನೊಳು ವಿವೇಕವಿಚಾರಬೋಧೆಯನು ||
ನುಡಿವ ಪರಿಯೆಂತಣ್ಣ[೪] ನಿನ್ನಯ |
ಬೆಡಗ ನಾನಱಿವಂತೆ ಹೇಳೆನ |
ಲೊಡನೆಯಲ್ಲಮಲಿಂಗನಾ ಮುಕ್ತಾಯಿಗಿಂತೆಂದ || ೨೦ ||

ತಂಗಿ ಕೇಳಾರಾರ ಭಾವದ |
ಭಂಗಿಯೆಂತಿಹುದಂತೆ ಮದ್ವಚ |
ನಂಗಳೆಮ್ಮಯ ತನುಮನಚ್ಛಾಯೆ[೬]ಗಳು ತೋಱಿದೊಡೆ ||
ಅಂಗವಿದರಾ[೭]ವೆಂದು ನೀ ಮನ |
ಸಿಂಗೆ ತಾರದಿರೆನುತಲಲ್ಲಮ |
ಲಿಂಗನಾಕೆಗಿದೊಂದು ರೀತಿಯ ನುಡಿದು ತೋಱಿಸಿದ || ೨೧ ||

---

೧ ತೋಷ (ಗ.) ೨ ಲಿಂಗೆ (ಗ.) ೩ ರೂಹಿ (ಕ.) ೪ ಹಾನಿಗ | ಳೊಂ (ಇ.) ೫ ತಂಪು (ಜ.) ೬ ನೋತ್ಸಾಹ (ಉ, ಚ.) ; ನೋವಚನ (ಇ.) ೭ ಅಂಗಿಗಳು ನಾ (ಗ.)

ಎಲ್ಲವಹುದೈ ದಿಟ ವಿಚಾರಿಸೆ |
ಬಲ್ಲವರಿಗಾ ಪಿಂಡಮಯತನು |
ವಿಲ್ಲದಿರೆ ತಾಳೋಷ್ಟ್ರಸಂಪುಟಸಂಗಶಬ್ದಗಳು ||
ಎಲ್ಲಿ[1] ಸಂಜನಿಸಿದುವು ನಿಮ್ಮೊಡ |
ಲಲ್ಲಿ ಪೇಳಿದ ದಸರಿ[2]ದೊಡಕಿನ |
ಸೊಲ್ಲನಂಗ[3]ವನೆನುತ ಕೇಳಿದಳಾಕೆಯಲ್ಲಮನ || ೨೨ ||

ಮಗಳೆ ಕೇಳೌ ಪೃಥ್ವಿಮಯ ತನು |
ಮುಗಿಲಿಗಿಲ್ಲದೊಡೇನು ಗರ್ಜನೆ |
ನೆಗಳುತಿರವೇ ಲೋಕವಱಿಯಲ[4]ದೇನು ಸೋಜಿಗವೆ ||
ಬಗೆಯೆ ಸಾಕ್ಷಾದಪ್ರಮೇಯನ |
ಸಗುಣನಿರ್ಗುಣವೆನಿಸುವೆನ್ನಯ |
ವಿಗಡತನಕೇನಱಿದು ನುಡಿ ಮುಕ್ತಾಯಿ ಕೇಳೆಂದ || ೨೩ ||

ಅಹುದು ಮತ್ತೇನಯ್ಯ ನಿಮ್ಮಯ |
ಮಹಿಮೆಗಳನಾವೆತ್ತ ಬಲ್ಲೆವು |
ಸಹಜವಾದೊಡೆ ವೇದಶಾಸ್ತ್ರಾಗಮಗಳುಪಮಿಸವ ||
ಬಹಳ ನಿಧಿಯೇ ನೀನೆ[5] ಶರಣೆಂ |
ದಿಹೆವು ನಾವೆಮಗೇಕೆ ತರ್ಕ |
ಸ್ಪೃಹೆಗಳೆಂದೆನುತಿರ್ದ[6]ಳಾ ಮುಕ್ತಾಯಿಯಲ್ಲಮಗೆ || ೨೪ ||

ಮನದ ಮತ್ಸರವಳಿದು ಸ[7]ಮತೆಯ |
ನೆನಹು ನೆಲಸಿ ನಿಗರ್ವ[8]ತನದೊಂ |
ದನುಭವಣೆಯಳವಟ್ಟುದಾ ಮುಕ್ತಾಯಿಗೊಲವಿಂದೆ ||
ವಿನುತ ನಿ[9]ತ್ಯಾನಂದ ನಿರ್ಮಳ |
ತನುವೆ ತಾನಹ ಸೌಖ್ಯತೆಯ ಸೂ |
ಚನೆಯನುಪದೇಶಿಸಿದನೆಮ್ಮಯ ಗುರು ಗುಹೇಶ್ವರನು || ೨೫ ||

---

೧ ಲ್ಲ ( ಒ, ಜ. ) ೨ ಶರಿರ ( ಅ, ಇ, ಕ. ) ೩ ದ ( ಇ. ) ೪ ನೋಡೆ ಲೋಕವಿ ( ಗ. )
೫ ನಿನಗೆ ( ಜ. ) ೬ ಮ ( ಗ. ) ೭ ತು ಗರುವ ( ಉ. ) ೮ ಸ ( ಗ, ಜ. )

ನೂಲ ಹಿಡಿದೋಜೆಯಲಿ ಬೆಟ್ಟದ |
ಮೇಲನಡರುವರಂತೆ ಭಕ್ತಿಯ |
ಕೀಲನುಪದೇಶಿಸಿದ ಗುರುವಚನಾ[೧]ಜ್ಞೆಯನು ಹಿಡಿದು ||
ಲೀಲೆಯಿಂದಾ ಬ್ರಹ್ಮರಂಧ್ರವ |
ನಾಲಿಸುತಲೊಡಹಾಯ್ದು ನಿಜದ ನಿ |
ರಾಳದಲಿ ನಿಂದಿರ್ದಳಾ ಮುಕ್ತಾಯಿ ಭಕ್ತಿಯಲಿ || ೨೬ ||

ಸುಖವನೈದಿದಳಲ್ಲಮನ ಪದ |
ನಖದ ಕಾಂತಿಯ ಕಂಡು ಮನಸಿನ |
ಮುಖದ ಕತ್ತಲೆ ತಿಳಿಯೆ[೨] ಪರಮಾನಂದಭಾವದಲಿ ||
ಅಖಿಲ ಶರಣರು ನೋಡಲಚಲಿತ |
ಸುಖದಲೋಲಾಡುತ್ತಲಿರ್ದಳು |
ನಿಖಿಳ ಸದ್ಯೋನ್ಮುಕ್ತೆ ಮುಕ್ತಾಯಿಗಳು ಜಗವಱಿಯೆ || ೨೭ ||

**ಅಂತು ಗತಿ ೧೨ಕ್ಕಂ ಪದ ೫೩೭ ಕ್ಕಂ ಮಂಗಳಂ**

---

೧ ಸಲು ತಾ ಗುರುವಾ ( ಇ. ) ; ಗುರುಚರಣಾ ( ಗ. ) ೨ ದು ( ಅ, ಇ. )



ಸೊನ್ನಲಪುರದಲ್ಲಿ ಪ್ರಭುದೇವರು ಸಿದ್ಧರಾಮುನಿಗೆ ದರ್ಶನಕೊಟ್ಟ ಸ್ಥಲ

# ಸಿದ್ಧರಾಮನ ಗತಿ

**ವಚನ**

ಕಳ್ಳಗಂಜಿ ಕಾಡಹೊಕ್ಕರೆ ಹುಲಿ ತಿನ್ನದೆ ಮಾಣ್ಬುದೆ । ಹುಲಿಗಂಜಿ ಹುತ್ತ ಹೊಕ್ಕರೆ ಸರ್ಪ ಕಚ್ಚದೆ ಮಾಣ್ಬುದೆ । ಕಾಲಗಂಜಿ ಭಕ್ತನಾದಡೆ ಕರ್ಮ ತಿನ್ನದೆ ಮಾಣ್ಬುದೆ । ಅಯ್ಯಾ ಇಂತೀ ಮೃತ್ಯುವಿನ ಬಾಯ ತುತ್ತಾದ ವೇಷಡಂಬಕರನಾನೇಂಬೆನಯ್ಯಾ ಗುಹೇಶ್ವರಾ ॥ ೧ ॥

ಅಯ್ಯಾ ನಿಮ್ಮ ಸರ ಉಂಡ ಸಬುದವೆನ್ನ ಮನಕ್ಕೆ ವೇದ್ಯವಾಯಿತ್ತು । ಅಯ್ಯಾ ನಿಮ್ಮ ನಿಜವುಂಡ ನಿಲವು ಎನ್ನ ಮತಿಗೆ ವೇದ್ಯವಾಯಿತ್ತು । ಅಯ್ಯಾ ನಿಮ್ಮ ಕರುಣ ಪ್ರಸಾದವೆನ್ನ ಸರ್ವಾಂಗಕ್ಕೆ ವೇದ್ಯವಾಯಿತ್ತು । ಅಂತು ನಿಮ್ಮ ಕಾಯಪಿಡಿದಿಪ್ಪ ಕರಸ್ಥಲವೆಂತು ವೇಳಾ ಕಪಿಲಸಿದ್ಧ ಮಲ್ಲಿನಾಥಾ ॥ ೨ ॥

ದೇಹಭಾವವಳಿದಲ್ಲದೆ ಜೀವಭಾವವಳಿಯದು । ಜೀವಭಾವವಳಿದಲ್ಲದೆ ಭಕ್ತಿಭಾವವಳವಡದು । ಭಕ್ತಿಭಾವವಳವಟ್ಟಲ್ಲದೆ ಅರಿವು ತಲೆದೋರದು । ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು । ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು । ಅದು ಕಾರಣ ಕಾಯ ಜೀವದ ಹೊಲಿಗೆಯ ಅಳಿದ ಭೇದವ ತಿಳಿಯಬಲ್ಲರೆ ನಮ್ಮ ಗುಹೇಶ್ವರಲಿಂಗದ ಅರಿವು ಸಾಧ್ಯವಪ್ಪುದು ಕಾಣಾ ಸಿದ್ಧರಾಮಯ್ಯಾ ॥ ೩ ॥

ನೀರಕ್ಷೀರದ ಸಂದುಗಳ ಹಂಸೆ ಬಿಚ್ಚಬಲ್ಲುದು ನೋಡಯ್ಯಾ । ದೇಹದ ಜೀವದ ಸಂದುಗಳ ನೀವು ಬಿಚ್ಚ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯಾ । ನೀವಿಕ್ಕಿದ ತೊಡಕ ಬಿಡಿಸಬಾರದು । ನೀವು ಬಿಡಿಸಿದ ತೊಡಕನಿಕ್ಕಬಾರದು । ಕಪಿಲಸಿದ್ಧ ಮಲ್ಲಿನಾಥಯ್ಯಾ ನೀವೆನ್ನ ಕಾಯದ ಜೀವದ ಹೊಲಿಗೆಯ ಬಿಡಿಸಾ ನಿಮ್ಮ ಧರ್ಮ ॥ ೪ ॥

ಎಲೆ ಅಯ್ಯ ಎನ್ನ ಹೊತ್ತಿಪ್ಪವಳ ನೆತ್ತಿಗಣ್ಣಿನಲಿಪ್ಪ ಲಿಂಗವ ನಾನೆಚ್ಚತ್ತು ನೋಡುವೆನೆಂತಯ್ಯಾ । ನೋಡಹೋದರೆ ನೆತ್ತಿ ಬಿರಿದು ಕಣ್ಣಾಯಿತ್ತು ನೋಡಾ । ನೋಡದಿದ್ದರೆ ಎನಗೆ ಅವಳು ತೋರಳು । ನಾ ಕಾಂಬ ತೆರನ ತೋರಾ ಕಪಿಲಸಿದ್ಧ ಮಲ್ಲಿನಾಥಾ ॥ ೫ ॥

**ಸೂಚನೆ**

ಲಿಂಗಪದವನು ಸಿದ್ಧರಾಮ ।
ಯ್ಯಂಗೆ ತೋರಿಸಿ ಗುರು ಗುಹೇಶ್ವರ ।
ಲಿಂಗನಿರ್ದನು ಸೊನ್ನಲಾಪುರದೊಳಗೆ ಲೀಲೆಯಲಿ ॥

೧ ಥ ( ಒ, ಕ, ಗ, ಚ, ಜ. )

ಇಲ್ಲಿ ಕೇಳುವುದಿನ್ನು ಸಾಧಕ |
ರೆಲ್ಲರಲ್ಪಜ್ಞಾನಮಾರ್ಗವ[೧] |
ಹೊಳ್ಳು ಮಾಡಿ[೨] ವಿಶುದ್ಧಪೂರ್ವ[೩]ಜ್ಞಾನಮಾರ್ಗದಲಿ ||
ಒಳ್ಳಿತಾಗಿಹ ಸುಖವ ಬಯಸಲು[೪] |
ಬಲ್ಲ ಭಕ್ತರಿಗಱಿವು ತೋಱಿಸು |
ವಲ್ಲಮಪ್ರಭು ಗುರು ಗುಹೇಶ್ವರ ಲಿಂಗ ಲೀಲೆಯಲಿ || ೧ ||

ತಾನೆ ತನ್ನ ವಿನೋದದಿಂದೆ ಮ |
ಹಾನುಭಾವವ ಬಯಸಿ ಬಳಲುವ |
ಮಾನವರಿಗಾ ಪ್ರಾಣಲಿಂಗವನಱುಹಿ[೫]ಸುವೆನೆನುತ ||
ತಾನೆ ವರ ಗುರು ತಾನೆ ಜಂಗಮ |
ತಾನೆ ಶಿವಲಿಂಗಸ್ವರೂಪವ |
ನೂನವಿಲ್ಲದೆ ಧರಿಸಿಕೊಂಡಾ ಪ್ರಭುವೆ ಬರುತಿರ್ದ || ೨ ||

ಪಿಂಡದೊಳು ಪಿರಿದೆನಿಪ ನಾಡೀ |
ಮಂಡಲಂಗಳ ತಾನೆ ಸಾಧಿಸಿ |
ಕಂ[೬]ಡಖಂಡಜ್ಞಾನದಿಕ್ಕೆ[೭]ಯ ಪರಿಯನಿದಿರಿಟ್ಟು ||
ಮಂಡಲಿಸಿ ಕಲುಮರನಲೊಡ್ಡಣೆ |
ಗೊಂಡು ಮಾಡಿಸಿ ಹೆಸರುವಡೆದು |
ದ್ದಂಡರೀತಿ[೮]ಯ ಸಿದ್ಧರಾಮನ ಪುರಕೆ ಪ್ರಭು ಬಂದ || ೩ ||

ಹಲವು ದೆಸೆ[೯]ಯಲಿ ಚಿತ್ರ[೧೦]ಪತ್ರದ |
ಚೆಲುವನಾಗಿರೆ[೧೦] ಪರಿಪರಿಯ ದೇ |
ಗುಲವ ಮಾಡಿಸುತಿಪ್ಪ ಗುಡ್ಡಗಳೆಕ್ಕೆವಿಂಡುಗಳ ||
ನೆಲನೆ ಬೆಸಲಾದಂತೆ [೧೧]ಮಿಗೆ ಮ |
ಣ್ಗೆ[೧೧]ಲಸದೊಡ್ಡರು ಬಂಡಿಕಾಱರು |
ಕಲುಕುಟಿಗರಿದ್ದೆಡೆಯ ಸೊನ್ನಲಪುರಕೆ ಪ್ರಭು ಬಂದ || ೪ ||

---

೧ ಪಥವನು ( ಜ. ) ೨ ಗಳೆದು ( ಇ, ಉ. ) ೩ ಪೂರ್ಣ ( ಕ. ) ೪ ಸುವ ( ಉ. ) ೫ ತೋರಿ ( ಉ. ) ೬ ಖಂ ( ಕ, ಜ. ) ೭ ದೀಕ್ಷೆ ( ಖ. ) ೮ ವೃತ್ತಿ ( ಅ, ಖ, ಚ, ಜ. ) ೯ ಪರಿ ( ಜ. ) ೧೦-೧೦ ಪತ್ರಾ । ವಳಿಯು ರಾಜಿಸೆ ( ಗ. ) ೧೧-೧೧ ಮೇಣ್ ಬಲು । ಗೆ ( ಚ. )

ನೂಲ ಸಂಕಲೆಗಡಿದು ಕನಕದ |
ಕೋಳವನು ಕಾಲಿಂಗೆ ಕೀಲಿಪ |
ಕಾಳು ಮತಿಯವನಂತೆ ಸತಿಸುತಕೂಟಭಯವೆಂದು ||
ಬಾಳಿಕೆಯನತಿಗಳೆದು ಮರಳಿಯು[೧] |
ಗೋ[೨]ಳುಮುಂಡೆಯ ಕೀರ್ತಿಗೋಸುಗ |
ಕೋಳುಹೋದನೆ ರಾಮನೆನುತಲ್ಲಮನು ಬೆಱಗಾದ || ೫ ||

ಚಿಕ್ಕ ಸಂಸಾರವನು ಸಡಿಲಿಸಿ |
ಹೊಕ್ಕನಲ್ಲಾ ಹಿರಿಯು[೩] ಸಂಸಾ |
ರಕ್ಕಕಟ ವಿಖ್ಯಾತಿಪೂಜಾಲಾಭದಿಚ್ಛೆಯಲಿ ||
ಸಿಕ್ಕಿಬಿದ್ದನು ಸಿದ್ಧರಾಮನು |
ಮಿಕ್ಕ ಭವಭಾರಿಗಳನಾದೊಡೆ |
ಮುಕ್ಕ[೪]ದೇ ವಿಧಿಯೆನುತಲಲ್ಲಮ ನೋಡಿ[೪] ಬೆಱಗಾದ || ೬ ||

ಒಡ್ಡ ರಾಮನಿದೇನು ಗೊಡವೆಯ |
ನೊಡ್ಡಿಕೊಂಡು ವೃಥಾ ಮನಸ್ಸನು |
ಗೊಡ್ಡ ಮಾಡಿಯೆ ಕೆಟ್ಟನೆನುತಲ್ಲಮನು ಕೇಳಿದೊಡೆ ||
ಗುಡ್ಡರೆಲ್ಲರು ಗುರುವನಾವನು |
ಖಡ್ಡತನದಲಿ ಜಱ[೫]ವನೆನುತವ |
ರಡ್ಡಹಾಯ್ದರು ತೊಡಗಿದರು ತೋಟಿಯನು ತಮತಮಗೆ || ೭ ||

ಅರರೆ ಘಡಘಡವಾರು ನಮ್ಮಯ |
ಗುರುವನೀಪರಿ ಜಱ[೬]ದು ಜಾಡಿಸಿ[೭] |
ಹರಿಹರಬ್ರಹ್ಮಾಮರೇಂದ್ರರು ನುಡಿಯಲಮ್ಮುವರೆ ||
ಮರುಳು ಮಾನವ ನೀನು ನುಡಿದರೆ |
ಸರಿಯೆ ಸಿದ್ಧಂಗೆನುತಲಿದ್ದರು |
ಕೆರಳಿ ಗುಡ್ಡಗಳೆಕ್ಕೆವಿಂಡುಗಳಲ್ಲಮಪ್ರಭುವ || ೮ ||

---

೧ ಬಳಿಕೀ ( ಇ, ಉ, ಋ, ಚ. ) ೨ ಬೋ ( ಅ, ಇ. ) ೩ ಹೇಯ ( ಕ. ) ೪-೪ ದಿಹುದೇ ವಿಧಿಯೆನುತಲಲ್ಲಮನು ( ಉ, ಗ. ) ೫ ನುಡಿ ( ಗ. ) ; ಬಯಿ ( ಉ. ) ೬ ನುಡಿವರು ( ಉ. ) ; ಜಾಳಿಸಿ ( ಅ. ) ; ಜಂಕಿಸಿ ( ಇ. )

ಅಕಟ ನಿಮ್ಮಯ ಗುರುವಿನಾಗಮ |
ಯುಕುತಿ ಪಾಷಾಣಕ್ಕೆ ಬಂದುದೆ |
ವಿಕಳ ಸಿದ್ಧನ ನಂಬಿ ಪಡೆದಿರಿ ಗುಡ್ಡ ಪದವಿಯನು ||
ಸಕಲ ಕಲ್ಲನು ಕಡಿದು ಕ[1]ಲ್ಲಿಗೆ |
ಶಿಖರ ದೇಗುಲವೆಂದು ಮಾಡಿಸಿ |
ಮಕರಿಸುವರವರೊಡ್ಡರಲ್ಲದೆ ಸಿದ್ಧರಲ್ಲೆಂದ || ೯ ||

ಎಕ್ಕೆವಿಂಡುಗಳೆಲ್ಲರಾಳ್ವನ |
ಮಿಕ್ಕು ಜಱಿವಲ್ಲಮನ ಮಾತಿಗೆ |
ಕೊಕ್ಕರಿಸಿ ಕೆಕ್ಕರಿಸಿ ಕೋಪಾಟೋಪವಾವರಿಸಿ ||
ತಕ್ಕಯಿಸಿ ಕೆಡಬಡಿವೆವೆನುತಡ |
ಹೊಕ್ಕು ವೈ[2]ದುಡುಕಿದರೆ ನಗುತಲಿ |
ಸಿಕ್ಕದವದಿರಿಗಲ್ಲಮಪ್ರಭುರಾಯನಿಂತೆಂದ || ೧೦ ||

ಸಲುವುದೈ ದಿಟವಿನ್ನು ನಿಮಗೆ |
ಕ್ಕಲನ ಹೆಸರದು ಹುಸಿಯೆ ಅಲ್ಲದೊ |
ಡುಲಿದು ಘೂರ್ಮಿಸಿ ಕೆರಳಿ ಮೊಗ್ಗರವಾಯ್ತುವದೇ ಬಱಿದೆ ||
ಬಲುಹು ನಿಮ್ಮಯ ಗುರುನಿರೂಪಣೆ |
ಕಲಹಕಾರಣವಾದಿರೆನುತಲಿ |
ಹಳಿದು ಹೀಹಾಳಿಸಿದನಲ್ಲಮಲಿಂಗನವರುಗಳ || ೧೧ ||

ನೋಡು ನೋಡಾ ಮತ್ತೆ ಮಾಣದೆ |
ನಾಡಮಾತನು ಕಲಿತು ನಮ್ಮೊಡ |
ನಾಡುತಿಹರೆ ದೊಠಾರತನದಲಿ ಮರುಳುತನದಿಂದೆ ||
ಬೇಡ ಬೇಡಿ[3]ನ್ನೆಮ್ಮ ಗುರುವನು |
ಖೋಡಿಗಳೆದರೆ ಕೆಡುವೆ ನೀನೆನು |
ತಾಡುತಿರ್ದರು ಬಱಿಯ ಬೀರವ[4] ಗುಡ್ಡರಲ್ಲಮಗೆ || ೧೨ ||

೧ ಲ್ಲಲಿ ( ಜ. ) ೨ ಕೈ ( ಗ. ) ೩ ಹೋಗಿ ( ಅ. ) ೪ ಬಿರುದನು ( ಉ, ಗ. ) ; ಬಿಂಕವ ( ಇ, ಮು. )

ಗುಡ್ಡಗಳು ನೀವಕಟ ನಮ್ಮಯ |
ಖಡ್ಡತನಕಾನು[೧]ವಿರೆ[೨] ನಿಮ್ಮಯ |
ದೊಡ್ಡನನು ಕರೆತನ್ನಿ ನೋಡುವೆವಾತನಳಬಳವ ||
ಒಡ್ಡರಾಮನ ರೀತಿಯನು ಭವ |
ದೊಡ್ಡವಣೆಯನು ಕಾಬೆವೆನುತಲಿ |
ಗುಡ್ಡರೆಲ್ಲರು ಕೆರಳುವಂತಿರೆ ನುಡಿದನಲ್ಲಮನು || ೧೩ ||

ಕೆಡಹಿಕೊಳ್ಳಿನ್ನೀತನಾಳ್ದನ |
ಜಡಿದು ನುಡಿದುಕ್ಕಲಿ[೩]ಸಿ ಹೋಹನೆ |
ಹಿಡಿದು ಕೋ ಕೋ ಎನುತ ಗುಡ್ಡ[೪]ಗಳಿಕ್ಕೆವಿಂಡುಗಳು[೪] ||
ಬಿಡದೆ ತೆಕ್ಕೆಯೊಳಲ್ಲಮನ ಬಯ |
ಲೊಡಲ ಬಂಧಿಸಲೆಂದು ಬಿಗಿಯಲು |
ಹಿಡಿಹಿಗಿಲ್ಲದೊಡವರು ಬೆಱಗಾಗಿರ್ದರದ ಕಂಡು || ೧೪ ||

ನೆರವಿ ತಾನಾ[೫]ಗಿಹನು ತತ್ತಡೆ |
ಹೊರಗೆ ಬಂದಿಹ ದೂರ ಹೋಗಿಹ |
ತೆರಳ ತಕ್ಕೆಗೆ ಸಿಕ್ಕನೀ ಪರಿ ಹಲವು ಹವಣಿ[೬]ಯುಲಿ ||
ಹುರುಳುಗೆಡಿಸಲು ಬಳಿಕ ಗುಡ್ಡರು |
ಕೆರಳಿ ಕೆಡೆಯೆನುತಲ್ಲಮನ ಮೇ |
ಲುರವಣಿಸಿ ಕವಿದಿಟ್ಟು ಕಱೆ[೭]ದರು ಕಲ್ಲಮಳೆಗಳನು || ೧೫ ||

ಪಿಂಡ[೭]ಭಾರದ[೮] ದೇಹಿಯನು ಮೈ |
ಗಂಡು ನೋಯಿಸಬಲ್ಲವಲ್ಲದೆ[೭] |
ಖಂಡಿಸುವುದೇ ಬಯಲದೇಹಿಯನಾವ[೯] ಕೈದುಗಳು ||
ಕಂಡುದುಂಟೇನಲ್ಲಮನ ನಿಡು |
ಗುಂಡುಗಳು ಮೈಗಾಣಿಸದೆ ಭೂ |
ಮಂಡಲದಲುರುಳಿದುವು ನೋಡುವರೆಲ್ಲ ಬೆಱಗಾಗೆ || ೧೬ ||

---

೧ ಣು (ಚ.) ೨ ಕಿನ್ನಾರೆ (ಇ.) ೩ ದಿಕ್ಕರಿ (ಇ.) ೪-೪ ರ ಹಿಂದು ಸಂದಣಿಸಿ (ಜ.) ೫ ಯೊಳು ತಾ (ಜ.) ೬ ವಹಣಿ (ಇ, ಒ, ಖ.) ೭-೭ ವಾಗದ ದೇಹಿಯನು ಕೈ । ಗುಂಡು ನೋಯಿಸಲೆಂತು ಬಲ್ಲವು (ಗ.) ೮ ವಾಗಿಹ (ಒ.) ೯ ನವರ (ಇ.)

ನೊಂದು ಸೈರಿಸದವ ಕನಿಷ್ಠನು |
ನೊಂದು ಸೈರಿಸುವವನು ಮಧ್ಯಮ |
ನೊಂದೆನೆಂಬುದು ನೆನಹಿಗೆ[೧]ಲ್ಲದೊಡಾತನುತ್ತಮನು ||
ಎಂದು ಬಗೆವುತ ತನ್ನ ಮನದಲಿ |
ನೊಂದೆನಾದೊಡೆ ಮೂಜಗಂಗಳು |
ಬೆಂದು ಹೋಹವೆನುತ್ತ ನಸುನಗುತಿರ್ದನಲ್ಲಮನು || ೧೭ ||

ಆಳು ನೆರೆದುದು ಲಕ್ಕ ಸಂಖ್ಯೆಗೆ |
ಮೇಳವಿಸಿ ಕವಿದಿಡುತಲಲ್ಲಮ |
ಹೂಳಿಹೋದನು ಕವಣೆಗಲ್ಲಲಿ ಕೈದುಗಳಲೆನಲು ||
ಹೇಳಲೇನದ ಕಲ್ಲ ರಾಶಿಯ |
ಮೇಲೆ ನಿಂದನು ಮತ್ತೆ ತನ್ನಯ |
ಲೀಲೆಯಲಿ ನಿರ್ಲೇಪನಿರ್ದನು ನಗುತ ಪ್ರಭುರಾಯ || ೧೮ ||

ಮುನಿದು ಮುತ್ತಿಯೆ ಸೆಣಸಿ ಹೋರುವ |
ಜನಕೆ ಪ್ರತ್ಯೇಕ[೩]ದಲಿ [೩]ಬಹು ರೂ |
ಪನೆ ವಿರಾಜಿಸಿ ಹಲಬರ[೩]ಲ್ಲಮರಾದರೆಂಬಂತೆ ||
ಎನಿತು ಜನ ಮಾಱಾಂ[೪]ತು ನಿಂದೊಡೆ |
ಯು[೪]ನಿತು ರೂಪಿನಲಾಂತು ನಿಂದನು |
ಘನಮಹಿಮನೆಮ್ಮಲ್ಲಮಪ್ರಭುಲಿಂಗ ಲೀಲೆಯಲಿ || ೧೯ ||

ಛಾಯೆಯೊಳು ಕಾಳಗವ ಮಾಡುವ |
ಮಾಯವಶರುಗಳಂತೆ ಕಡೆತನ |
ಕಾಯುಸವೆ ಕೈಗ[೫]ಟ್ಟ ಹೋಯಿತು[೬] ಕದನಮುಖದೊಳಗೆ ||
ಕಾಯವಿರಹಿತನಲ್ಲಮಪ್ರಭು |
ರಾಯನಾರೆಂದಱಿಯಲಱಿಯದೆ |
ಸಾಯುಸವನಾಳಿ[೭]ದರು ಗುಡ್ಡಗಳಿಕ್ಕೆವಿಂಡುಗಳು || ೨೦ ||

---

೧ ಮನದೊಳಿ ( ಉ. ) ೨ ತ್ರೈಕ್ಷ ( ಇ, ಗ, ಜ. ) ೩-೩ ಮೂರ್ತಿಯ|ನನುಕರಿಸಿ ಪಲಬರುಗಳ ( ಗ. ) ೪-೪ ತರೆಯು ತಾ|ನ ( ಉ. ) ; ತೊಡಂ ತಾ|ನ ( ಗ. ) ೫ ತ ( ಜ, ಮು. ) ; ಕಯ್ಯ ( ಅ, ಒ, ಕ, ಖ, ಗ, ಚ. ) ೬ ತಲ್ಲಡೆ ( ಉ. ) ೭ ತಾಳಿ ( ಉ. ) ; ಮಾಡಿ ( ಮು. )

ಪರಿಕಿಸಲು ಹರಿಯಾದೊಡಾಗಳೆ |
ತಿರುಹಿ ಚಕ್ರದೊಳಿಡುವ ಮೇಣ್ ಪುರ |
ಹರನು ಮುಳಿ[೧]ದೊಡೆ ಭಾಳನೇತ್ರದ[೨] ಕಿಡಿಯು ಕೆದರು[೩]ವನು ||
ಅರಿಗಳನು ನೋಯಿಸನು ತಾನೂ |
ಕೆ[೪]ರಳನೆನುತಲ್ಲಮನ ಮಹಿಮೆಗೆ |
[೫]ಶರಣು ಶರಣೆನುತಿರ್ದರೆಲ್ಲರು ಕೂಡೆ ನೋಟಕರು[೫] || ೨೧ ||

ನಮ್ಮ ಸಿದ್ಧನನೆಳಸಿದಾತಂ[೬] |
ಗೊಮ್ಮೆ ಶಿಕ್ಷೆಯ ಮಾಡದನ್ನಕ |
ನಮ್ಮ ಕೋಪಾಟೋಪ ನಿಲ್ಲದೆನುತ್ತ ಪರಿತಂದು ||
ಸು[೭]ಮ್ಮನೆಯ್ತಂದೊಬ್ಬ ಜಂಗಮ |
ಹೆಮ್ಮೆಗೆಡಿಸಿಯೆ ಹಳಿ[೮]ದು ನುಡಿದನು |
ನಿಮ್ಮನೆಂದಱುಹಿದರು ಹದನನು[೯] ಸಿದ್ಧರಾಮಂಗೆ || ೨೨ ||

ಆರು ನಮ್ಮನು ಜಱಿದವರು ಜಂ |
ಭಾರಿಯೋ ದನುಜಾರಿಯೋ ಕಾ |
ಮಾರಿಯೋ ತೋಱ[೧೦]ವನ ಹೆಡತಲೆಗುಗಿವೆ ನಾಲಗೆಯ ||
ಬೇರು ಸಹಿತವೆ ಕೀಳುವೆನು ಕ್ರೈ |
ವಾರವೇಕೆನುತೆದ್ದು ಬಂದನು |
ಧೀರತನವಲಿ ಸಿದ್ಧರಾಮನು ಗಜಱಿ ಗರ್ಜಿಸುತ || ೨೩ ||

ಲೇಸು ಲೇಸೈ ಸಿದ್ಧರಾಮನ |
ವಾಸಿ ಸಂಸಾರಿಗಳಿಗಿಂದಲಿ |
ಸಾಸಿರಕೆ ವೆಗ್ಗಳಿಸಿತಲ್ಲಾ ಸುಡು ಯತಿತ್ವವನು ||
ಈಸು ಕೋಪಾಟೋಪ ರೋಷಾ |
ವೇಶ[೧೧]ವೇತಕೆ ಯೋಗಿಯಾದ ನಿ |
ರಾಸೆವಂತಂಗೆನುತಲಿದ್ದನು ನಗುತ ಪ್ರಭುರಾಯ || ೨೪ ||

೧ ನಿ ( ಒ. ) ೨ ಹಣೆಯ ಕಣ್ಣಲಿ ( ಇ. ) ೩ ತೋಱು ( ಒ. ) ; ಕಾಱು ( ಕ, ಚ. ) ೪ ಹಿಂದಕೆ|ತೆ ( ಅ. ) ೫-೫ ಶರಣೆನುತ ಕೈಮುಗಿವುತಿರ್ದರು ಕೂಡೆ ತಮತಮಗೆ ( ಅ. ) ೬ ಹಳಿದು ನುಡಿವಂ ( ಉ. ) ; ಸೆಣಿಸಿದಾತಂ ( ಒ. ) ೭ ಗ ( ಉ. ) ೮ ಜರಿ ( ಒ. ) ; ಮುಳಿ ( ಋ. ) ೯ ಹಲಬರು ( ಗ. ) ; ಝುಗಡವ ( ಜ. ) ೧೦ ಹೇಳ ( ಉ. ) ೧೧ ವಿರಲಿಕೆ|ವೇಷ ( ಗ. )

ಆವ ಪರಿಯಿಂದಾದೊಡೆಯು ಸುಖ |
ಸೇವೆಯನು[1] ಸೂಚಿ[2]ಸುವನಲ್ಲದೆ |
ಸಾವು ಹುಟ್ಟುವ ಕರ್ಮಬಂಧದ ನುಡಿ[3]ಯನುಸುರು[4]ವನೆ ||
ದೇವನಲ್ಲಮ ನುಡಿದು ತೋರಿದ |
ಭಾವ ಸೊಗಸದೆ ಕೋಪದುರಿಯಲಿ |
ತೀವಿ ಕಿಡಿಕಿಡಿವೋಗುತಿರ್ದನು ಸಿದ್ಧರಾಮಯ್ಯ || ೨೫ ||

ಸಾಕು ಸಾಕು ಮಹೇಂದ್ರಜಾಲವ |
ನೀ ಕಲಿತು ಬಂದೆಮ್ಮ ಮುಂದಿಯು |
[5]ಕಾಕುತನದಲಿ ಕಾಡಿದಾ ಮುಗ್ಗಿ[6]ನ್ನು[5] ನಮ್ಮೊಡನೆ ||
ನೂಕಲರಿಯದು ನಿನಗೆನುತಲು |
ದ್ರೇಕದಿಂದಲಿ ಸಿದ್ಧರಾಮನ |
ನೇಕ ವಹಿ[7]ಣಿಯಲಣಕವಾಡುತಲಿರ್ದನಲ್ಲಮನ || ೨೬ ||

ಭಾಪುರೇ ಮರ್ಝು ಪೂತು ನೀನಹು |
ದೀ ಪರಿಯಲಿರಬೇಕು ಮನದಾ |
ಳಾಪದಂಗವಣೆಗಳು ಮಿಗೆ ಮಾಯಾ ಪ್ರಪಂಚಿನಲಿ ||
ಕೋಪ ನಿಮ್ಮಯ ಸಾಂಪ್ರದಾಯಕ |
ಳಾಪದಲಿ ಶಾಶ್ವತವಲಾ ನಿ |
ರ್ಲೇಪಗೀ ಪರಿಯುಚಿತವೇ ರಾಮಯ್ಯ ಕೇಳೆಂದ || ೨೭ ||

ಕೆಣಕದಿರು ನೀ ಸಾಂಪ್ರದಾಯಗ |
ಳೆಣಿಕೆ ನಿನಗೇಕಕಟ[8] ಲೋಕವ |
ನಣಕವಾಡಿಯೆ ಹೋಹ[9]ಯಲ್ಲದೆ ಯೋಗಮಾರ್ಗದಲಿ ||
ಸೆಣಸದಿರು ನೀನಾಚೆಯೀಚೆಯ[10] |
ಬಣಗರಂಗದದಲೆನ್ನನೆಂದರೆ |
ಹಣೆಯ ಕಣ್ಣಿನ ಕಿಡಿಯ[11] ಕೆದ[12]ರುವೆನೆಂದ ರಾಮಯ್ಯ || ೨೮ ||

೧ ವಸೆಯ ( ಉ, ಗ. ) ೨ ಜೋಡಿ ( ಉ. ) ೩ ಬಗೆ ( ಜ. ) ೪ ಸೆಣಸು ( ಚ. ) ೫-೫ ನೂಕಿ ಗರ್ಜಿಸುತಿರ್ದೆಯೆಮುಗಿನ್ನೀಗ ( ಜ. ) ೬ ಕಾಡದಿರು ಹೋಗಿ ( ಅ. ) ೭ ಹವ ( ಅ, ಇ. ) ೮ ಕೆನುತ ( ಉ. ) ೯ ದಣಿವೆ ( ಜ. ) ೧೦ ನಿನಿತು ಯುದ್ಧಕೆ ( ಜ. ) ೧೧ ಕಿಚ್ಚ ( ಅ, ಉ, ಜ. ) ೧೨ ತೋ ( ಒ, ಮು. )

ಚಾಗು ಚಾಗುರೆ ನೊಸಲಗಣ್ಣಿನ |
ಬೇಗೆಯಲಿ ಮುನ್ನೆನಿತ ಕೊಂದೆಯೊ |
ಯೋಗಿಯಹುದೈ ನೀನು ಹಿಂಸಾಧರ್ಮಕರ್ಮದ[೧]ಲಿ ||
ರಾಗದಿಂದುರಿದೇಳುತಿಹ ಭವ |
ರೋಗಿ ನಿನ್ನಲಿ ಮಾತನಾಡಲಿ |
ಕಾಗದೆಮಗೆನುತಿರ್ದನಲ್ಲಮ ಸಿದ್ಧರಾಮಂಗೆ || ೨೯ ||

ಜಡಿದು ನುಡಿವುದನೀತನಾಡೊಡೆ |
ಬಿಡನೆನುತ್ತಲಿ ಸಿದ್ಧರಾಮನು |
ಘುಡಿಘುಡಿಸಿ ಘೂರ್ಮಿಸುತ ಕೋಪಿಸಿ ನೊಸಲ ಕಣ್ದೆಱೆಯೆ ||
ಸಿಡಿಲುಗಿಡಿಗಳು ಸೂಸೆಯಲ್ಲಮ |
ನಡಿಗಳೆಡೆಯನು ಹೊದ್ದ[೨]ಲಮ್ಮದೆ |
ಸಿಡಿದು ಸೀಕರಿಗರಿ[೩]ಸುತಿರ್ದವು ಸಕಲ ಜೀವರನು || ೩೦ ||

ಮಾಡಿಕೊಂಡನು ಪರಮಪುರುಷನ |
ಕೂಡೆ ತೋಟಿಯ ಸಿದ್ಧರಾಮನು |
ಮೂಢತನದಲಿ ಹವಣನಱಿಯದೆ ಶಿವ ಮಹಾದೇವ ||
ನೋಡೆ ಬಡವನ ಕೋಪ ದವಡೆಗೆ |
ಕೇಡು ತಹವೊಲ್ ತನ್ನ ಪುರವನೆ |
ಕೂಡೆ ಸುಡುತಿದೆ ಕಿಚ್ಚುಗಣ್ಣಿಂದೊದಱಿತಖಿಳ ಜನ || ೩೧ ||

ಕಡಲನತಿ ಮಥನವನು ಮಾಡಲು |
ಸುಡುತ ಬಹ ಹಾಲಾಹಲಾಗ್ನಿಯ |
ಕಡುಹ ನಿಲಿಸಿ ಜಗಂಗಳನು ರಕ್ಷಿಸಿದ ಶಿವನಂತೆ ||
ತೊಡೆದನಾಗಳೆ ನೊಸಲಕಣ್ಣಿನ |
ಕಿಡಿಯನೆಲ್ಲರನುಳುಹಿದನು ತ |
ನ್ನಡಿಯ ಕೃಪೆಯಿಂದಲ್ಲಮಪ್ರಭುರಾಯ ನಿಮಿಷದಲಿ || ೩೨ ||

೧ ನೀತಿಯ ( ಜ. ) ೨ ಹೊಂದ ( ಗ, ಜ. ) ೩ ಗೋಳಿ ( ಜ. )

ಕಲ್ಲ ತಾಗಿದ ನಿಟ್ಟೆ[೧]ಯಂದದ |
ಲೆಲ್ಲ ಮುರಿದುವು ನೊಸಲಗಣ್ಣಿನ |
ದಳ್ಳುರಿಯ ನಾಲಗೆಗಳೊಯ್ಯನೆ ಹುಟ್ಟಿದೆಡೆಗಾಗಿ ||
ಬಳ್ಳಿ ಮರನನು ಹಬ್ಬುವಂದದಿ |
ನಿಲ್ಲದಡರಲು ಬಳಿಕ ತಾ ತ |
ನ್ನಲ್ಲಿ ಸಿಡಿಮಿಡಿವೋಗುತಿರ್ದನು ಸಿದ್ಧರಾಮಯ್ಯ || ೩೩ ||

ನೊಸಲಗಣ್ಣನು ತೋರುವವರಿಗೆ[೨] |
ವಿಷಮತರದಂಗಾಲ ಕಣ್ಣನು |
ಪಸರಿಸುವರುಂಟಕಟ ಮರುಳೇ[೩] ನಿನ್ನ ಹವಣೇ[೪]ನು ||
ಸಸಿನೆ ಮಾಡಿನ್ನಾದೊಡೆಯು ಗ |
ರ್ವಜಿಸುವ ಬುದ್ಧಿಯನೆನುತ ಮಿಗೆ ಬೋ |
ಧಿಸಿದನೊಲವಿಂದಲ್ಲಮಪ್ರಭು ಸಿದ್ಧರಾಮಂಗೆ || ೩೪ ||

ನಾಚಿದುದು ಮನ ನೊಸಲ ಕಣ್ಣಿಗೆ |
ಚಾಚಿದುವು ಬಳಿಕೆವೆಯ ಕದಗಳು |
ಸೂಚಿಸಿತು ಪರಿಪಾಕಭಾವನೆ ಚಿತ್ತವೃತ್ತಿಯುಲಿ ||
ಆಚರಿಸಿತನುತಾಪ ಗರ್ವಕೆ |
ಮೋಚನವೆ[೫] ಮುಖವಾಯ್ತು ಯೋಗದ |
ಶೌಚತೆಗೆ[೬] [೭]ಬೆರೂಱುತಿರ್ದುದು ಸಿದ್ಧರಾಮನಲಿ[೭] || ೩೫ ||

ತ್ರಿಪುರಸಂಹರನೀತನೆಂಬೊಡೆ |
ಕುಪಿತನಾತನು ಶಾಂತನೀತನು |
ಚಪಳಕಾಮವಿರೋಧಿಯಾದೊಡೆಯರ್ಧನಾರೀಶ ||
ಉಪಮಿಸುವೊಡೀ ಮಹಿಮನಾದೊಡೆ |
ವಿಪುಳತರ ನಿರ್ಲೇಪನೀತನು[೮] |
ಕಪಿಲಿಸಿದ್ಧಮಲೇಶನಹನೆನುತಿರ್ದ ರಾಮಯ್ಯ || ೩೬ ||

---

೧ ಮಿಂಟೆ ( ಅ, ಒ, ಕ. ) ೨ ವರಿಗತಿ ( ಗ. ) ೩ ಟರೆಮರುಳೆ ಸೀ ( ಉ. ) ೪ ಪಾಡೇ ( ಅ, ಚ. )
೫ ವಿ| ಮೋಚನಕೆ ( ಗ. ) ೬ ಯಾಚತೆಗೆ ( ಜ. ) ೭-೭ ಬೆರಗಾಗುತಿರ್ದನು ಸಿದ್ಧರಾಮಯ್ಯ ( ಇ. )
೮ ನೆ ( ಅ, ಉ, ಒ, ಖ, ಚ. )

ಕುಱಿಗಳಾದೊಡೆ ಸಲಹಿದೊಡೆಯನ |
ನಱಿದು ಬೆಂಬಿಡವರರೆ ಶಿವ ಶಿವ |
ಕುಱಿಗಳಿಂದಾ ಕ[೧]ಷ್ಟವಲ್ಲಾ ಎನ್ನ ರಕ್ಷಿಸುವ ||
ಎಱೆಯನ್ನೈತರಲೆನ್ನ ಮದ[೨]ದಲಿ |
ಮಱೆದೆನೆನುತೊಳಗೊಳಗೆ ಮನದಲಿ |
ಮಱುಗುತಲ್ಲಮನೆಡೆಗೆ ಬಂದನು ಸಿದ್ಧರಾಮಯ್ಯ || ೩೭ ||

ತ್ರಾಹಿ ಕರುಣಾಕರನೆ ಸರ್ವ |
ದ್ರೋಹವೆನ್ನದು ನಿನ್ನನಱಿಯದೆ |
ಮೋಹ ಮಾಯಾಡಂಬರಕೆ ಮರುಳಾದೆ[೩]ನಿನ್ನೆಬರ ||
ಊಹೆಗೇಡುಗನವಗುಣದ ಸಂ |
ದೋಹವನು ನೀ ಮಱೆದು ಕರುಣಿಸ |
ಬೇಹುದೆನುತಾ ರಾಮನಲ್ಲಮನಂಘ್ರಿಗೆಱಗಿದನು || ೩೮ ||

ಮನದೊಳಗೆ ನಸು ನಗುತಲೀ ಮೂ |
ರ್ಖನ ಗುಣಂಗಳನೀನ ನೋಡುವೆ |
ನೆನುತಲಲ್ಲಮು ಸರ್ವಜೀವದಯಾ[೪]ಪ್ರವಾಯಕನು ||
ತನುಜ ಸಾಕೇಳೇಳು ಖಾತಿಯ |
ನೆನಹು ನಮ್ಮೊಳಗಿಲ್ಲವೆನುತಲಿ |
ವಿನಯದಿಂದೆತ್ತಿದನು ರಾಮನ ವಿಮಲ ಮಸ್ತಕವ || ೩೯ ||

ದೇವ ನೀನೀ ಪರಿಯ ಜಂಗಮ |
ಭಾವ ಭಣಿತೆಯ ಧರಿಸಿ ಬಂದರೆ |
ಗಾವಿಲರು ನಾವೆತ್ತ ಬಲ್ಲೆವು ನಿಮ್ಮ ಮಹಿಮೆಯನು ||
ಜಾವಳಿಗ ನೀನೆಂದು ಬಗೆದಕ |
ಟಾವು ಬಳಲಿದೆವಿನ್ನು ಕರುಣಿಸಿ |
ಕಾವುದೆನುತ[೫]ಲಿ ಸಿದ್ಧರಾಮನು ನುಡಿದನಲ್ಲಮಗೆ[೫] || ೪೦ ||

೧ ದ ಕನಿ ( ಇ. ) ೨ ನ ( ಅ, . ) ೩ ಸಿಕ್ಕಿರ್ದ ( ಇ. ) ೪ ಸುಖ ( ಗ. ) ೫-೫ ಲ್ಲಮಗೆ ಬಿನ್ನೈಸಿದನು ರಾಮಯ್ಯ ( ಅ. ); ಲಿ ಮತ್ತೆ ಮೆಯ್ಯಿಕ್ಕಿದನು ರಾಮಯ್ಯ ( ಗ. ) ೪ ನುಚಿತವನು ( ಒ. )

ಹರಸಿಕೊಳ್ಳರೆ ಕೆಲರು ಸಚರಾ |
ಚರರಿಗೊಳ್ಳಿತ ಪಕ್ಷಪಾತದಿ |
ಹರಸಿ ಗೋ ಬ್ರಾಹ್ಮರಿಗೆ ಶಾಂತಿಗಳಾಗಲೆಂಬಂತೆ[೧] ||
ಹಿರಿಯರನು ಸತ್ಕರಿಸಿ ಮಿಕ್ಕಾ |
ದರನು ಧಿಕ್ಕರಿಸುವದು ಯೋಗೀ |
ಶ್ವರರಿಗನುಚಿತವೆಂಬರೈ ರಾಮಯ್ಯ ಕೇಳೆಂದ || ೪೧ ||

ಚಿತ್ತವಿಸು ಗುರುರಾಯ ನಮ್ಮಯ |
ಚಿತ್ತದೊಳಗಿನ್ನೂ ವಿಚಾರಿಸ |
ಲುಯುತ್ತಮಾಧಮ ಪಕ್ಷಪಾತ ಭ್ರಮೆಗಳಿಡಿದಿಹವು ||
ಎತ್ತ ಬಲ್ಲೆವು ಸರ್ವರನು ಸಮ |
ಚಿತ್ತದಲಿ ಕಾಬಱಿವ [೨]ನೀನೊಲಿ |
ದಿತ್ತೊಡೆಮಗಿನ್ನಾದೊಡಾಗಲಿ ದೇವ ಕೇ[೨]ಳೆಂದ || ೪೨ ||

ಆಗಲದಕೇನೊಂದು ಬಾ[೩]ರಿಯ |
ಲಾಗುವುದೆ ಸಮಬುದ್ಧಿ[೩] ಮೆಲ್ಲನೆ |
ಲಾಗಿಸುವುದಿರುತಿರುತಲೀ ಪರಿ[೪] ಚಿತ್ತಶುದ್ಧಿ[೫]ಯಲಿ ||
ಯೋಗಮಾರ್ಗವನಱಿ[೬]ವೊಡಖಿಳ ವಿ |
ಯೋಗಿಯಾದೊಡೆ ಬಳಿಕಲಾತಗೆ |
ಬೇಗ ಸಮತೆ ಸಮಾಧಿಯಹುದೈ ರಾಮ ಕೇಳೆಂದ || ೪೩ ||

ಎನಗೆ ನಿಮ್ಮಯ [೭]ದರ್ಶನ ಸ್ಪ |
ರ್ಶನವೆ ಸರ್ವಸಮಾಧಿಯೆನಗಾ[೮] |
ಮನುಮುನಿತ್ರಿದಶರುಗಳಿದಿರೇ[೯] ದೇವ ಕೇಳಿನ್ನು[೭] ||
ಮನವೊಲಿದು ನೀವಿನ್ನು ಮಲಿಕಾ |
ರ್ಜುನನ ನೋಡಲು ಬಿಜಯ ಮಾಡುವು |
ದೆನುತ ತನ್ನಯ ಮಠಕೆ ಕರೆದನು ರಾಮನಲ್ಲಮನ || ೪೪ ||

---

೧ ದೆಂಬ ( ಇ. ) ೨-೨ ನಮಗೆ | ನ್ನಿತ್ತರಾಗಲಿ ನೀನೊಲಿದು ಪ್ರಭುರಾಯ ಹೇ ( ಜ. ) ೩-೩ ರಿಂ| ಗಾಗಲಹುದೇ ಸಮತೆ ( ಇ. ) ೪ ಬಲುಹಿನ ( ಇ. ) ೫ ವೃತ್ತಿ ( ಗ. ) ೬ ದು ಸಕ ( ಇ. ) ೭-೭ ಪರುಶನವು ನೆ | ಟ್ಟನೆ ದೊರಕಿದುದರಿಂದ ನಿರ್ಮಲ | ಘನ ಸಮಾಧಿ ಸಮಸ್ತ ದೊರಕುವುದಾವ ಸೋಜಿಗವು ( ಗ. ) ೮ ಳೈಸೆ ( ಇ. ) ೯ ಯೆಂಬುದು ( ಇ. ) ೧೦ ನೀಂದ್ರಾದಿಗಳು ಸರಿಯೇ ( ಇ. )

ಬಿಡು ಮರುಳೆ ಮನೆಯೇನು ಮಠವೇ |
ನಡವಿಯೇನೂರೇನು ಬೇಱೊಂ |
ದೆಡೆಗಳುಂಟೇ ಸರ್ವಗತನಾದಾ ಮಹಾತ್ಮಂಗೆ ||
[1]ನುಡಿದುದೇ ಶಿವತತ್ತ್ವದಾ[2]ಗಮ |
ನಡೆದುದೇ ಶಿವಮಾರ್ಗ[1] ಶರಣರ |
ಬೆಡಗು[3] ತಾನೀ ಪರಿ ಕಣಾ ರಾಮಯ್ಯ ಕೇಳೆಂದ || ೪೫ ||

ಅಹುದು ನಿಮ್ಮಯ ಚಿತ್ತ ಬಂದ |
ಲ್ಲಿಹುದು ನಾವದನೇನ ಬಲ್ಲೆವು |
ಸಹಜವಾದೊಡೆ ಸರ್ವತೋಮುಖ ಶರಣರನುಮತವ[4] ||
ವಿಹಿತವೆಮಗಿನ್ನೇನು ಗತಿ ಘನ |
ಮಹಿಮ ಕರುಣಿಸೆನುತ್ತ ಕಿಂಕಿಲ |
ಸಹಿತ ಬಿನ್ನಹ ಮಾಡುತಿರ್ದನು ರಾಮನಲ್ಲಮಗೆ || ೪೬ ||

ಚಿತ್ತದಲಿ ಪರಿಪಾಕವಾದ ಮ |
ಹೋತ್ತಮಂಗಲ್ಲದೆ ನಿರರ್ಥಕೆ |
ಬಿತ್ತಲಾಗದು ತತ್ತ್ವಬೀಜವ ಬದ್ಧ ಭವಿಗಳಿಗೆ[5] ||
ಹೊತ್ತು ಹೋಗದೆ ಗೋಷ್ಠಿಮಾಡುವ |
ಕೃತ್ಯವಲ್ಲಿದು ಸಕಲಸಂಗನಿ |
ವೃತ್ತನಾದಂಗಲ್ಲದಾಗದು ರಾಮ ಕೇಳೆಂದ || ೪೭ ||

ಹಲವು ಬಿನ್ನಹಕಂಜುವೆನು ಕೋ |
ಟಲೆಗೆ ನಾಸಿನ್ನಾಱೆ ಕರ್ಮದ |
ಕಳವಳಕೆ ಬೇಸತ್ತೆ ಖಂ[6]ಡಜ್ಞಾನಮಾರ್ಗದಲಿ ||
ಹೊಲಬುಗೆಟ್ಟೆನು ನಿನ್ನ ಪಾದದ |
ನೆಲೆಯ ಕಾಣದೆ[7] ದೇವ ನೀನೇ |
ಸಲಹೆನುತಲಲ್ಲಮಗೆ ಮೆಯ್ಯಿಕ್ಕಿದನು ರಾಮಯ್ಯ || ೪೮ ||

---

೧-೧ ನಡೆದುದೇ ಶಿವಮಾರ್ಗವಾತನು | ನುಡಿದುದೇ ಶಿವಮಂತ್ರ ( ಜ. ) ೨ ವಾ ( ಕ, ಗ. ) ೩ ತೊಡಕು ( ಮ. ) ೪ ರಾದ ಶರಣರನು ( ಜ. ) ೫ ಳಲಿ ( ಉ, ಕ. ) ೬ ಕಂ ( ಇ, ಉ, ಒ. ) ೭ ಣಿಸಿ ( ಉ. ) ; ಣೆನು ( ಚ. )

ಮತ್ತೆ ಕರುಣಿಸಿ ಹೆಱೆನೊಸಲ ಹಿಡಿ |
ದೆತ್ತಿ ಬಾರೆಂದೆನುತ ತನ್ನಯ |
ಹತ್ತಿರಕೆ ಕರೆದಾತನನು ಕೈವಿಡಿದು ಕುಳ್ಳಿರಿಸಿ ||
ಹೆತ್ತ ತಂದೆಯುದಾವ ಪರಿಯುಲಿ |
ಪುತ್ರನನು ಬೋಳೈಸುವಂತಿರೆ |
ನಿತ್ಯನಲ್ಲಮ ಸಿದ್ಧರಾಮುನನೊಲಿದು ಮನ್ನಿಸಿದ || ೪೯ ||

ಲಕ್ಷಿಸುವೊಡೆಂಬತ್ತುನಾಲುಕು |
ಲಕ್ಷ ದೇಹಿಗಳೊಳಗೆ ಮಾನವ |
ಪಕ್ಷದೇಹಿಯೆ ಸಕಲ ಕರ್ಮಕೆ ಕರ್ತನಾಗಿಹನು ||
ಮೋಕ್ಷಸಾಧಕರಾದವರುಗಳು |
ಪೇಕ್ಷಿಸದೆ ಸರ್ವೇಂದ್ರಿಯಂಗಳ |
ಶಿಕ್ಷಿಸಲು ಸುಖಿಯಪ್ಪರೈ ರಾಮಯ್ಯ ಕೇಳೆಂದ || ೫೦ ||

ಇಂದ್ರಿಯಂಗಳನಾವ ಪರಿಯುಲಿ |
ಬಂಧಿಸುವ ಪರಿ[೧] ಮೊಲನ ಕಂಡೊಡೆ |
ನಿಂದುದುಂಟೇ ನಾಯಿಗಳು ದಿಟವಾ ಪ್ರಕಾರದಲಿ ||
ಮುಂದುವರಿವವು ವಿಷಯದಿಚ್ಛೆಗೆ |
ಕೊಂದು ಕೂಗುವವತಿ ಮಹಾಬಳ |
ದಿಂದ್ರಿಯಕೆ ನಾನೇಗುವೆನು ಗುರುರಾಯ ಹೇಳೆಂದ || ೫೧ ||

ಊಹಿಸುವೊಡಿಂದ್ರಿಯಕೆ ಮನವೇ |
ಬೇಹ ನಾಯಕನದಱ ಗಮಕದ |
ಗಾಹು ಶಬ್ದ ಸ್ಪರ್ಶ ರೂಪು ರಸ ಪ್ರಗಂಧದಲಿ ||
ಮೋಹದಂತಿರೆ ಸೆಳೆದು ಸಮತೆಯ |
ಸಾಹಸದಲಿರಲಿಂದ್ರಿಯಂಗಳ |
ಕಾಹುರಂಗಳು ಕೆಡುವವೈ ರಾಮಯ್ಯ ಕೇಳೆಂದ || ೫೨ ||

---

೧ ತೆರ ( ಇ, ಜ, ) ; ಬಗೆ ( ಉ. )

ಮನದ ಹರಿವರಿ ಹೊನ್ನ ಮಣ್ಣಿನ |
ವನಿತೆಯರ ಮೇಲಿರದೆ ಸದ್ವ |
ರ್ತನೆಯಲಿರ್ದೊಡೆ ದೋಷವೇನದಱಿಂದೆ ಯತಿಯಾಗಿ ||
ಜನಕೆ ಬೇಡಿದನಿತ್ತು ಸುಖದಲಿ |
ಘನದ ಪುಣ್ಯವನಾರ್ಜಿಸಿರ್ದೊಡೆ |
ತನಗೆ ನಿಜಪದ[೧]ವಾಗದೇ ಗುರುರಾಯ ಹೇಳೆಂದ || ೫೩ ||

ಖ್ಯಾತಿ ಪೂಜಾ ಲಾಭದಾಶಾ[೨] |
ಪ್ರೀತಿಯಿಂದಲಿ ದಾನ ಧರ್ಮ |
ವ್ರಾತವನು ಮಾಡಿದರೆ ಬಿತ್ತಿದ ಬೆಳೆಯನುಂಬಂತೆ ||
ಆತು ಬಂದ ಸಮಸ್ತ ಭೋಗವ |
ನೋತು ಭೋಗಿಸುತಿಪ್ಪನಲ್ಲದೆ |
ಮಾತು ಮಾತಿಗೆ ನಿತ್ಯವು[೩]ಂಟೇ ರಾಮ ಕೇಳೆಂದ || ೫೪ ||

ತೊಱೆದು ಸತಿಸುತಮಾತೆಪಿತರುಗ |
ಳೆಱಕವನು ಯತಿಯಾಗಿ ಸುಖದಲಿ |
ಕೆಱೆಗಳಾರವೆ[೪] ಬಾವಿ ದೇಗುಲಗಳನು ರಚಿಸಿದರೆ ||
ಅಱಿಯಬಾರದು ಕಂಡ ಬಳಿಕಿ |
ನ್ನಱಿವ ಪರಿಯೆಂತಯ್ಯ ನಿಜವನು |
ಬಱಿದೆ ಬಣ್ಣಿಸ ಬೇಡವೈ ಗುರುರಾಯ ಹೇಳೆಂದ || ೫೫ ||

ಕಾರಣಿಕನೇ ಮನಸು ಮನಸೇ[೫] |
[೬]ಬೇರು ಬಿಟ್ಟ[೬]ಹುದನ್ಯ ಕರ್ಮ[೭]ದ |
ಕಾರಿಯಂಗಳಲಂತರಂಗವೆ ಹಾಳು ಬಿದ್ದಿಹುದು ||
ಆರು ಬಲ್ಲರು ಬಳಿಕ[೮] ಸುಖ[೯]ವನು |
ಮಾರಿ ಮುಂಡಿಸಿಯವರ ತನುವನು |
ಹೀರಿ ಹಿಪ್ಪೆಯ ಮಾಡದಿಹಳೇ[೧೦] ರಾಮ ಕೇಳೆಂದ || ೫೬ ||

೧ ಸುಖ ( ಅ, ಕ. ) ೨ ದಿಚ್ಛೆಯ ( ಇ, ಗ. ) ; ದಲಿ ಸಂ ( ಉ. ) ; ದಾ ಸಂ ( ಒ, ಖ. ) ೩ ತತ್ವವು ( ಉ. ) ; ಮುಕ್ತಿಯು ( ಖ, ಮ. ) ; ಯುಕ್ತಿಯು ( ಜ. ) ೪ ಳರವಟ ( ಇ. ) ೫ ಸಿಗೆ ( ಉ, ಗ, ಜ. ) ೬–೬ ಬೇರೆ ತೋರಿ ( ಉ. ) ೭ ಮಾರ್ಗ ( ಇ, ಮ. ) ೮ ನಿತ್ಯ ( ಉ. ) ೯ ಲಸು ( ಇ, ಮ. ) ೧೦ ಹುದೇ ( ಗ. )

ಆದೊಡಿನ್ನಾ ಸಾವು ತಪ್ಪುವ |
ಭೇದವಾವುದು ಮುಕ್ತಿಮಾರ್ಗದ |
ಹಾದಿಯಾವುದು ನಿತ್ಯನಹ ಪರಿಯಾವುದೈ ಗುರುವೆ ||
ವಾದವೇತಕೆ ನಮಗೆ ನಿಮ್ಮಯ |
ಪಾದ ಶರಣೆನಬಲ್ಲೆವಲ್ಲದೆ |
ಬೋಧಿಸುವುದೆನಗೆನುತಲಿರ್ದನು ಸಿದ್ಧರಾಮಯ್ಯ || ೫೭ ||

ಹಸನಮಾಡಿಯೆ ಹರಗಿ ಹೊಲನಲಿ[೧] |
ಕಸವ ಬಿತ್ತುವ ಮರುಳನಂತಿರೆ |
ಮಿಸುಗುವಂತರ್ಮಾರ್ಗದೋಜೆಗೆ ಬಂದ ತನುಮನವ ||
ಕಿಸುಕುಳದ ಬಹಿರಂಗದಿಚ್ಛೆಯ |
ಬೆಸನದಲಿ ಬೇಯಿಸದೆ ನಿನ್ನಯ |
ವಸವ ಮಾಡಲು ನೀನೆ ಸುಖಿಯೈ[೨] ರಾಮ ಕೇಳೆಂದ || ೫೮ ||

ಆವನಾದೊಡೆಯಂತರಂಗದ |
ಭಾವದಲಿ ಬಗೆಯುಗಲು ಬಹವೈ |
ಜೀವಸಂಗಳು ಮೊದಲಲವನೆಂತಾನು ತಪ್ಪಿದೊಡೆ ||
ದೇವತಾ ಭೋಗಾದಿಗಳು ಸಂ |
ಭಾವಿಸುವುವವಕೊಲಿ[೩]ದು ಸಿಕ್ಕದ |
ದೀವಸಿಯೆ ಸುಖಿಯಪ್ಪನೈ ರಾಮಯ್ಯ ಕೇಳೆಂದ || ೫೯ ||

ಶಕ್ರನಹನಜನಹನು ತತ್ತ್ವಡೆ |
ಚಕ್ರಿಯಹನನುಭಾವಭರ[೪]ದಲಿ |
ನಕ್ರಕೇತನವೈರಿಯಹ ಭಾಳಾಕ್ಷ ತಾನಹನು ||
ಈ ಕ್ರಮಂಗಳಿವೆಲ್ಲ ಮುಕ್ತಿಗೆ |
ವಕ್ರವಾಗಿಹವಿವನು ಬಗೆಯದ |
ವಿಕ್ರಮನೆ ಸುಖಿಯಪ್ಪನೈ ರಾಮಯ್ಯ ಕೇಳೆಂದ || ೬೦ ||

---

೧ ದಿಳೆಯೊಳು ( ಒ. ) ೨ ನಿತ್ಯನು ( ಇ, ಮು. ) ೩ ಸವಿ ( ಅ, ಉ, ಒ, ಕ, ಜ. ) ೪ ಮುಖ ( ಜ, ಮು. )

ಕೇ[೧]ಳು ಮಾಂಸದ ಸವಿಗೆ ಗಂಟಲ |
ಗಾಳವನು ಮಿಗೆ[೨] ಕಚ್ಚಿ ದುಷ್ಟನ |
ದಾಳಿಗೊಳಗಹ ಮಿನಿನಂತಿರೆ[೩] ವಿಷಯಸುಖಗಳಿಗೆ ||
ಲೋಲರಾದರು ಹರಿಹ[೪]ರಬ್ರ |
ಹ್ಮಾಳಿಗಳು ಮೊದಲಾಗಿ ಕಾಲನ |
[೫]ಕಾಲ ಬಾಯಿಗೆ[೬] ಬೀಳ್ವ[೫]ರೈ ರಾಮಯ್ಯ ಕೇಳೆಂದ || ೬೧ ||

ದೇಹಿಗೊಳಹೊಱಗೆಂಬ ನೆಲೆಯಲಿ |
ಬಾಹಿರಂಗವೆ ಸಕಲ ಮಾಯಾ |
ಮೋಹದಿಂದಿಹುದಂತರಂಗವೆ ನಿಃಪ್ರಪಂಚಿನಲಿ ||
ಬೇಹುದಾ[೭]ಗಿಹುದಂತು ಕಾರಣ |
ಸಾಹಸಿಗತನದಿಂದಲಾ ನಿ |
ರ್ಮೋಹದಲಿ ನಿಲುವವನೆ ನಿತ್ಯನು ರಾಮ ಕೇಳೆಂದ || ೬೨ ||

ಒಳಗು ಹೊಱಗೆಂಬೆರಡು ಬಟ್ಟೆಗ |
ಳೊಳಗೆ ನೀತಿ ಪ್ರೀತಿ ಮಾರ್ಗಗ |
ಳೊಳವು ತಾವೆರಡೆರಡು ಪಥದಲಿ ಕವಲುವಟ್ಟೆಗಳು ||
ತಿಳಿವೊಡವಱಿತೊಳು ಮಧ್ಯಮಾರ್ಗದ |
ಬಳಿವಿಡಿವ ಬಗೆಯುಳ್ಳೊಡಾತನೆ |
ನೆಲೆಯ ಕಾಂಬನು ನಿತ್ಯನಪ್ಪನು ರಾಮ ಕೇಳೆಂದ || ೬೩ ||

ವಿಷವ ಹೊಱಮೈಗಿಕ್ಕಿದೊಡೆ ವ |
ರ್ಜಿಸಲು ಬಹುದೆಂತಾದೊಡೆಯು ತ |
ದ್ವಿಷವನೊಳಮೈಗಿಕ್ಕಿದೊಡೆ ಬಳಿಕಾರು ಕಾವ[೮]ವರು ||
ವಿಷಯವಂತರ್ಮಾರ್ಗದಲಿ ಮೋ |
ಹಿಸಿದನಾದೊಡೆ ಬಳಿಕಲಾತನ |
ಘಸಣೆ ದುಃಖವನೀವುದೈ ರಾಮಯ್ಯ ಕೇಳೆಂದ || ೬೪ ||

---

೧ ಕೀ ( ಉ. ಕ. ) ೨ ನೆರೆ ( ಉ. ) ೩ ದದಿ ( ಜ. ) ೪ ಸು ( ಇ, ಉ, ಖ, ಗ, ಚ. ) ೫-೫ ನಾಲಿಗೆಯ ತುತ್ತಾದ ( ಗ. ) ೬ ಬಾಧೆಯ ( ಜ. ) ; ಬಾಯಲಿ ( ಉ, ಕ. ) ೭ ಬೇಹರಾ ( ಇ. ) ೮ ಕಳೆವ ( ಒ, ಕ. ) ; ಬದುಕು ( ಖ, ಜ. )

ಸಿದ್ಧಸಾಧಕರುಗಳನೇಕರು |
ಬಿದ್ದು ಸಿಕ್ಕಿದರಂತರಂಗದ |
ಹೊದ್ದಿಗೆಯಲಿದಿರಿಟ್ಟು ತೋಱುವ ಸುಖಮುಖಂಗಳಲಿ ||
ಬುದ್ಧಿವಂತನದಾವವನು ಹೊಗ |
ದಿರ್ದನಾದೊಡೆ ಬಳಿಕ ಬಗೆವೊಡೆ |
ಸಿದ್ಧನೆನಿಸುವನಾತನೈ ರಾಮಯ್ಯ ಕೇಳೆಂದ || ೬೫ ||

ಆನೆ ಕೆಸಱೊಳಗದ್ದಿ ಬಿದ್ದೊಡೆ |
ತಾನೆ ತನ್ನಯ ಭುಜಬಲದ ಸುಯಿ |
ದಾನದಿಂದೊಡನೇಳ್ವುದಲ್ಲದೆ ಯಾರು ನೆಗಹುವರು ||
ನೀನೆ ತಪ್ಪಿದ ನಿನ್ನ ನಿಜವನು |
ನೀನೆ ಸಾಧಿಸಿ ಕಂಡೆ[1]ಯಾದೊಡೆ |
ನೀನೆ ಸದ್ಯೋನ್ಮುಕ್ತನೈ ರಾಮಯ್ಯ ಕೇಳೆಂದ || ೬೬ ||

ರಾಯನಾರೋಗಿಸುವ ಸುಧೆಯನು |
ನಾಯಿಗಿಕ್ಕದೆ ನಿನ್ನ ಚಿತ್ತೋ |
ಪಾಯವನು ಕೇಡುಳ್ಳ ಕರ್ಮದ ಕೋಟಿಕೋಟಲೆಗೆ ||
ಬೀಯಮಾಡದೆಯಾತ್ಮಲಿಂಗದ |
ಬಾಯಲರ್ಪಿಸಲಾಪೆ[2]ಯಾದೊಡೆ |
ಮಾಯೆಯನು ನೀ ಗೆಲುವೆಯೈ ರಾಮಯ್ಯ ಕೇಳೆಂದ || ೬೭ ||

ಕರಣಗಳು ಕೈಗೂಡಿದಾಗಳೆ |
ಮರಣವನು ಗೆಲಕಲಿತು ಸಂತತ |
ಶರಣಪದದಲಿ ನಿಂದು ಪರಮಾನಂದ ಸುಖದಿಂದೆ ||
ಪರಿಣಮಿಸಿ ನಿರ್ಲೇಪನಾಗಿರು |
ತಿರಲು ಬಲ್ಲೊಡೆ ಬಳಿಕ ನೀನೇ |
ಪರಮನಪ್ಪುದು ತಪ್ಪದೈ ರಾಮಯ್ಯ ಕೇಳೆಂದ || ೬೮ ||

೧ ಕೊಂಡೆ ( ಉ. ) ; ತಿಳಿದೆ ( ಇ. ) ೨ ಬಲ್ಲೆ ( ಜ. )

ಹಲವು ಮುಖದಲಿ ಹರಿವ ಮನವನು[1] |
ನಿಲಿಸುವುದು ಲಿಂಗದಲಿ ಲಿಂಗದ |
ಹೊಲಬು ತಿಳಿದಾ ಪ್ರಾಣಲಿಂಗವನಱಿದು ಚೆನ್ನಾಗಿ ||
ತಿಳಿದು ತೃಪ್ತಿಸ್ಥಾನದಲಿ ನಿ |
ರ್ಮಳದ ಜ್ಯೋತಿರ್ಲಿಂಗವನು ನೆಲೆ |
ಗೊಳಿಸ ಕಲಿತೊಡೆ[2] ನೀನೆ ಸುಖಿಯೈ[3] ರಾಮ ಕೇಳೆಂದ || ೧೯ ||

ಕಾಗುದುರೆಗತ್ಯಂತ ಶಿಕ್ಷೆಗ |
ಳಾಗಬೇಕಲ್ಲದೆ ವಿಚಾರಿಸ |
ಲಾ ಗರುವ ಜಾತ್ಯಶ್ವಗೊಂದೇ ರಾಯ ರಾವುತನ ||
ರಾಘೆ ವಾಘೆಯೆ ಸಾಲದೇ ಸಬು |
ದಾಗಮಂಗಳ ಶಿಕ್ಷೆ ನಿನಗಿ |
ನ್ನೇಗುವುವು ಸಂಸ್ಕಾರಿ ನೀನೇ ರಾಮ ಕೇಳೆಂದ || ೨೦ ||

ಎಂದು ಬಳಿಕೇಕಾಂತದಲಿ ಮುದ |
ದಿಂದಲೊಪ್ಪುವ ಕಾಯಕರಣದ |
ಸಂದು ಸಂಬಂಧವನು ಸೂಚಿಸಿ ಜೀವಪರಮರನು ||
ಒಂದು ಮಾಡುವ ಶಕ್ತಿಭಕ್ತಿಯ |
ಹೊಂದಿಕೆಯನುಪದೇಶ ಮಾಡಿದ |
ನಂದು ಕರುಣದೊಳಲ್ಲಮಪ್ರಭು ಸಿದ್ಧರಾಮಂಗೆ || ೨೧ ||

ತಿಳಿದುದಾಗಳೆ ಬಳಿಕ ಹೃದಯ |
ಸ್ಥಳದ [4]ಮತಿಮಾನಸಸರೋವರ[4] |
ಹೊಳೆದುದಾಗಳೆ ಪರಮಹಂಸನ[5] ನೆಳಲು ನೆಲೆಗೊಂಡು ||
ತಳಿತ ನವ ಚಕ್ರಾಂಬುಜಂಗಳ |
ಕುಳವನಱಿದನು ಮನದ ಸಂಶಯ |
ವಳಿಯಿತಲ್ಲಮಲಿಂಗನೊಲಿದೊಡೆ[6] ಸಿದ್ಧರಾಮಂಗೆ || ೨೨ ||

---

೧ ಬುದ್ಧಿಯ ( ಉ, ಒ, ಕ, ಗ, ಚ. ) ೨ ಬಲ್ಲರೆ ( ಅ. ) ೩ ನಿತ್ಯನು ( ಇ. ) ೪–೪ ಮಳ ಸುಮನಸ್ಸರೋಜವು ( ಇ. ) ೫ ಪುರುಷನ ( ಇ. ) ೬ ಲವಿಂ ( ಇ. )

ಗುರುವೆ ನಿನ್ನಯ ಚಾರು ಚರಣಾಂ |
ಬುರುಹ ಮಕರಂದದಲಿ ಮಿಗೆ ಮಧು |
ಕರನ ಪರಿ ಸಾನಾದಕಾರಣವೆನ್ನ ಭವತಿಮಿರ ||
ಹರಿವ[1] ದಿವ್ಯಜ್ಞಾನದೀಪಾಂ |
ಕುರವನಱಿದೆನು ನಿನ್ನ ಕೃಪೆಯಲಿ |
ಪರಮಪಾವನನಾದೆನೈ ಪ್ರಭುರಾಯ ಕೇಳೆಂದ || ೭೩ ||

ಎತ್ತ ಹೋದುದೊ ಸಿದ್ಧರಾಮನ |
ಮತ್ತತನವಾ ಬಾಹಿರಂಗದ |
ಕೃತ್ಯದಲ್ಲಹ ಮೋಹ ಕೀರ್ತಿಯ ಮೇಲಣಭಿಲಾಷೆ ||
ಕಿತ್ತು ಕೆಡೆದುವು ಸಕಲ ಭಾವನೆ |
ಚಿತ್ತ ಚಿತ್ತುವನ[2]ಪ್ಪುತಿರ್ದುದು |
ತತ್ತಡುತ್ತಮ ಸಂಗವೀಯದೆ ಸುಖವ ನಿಖಿಳರಿಗೆ || ೭೪ ||

ಶುದ್ಧರಾಗದರಾರು ಸಮತೆಯ |
ಶ್ರದ್ಧೆಯಾಗದರಾರು ನಿರುಪಮ |
ಸಿದ್ಧಿಯಾಗದರಾರು ನಿತ್ಯವ ಪಡೆಯದವರಾರು ||
ಸಿದ್ಧರಾಗದರಾರು ಸೌಖ್ಯಸ |
ಮೃದ್ಧಿಯಾಗದರಾರು ಪರಮಾ
ರಾಧ್ಯರೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ || ೭೫ ||

**ಅಂತು ಗತಿ ೧೩ಕ್ಕಂ ಪದ ೭೧೨ ಕ್ಕಂ ಮಂಗಳಂ**

೧ ಹರನ (ಉ.) ೨ ಚೇತನವ (ಉ.)

# ಪ್ರಭುದೇವರು ಕಲ್ಯಾಣಕ್ಕೆ ಬಂದ ಗತಿ

**ವಚನ**

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತಿರ್ದುದಯ್ಯಾ ಶಿವನ ಪ್ರಕಾಶ । ಆ ಬೆಳಗಿನೊಳಗೊಪ್ಪುತಿರ್ದರಯ್ಯ ಅಸಂಖ್ಯಾತ ಭಕ್ತಮಹಾಗಣಂಗಳು । ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ । ಶಿವಭಕ್ತರಿರ್ದ ದೇಶವು ಪಾವನವೆಂಬುದು ಹುಸಿಯೆ । ಗುಹೇಶ್ವರಲಿಂಗದಲಿ ಎನ್ನ ಪರಮಾರಾಧ್ಯ ಸಂಗನಬಸವಣ್ಣನ ಕಂಡು ಬದುಕಿದೆ ಕಾಣಾ ಸಿದ್ಧರಾಮಯ್ಯಾ ॥ ೧ ॥

ಆದಿಯಾಧಾರವಿಲ್ಲದ ಆಗಮನಾಸ್ತಿಯಾಗಿಪ್ಪ ಸಂಸಾರವಿರಹಿತನನಾರು ಅರಿಯರಲ್ಲ । ದಶಮುಖ ಮಾಣಿಕದ ಎಸಳುಗಂಗಳು ಪರ್ಬಿ ಪಸರಿಸಿದುದನಾರು ಅರಿಯರಲ್ಲ । ಹಿರಿದೊಂದು ವೃಕ್ಷವು ಅತಿಶಯದ ರೂಪಾಗಿ ಪೃಥ್ವಿಗಿಂಬಾಗಿರ್ದುದನಾರು ಅರಿಯರಲ್ಲ । ಅಂತರಂಗದ ಭುವನವನು ಮೆಟ್ಟಿನೋಡುತ್ತ ಬಿದಗಿನ ತಾವರೆಯ ಮಧ್ಯದ ತಾರಕಿಯನಾರು ಅರಿಯರಲ್ಲ । ಇನಶಶಿಗಳಿಬ್ಬರು ನಯನೋಟದ ಪುಷ್ಪಪರಿಮಳವಾಗಿರ್ದುದನಾರು ಅರಿಯರಲ್ಲ । ಇಂಬುನಯನದಲ್ಲಿ ಸಂಭ್ರಮವಿಲ್ಲದ ರೂಪು ಮಹತ್ತಾಗಿರ್ದುದನಾರು ಅರಿಯರಲ್ಲ । ಸಾಗರದೊಳಗಣ ಜ್ಯೋತಿಯಂತೆ ಗುಹೇಶ್ವರಲಿಂಗದೊಳಗೆ ಎನ್ನ ಪರಮಾರಾಧ್ಯ ಸಂಗನಬಸವಣ್ಣ ನಿಂದ ನಿಲವ ಉಪಮಿಸಬಾರದು ಕಾಣಾ ಸಿದ್ಧರಾಮಯ್ಯಾ ॥ ೨ ॥

ಯತ್ರ ಯತ್ರ ಮಹೇಶ್ವರರಿರ್ದ ಗ್ರಾಮ ತತ್ರ ತತ್ರ ಶಿವಲೋಕ ನೋಡಾ । ಸತ್ಯರ ವಚನ ತಪ್ಪುವದೇನಯ್ಯಾ ಕಪಿಲಸಿದ್ಧ ಮಲ್ಲಿನಾಥಾ । ನಿಮ್ಮ ಶರಣ ಬಸವಣ್ಣ ಮೆಟ್ಟಿದ ಧರೆ ಪಾವನವೆಂಬುದು ಇಂದು ಕಾಣಬಂದಿತಯ್ಯಾ ಪ್ರಭುವೇ ॥ ೩ ॥

ಜಲದಲುದ್ಭವಿಸಿದ ಮುತ್ತು ಜಲವು ತಾನಲ್ಲ । ಜಲವೆಂದಿಪ್ಪರು ಲೋಕದವರು । ಪರಮಗುರು ಬಸವಣ್ಣ ಜಗವ ಪಾಲಿಸಬರಲು ಎನ್ನ ಪರಿಭವದ ದಂದುಗ ಹರಿಯಿತಯ್ಯಾ । ಆ ಸುದ್ದಿಯನರಿಯಲರಿಯದೆ ಬೇಕಾದ ಪರಿಯಲ್ಲಿ ಅನೇಕ ಜಡರೆಲ್ಲ ನುಡಿವುತ್ತಿಹರು । ಸತ್ತವರ ಪ್ರಾಣವನೆತ್ತಿ ಒಪ್ಪಿರ್ಪ ನಿರ್ಣಯ ಮರ್ತ್ಯದವರಿಗುಂಟೇ ಶಿವಂಗಲ್ಲದೆ । ಶಿವಗುರು ಬಸವಣ್ಣ ಬಸವಗುರು ಶಿವನಾಗಿ ವೆಸೆಗೆಟ್ಟ ದೇವತಾಪಶುಗಳಿಗೆ ಪತಿಯಾದನು । ಬಸವಣ್ಣನ ನೆನಹು ಸುಖಸಮುದ್ರವಯ್ಯಾ ಕಪಿಲಸಿದ್ಧ ಮಲ್ಲಿನಾಥಾ ಬಸವಣ್ಣನ ತೋರಿದಿರಾಗಿ ನಾನು ಬದುಕಿದೆನು ॥ ೪ ॥

ಕರ್ಮವಿಲ್ಲದ ಕಾಯ ಕರಣವಿಲ್ಲದ ಪ್ರಾಣ ಮಥನವಿಲ್ಲದ ಶಬ್ದ ಗಮನವಿಲ್ಲದ ಮನ ಗುಹೇಶ್ವರ ನಿಮ್ಮ ಬರವು ಸಂಗನಬಸವಣ್ಣನ ಮೆಚ್ಚು ನೋಡಾ ॥ ೫ ॥

ಉಪಪಾತಕಮಹಾಪಾತಕವ ಮಾಡಿದ ಕರ್ಮಂಗಳು ಕೋಟಾನುಕೋಟಿ ಒಬ್ಬ ಶಿವಶರಣನ ಅಂಗಳವ ಕಂಡಲ್ಲಿ ಹರಿದು ಹೋಹವು ನೋಡಾ । ಅದೇನು ಕಾರಣವೆಂದರೆ ಶಿವಶರಣನಂತರಂಗದಲ್ಲಿ ಶಿವ

ನಿಪ್ಪನಯ್ಯಾ । ಶಿವನಿದ್ದಲ್ಲಿ ಕೈಲಾಸವಿಪ್ಪುದು । ಕೈಲಾಸವಿದ್ದಲ್ಲಿ ಸರ್ವ ರುದ್ರಗಣಂಗಳಿರ್ಪರು ಅಷ್ಟಾಷಷ್ಟಿ ತೀರ್ಥಂಗಳಿಪ್ಪವು । ಶಿವನು ಒಲಿದಲ್ಲಿ ಇನಿತು ನೆಲಸಿಪ್ಪವಯ್ಯಾ । ಇಂತಪ್ಪ ಶರಣ ಬಸವಣ್ಣನಂಗಳವ ಕಂಡೆನಾಗಿ ಗುಹೇಶ್ವರಲಿಂಗನ ಕಂಗಳಿಗೆ ತೃಪ್ತಿಯಾಯಿತ್ತು ಕಾಣಾ ಸಿದ್ಧರಾಮಯ್ಯಾ ॥ ೬ ॥

ಜಂಗಮದಿಂಗಿತಾಕಾರವ ನೋಡಿ ಲಿಂಗವೆಂದರಿದ ಸದ್ಭಕ್ತರು ಮನ ಮನ ಬೆರಸಿದ ಕೂರ್ಮನ ಸಿಸುವಿನ ಸ್ನೇಹದಂತೆ ಕಾಣದ ಮುನ್ನವೆ ತೆರಹಿಲ್ಲದಿರಬೇಕು ನೋಡಾ । ಬಂದ ಬರವನರಿಯದೆ ನಿಂದ ನಿಲವ ನೋಡದೆ ಕೆಮ್ಮನೆ ಅಹಂಕಾರವ ಹೊತ್ತಿಪ್ಪವರ ನಮ್ಮ ಗುಹೇಶ್ವರಲಿಂಗನೊಲ್ಲ ಕಾಣಾ ॥ ೭ ॥

ಎನ್ನ ಗುಣಾವಗುಣವ ಸಂಪಾದಿಸದಿರಯ್ಯಾ । ಪ್ರತಿಯಿಲ್ಲದಪ್ರತಿಮ ನೀನು । ನಿನಗಾನು ಸರಿಯೆ । ಅನುಪಮಮಹಿಮ ಕೂಡಲಸಂಗಮದೇವ ನೀ ಮಾಡಲಾನಾದೆನಯ್ಯಾ ॥ ೮ ॥

ಕೈಯಲ್ಲಿ ಡೊಣ್ಣೆ ಮನದಲ್ಲಿ ಕ್ರೋಧ ವಚನದಲ್ಲಿ ಕಿಂಕಿಲ ಲಿಂಗದ ವಾರ್ತೆ ನಿನಗೇಕೆ ಹೇಳಾ ಬಸವಾ । ಜಂಗಮವೆ ಲಿಂಗವೆಂಬ ಶಬ್ದಸಂದೇಹಸೂತಕಿ ನೀನು । ಸಜ್ಜನಸದ್ಭಕ್ತಿಯ ಮಾತು ನಿನಗೇಕೆ ಹೇಳಾ ಬಸವಾ । ಕಬ್ಬುನದ ರೂಪು ಪರುಷವ ಮುಟ್ಟಿ ಹೊನ್ನಾಯಿತಲ್ಲದೆ ಪರುಷವಪ್ಪುದೆ ಹೇಳಾ ಬಸವಾ । ಗುಹೇಶ್ವರನೆಂಬ ಪರುಷದ ಪುತ್ಥಳಿಯನರಿಯಬಲ್ಲರೆ ತಿಳಿದು ನೋಡಾ ಸಂಗನಬಸವಣ್ಣಾ ॥ ೯ ॥

ಧ್ಯಾನ ಮೌನವೆಂಬ ಶಬ್ದವ ಹಿಡಿದು ನಿಮ್ಮ ಗೆಲಲರಿಯದೆ ಅಹಂಕಾರದ ಧಾರೆಯೆಂಬ ಮೊನೆಯ ಶಸ್ತ್ರವ ಹಿಡಿದು ಕೆಟ್ಟೆನಯ್ಯಾ । ಅಂಜುವೆನಂಜುವೆನಯ್ಯಾ । ಜಂಗಮಲಿಂಗವೆಂಬ ಭಾಷೆ ಪಲ್ಲಟವಾಯಿತ್ತು । ಜಂಗಮಲಿಂಗವೆಂಬ ದೀಕ್ಷಾಶಸ್ತ್ರದಲ್ಲಿ ಎನ್ನ ಹೊಯ್ದು ಬೈದು ರಕ್ಷಿಸು ಕೂಡಲಸಂಗಮದೇವಾ ॥ ೧೦ ॥

**ಸೂಚನೆ**

ಬಸವಮೊದಲಾಗಿದ್ದ[೧] ಭಕ್ತರ ।
ನಸಮನಲ್ಲಮ ಬಂದು ಕಂಡನು ।
ವಸುಮತಿಗೆ ಚೆಲುವಾದ ವರ ಕಲ್ಯಾಣಪುರದೊಳಗೆ ॥

ಶರಣರೆಲ್ಲರು ಕೇಳುವುದು ಸ ।
ತ್ಕರಿಸಿ ಮುಂದಣ ಸಂಗತಿಯ ಸಡ ।
ಗರಣೆಯನು ಸಲೆ ಸಿದ್ಧರಾಮನ ಬೋಧಿಸಿದ ಬಳಿಕ ॥
ಗುರು ಗುಹೇಶ್ವರನೊಲಿದು ಭಕ್ತರಿ ।
ಗೊರೆದ ಶಿವಪಥದಾದಿಗತಿಯನು ।
ವರ ಮನೋಹರವೆನಿಸುವೀ ಪ್ರಭುಲಿಂಗಲೀಲೆಯಲಿ ॥ ೧ ॥

೧ ದಖಿಳ (ಉ.)

ಬಸವರಾಜನ ಚಾರು ಚರಿತೆಯು |
ಬಿಸಿಲಿಗಖಿಲರ ಮನದ ಭಕ್ತಿಯು |
ಬಿಸರುಹಂಗಳು ವಿಕಸಿತವನೈದಿರಲು ತಾನಱಿದು ||
ವಸುಮತಿಗೆ ಕಲಿಕಾಲದೊಳಗಿದು |
ಪೊಸತಲಾ ಎಂದೆನುತ ಸಂತೋ |
ಷಿಸುತಲಿರ್ದನು ಗುರು ಗುಹೇಶ್ವರಲಿಂಗ ಲೀಲೆಯಲಿ || ೨ ||

ಕಾಡಲೇ೧ಕಿನ್ನೆನ್ನ ಭಕ್ತರು |
ಬೇಡಿದಿಷ್ಟಾರ್ಥಂಗಳನು ಕೈ |
ಗೂಡಿಸುವೆನೆಂದೆನುತ ಕರುಣರಸಾರ್ದ್ರಚಿತ್ತದಲಿ ||
ಹಾಡುತಾಡುತ ಸಿದ್ಧರಾಮನ |
ಕೂಡಿಕೊಳುತಲಿ ಬಸವರಾಜನ |
ನೋಡಲಿಕೆಯಲ್ಲಮನು ಸೊನ್ನಲಪುರವ ಹೊಱವಂಟ || ೩ ||

ಕೆಱೆ ಸರೋವರ ಬಾವಿ ಕಾಲುವೆ |
ಯೊಱತೆ ಪೂಗಿಡು ತೋಟ ಕಿಕ್ಕಿಱಿ |
ಗಿಱಿದ ಮಾದಲ ಮಾವು ನೇಱಿಲ ಹಲಸು ನಾರಂಗ ||
ಅಱವಟಿಗೆ ಛತ್ರಗಳು ಪಥದಲಿ |
ತುಱುಗಿದುವು ಬಸವೇಶ ಮಾಡಿಸೆ |
ಮೆಱೆದುವಾ ಕಾನನದ ಪಥಿಕರ ಡಗೆಯನಾಱಿಸುತ || ೪ ||

ಲೇಸೆನಿಸಿ ವಿಶ್ರಮಿಸುವರಿಗೆ ನಿ |
ವಾಸ ಗೇಹಗಳಲ್ಲಿಗಲ್ಲಿಗೆ |
ಹಾಸುಗಳು ಹಲವಂದದುಪಚಾರದ ಪದಾರ್ಥಗಳು ||
ಭಾಸುರತೆಯೆನಿಸಿರ್ದುವಾ ಬಸ |
ವೇಶ ಮಾಡಿಸಲಡವಿಯಲಿ ಸಂ |
ತೋಷವನೆ ಸಲೆ ಬೀ೨ಱುತಿರ್ದುವು ಸಕಲ ಪಥಿಕರಿಗೆ || ೫ ||

೧ ನೋಡಬೇ ( ಜ. ) ೨ ತೋ ( ಇ. )

ಕೂಡಿ ವಿಪಿನದ ಬಟ್ಟೆ ಸುಖವನೆ |
ತೀಡುತಿರಲಾ ಸಿದ್ಧರಾಮನ |
ಕೂಡೆ ಹೇಳುತಲಲ್ಲಮಪ್ರಭುಲಿಂಗ ಲೀಲೆಯಲಿ[೧] ||
ನೋಡಿದನು ಕಣ್ತುಂಬಿ ಮಿಗೆ ಕೊಂ |
ಡಾಡಿದನು ಬಾಯ್ತುಂಬಿ ಹರುಷವ |
ಮಾಡಿದನು ಮನ ತುಂಬಿ ಬಸವನ ಧರ್ಮದುನ್ನತಿಗೆ || ೬ ||

ಬರುತ ಬರುತಲಿ ತನ್ನ ಪಾದ |
ಸ್ಪರುಶನಕೆ ಸಯವಾದ ಸಚರಾ |
ಚರರ[೨]ನೆಲ್ಲರ ಪಾವನವ ಮಾಡುತ ಮಹಾತ್ಮೆಯಲಿ ||
ಹರುಷದಿಂದಲಿ ಬಂದು ಕಂಡನು |
ಪರಮ ಜಂಗಮಲಿಂಗವಾಗಿಯೆ |
ಗುರು ಗುಹೇಶ್ವರನೊಲಿದು ಕಲ್ಯಾಣವನು ಕರುಣ[೩]ದಲಿ[೪] || ೭ ||

ಎತ್ತ ನೋಡಿದೊಡತ್ತ ನಗರದ |
ಸುತ್ತ ಹೊಱವಳಯದಲಿ ಕಾಣಿಸಿ |
ಕತ್ತಲಿಸುವ ಸಮಸ್ತ ಭೋಗಾರುಹದ ತರುಲತೆಯು ||
ಮುತ್ತಿ ಮೋಹಿಸಿ ಮಿಗೆ ವಿಳಾಸತೆ |
ವೆತ್ತ ಶುಕ ಪಿಕ ಕೇಕಿ ಕೋಕದ |
ಮೊತ್ತಗಳ ನಡೆ ನುಡಿಗಳುದ್ಯಾನವನು ಪ್ರಭು ಕಂಡ || ೮ ||

ಪುರದೊಳಗೆ ಚರಿಯಿಸುವಸಂಖ್ಯಾ |
ತರ ಮಹೋನ್ನತ ಭಕ್ತಿರಸವಾ |
ಪುರದೊಳಗೆ ನೆಗೆದುಕ್ಕಿ ವಿಸಟಂಬರಿದು ಚೆಲುವಾಗಿ ||
ಪುರದ ಹೊಱವಳಯದಲಿ ಬಳಸಿತೊ |
ಹಿರಿದು ಗಂಭೀರತೆಯಲೆ[೫]ನಲಾ[೬] |
ಪರಿಖೆ ಕಲ್ಯಾಣದಲಿ[೭] ಕಂಗಿದಿರಾಯಿತಲ್ಲಮಗೆ || ೯ ||

---

೧ ನೈತರುತ ( ಜ. ) ೨ ವ ( ಇ, ಕ, ಗ. ) ೩ ಹರುಷ ( ಚ. ) ೪ ಣಾಖ್ಯಪುರವರವ ( ಗ. )
೫ ನೆ ( ಇ, ಚ. ) ೬ ಯೆನಲ್ಕಾ ( ಅ, ಒ, ಖ. ) ೭ ಪಿರಿಯಗಳ ಕಲ್ಯಾಣ ( ಜ. )

ನ[೧]ಲವಿನಲಿ ಗಿರಿರಾಜನತಿ ನಿ |
ಶ್ಚಲದ ಶಿವಭಕ್ತರ ಚರಿತ್ರಂ |
ಗಳ ವಿಳಾಸವ ಸುತ್ತಿ ನೋಡುವೆನೆಂದು ಮಂಡಳಿಸಿ ||
ನೆಲಸಿದನೊ ಪೇಳೆನಲು ಕೋಟೆಯ |
ವಳಯ ವರ್ಣಿಸಿ[೨] ಮೆಱೆದು ತೋಱುವ |
ತ್ರೊಳ[೩]ತೊಳಪ ಕಲ್ಯಾಣ ಕಂಗಿದಿರಾಯಿತಲ್ಲಮಗೆ[೩] || ೧೦ ||

ಬಸವ ಚಾದಗೆವಕ್ಕಿಗಲ್ಲಮ |
ವೆಸರ ಘನ ನಿಜ ಕರುಣವರುಷವ |
ನೊಸೆದು ಸುರಿದಪುದಲ್ಲಿ[೪]ಯೊಕ್ಕುದನುಂಬೆವಾವೆನುತ ||
ಮುಸುಱಿದಮರರ ವರವಿಮಾನ |
ಪ್ರಸರಗಳೊ ಪೇಳೆನಲು ಗಗನದೊ[೫] |
ಳೆಸೆದುವಟ್ಟಳೆಯೋಳಿ ಕಲ್ಯಾಣದಲಿ ಚೆಲುವಾಗಿ || ೧೧ ||

ಹುಲಿಮುಖಂಗಳ ವಂಕದಾರದ |
ಹಲವು ನೆಲೆಯುಪ್ಪರಿಗೆಗಳ ಬಾ |
ಗಿಲಗಳಂಗಡಿಬೀದಿಗಳ ಸಂಪದದ ಜನಪದದ[೬] ||
ಕಳಕಳದ ಕಲ್ಯಾಣಪಟ್ಟಣ |
ದೊಳಗೆ ನೋಡುತ ಬಸವರಾಜನ |
ನಿಳಯಕಲ್ಲಮ ಸಿದ್ಧರಾಮರು ಬಂದರೊಲವಿನಲಿ || ೧೨ ||

ಬಂದು ಮೆಲ್ಲನೆ ಬಸವರಾಜನ |
ಮಂದಿರಕೆ ಚೆಲುವಾದ ಬಾಗಿಲ |
ಮುಂದೆ ನಿಂದಿರಲಲ್ಲಮಪ್ರಭುಸಿದ್ಧರಾಮರನು ||
ಅಂ[೭]ದು ಭಾವಿಸಿ ನೋಡಿಯಿವರೇ |
ನಿಂದುವೌಳಿಯ ಸಗುಣನಿರ್ಗುಣ |
ದಂಡವಿಗರೋ ಶಿವಶಿವಾ ಎನುತಿದ್ದುದಖಿಳ ಜನ || ೧೩ ||

---

೧ ಒ ( ಖ, ಜ. ) ೨ ದಲು ತಾ ( ಉ. ) ೩-೩ ಪ ಕಲ್ಯಾಣವನು ಪ್ರಭುರಾಮಯ್ಯಗಳು ಕಂಡು ( ಜ. ) ೪ ಗ್ಗದಲಿ ( ಒ. ) ೫ ವವನಿಯೊ ( ಅ, ಉ, ಕ, ಜ, ಮು. ) ೬ ರುಗಳ ( ಜ. ) ೭ ಬಂ ( ಇ. )

ಹಡಪದಪ್ಪಣ್ಣಗಳು ಕಾಣುತ |
ತಡೆದಿರದೆ ಹರಿತಂದು ಮಹಗಣ |
ದೊಡನೆ ಶಿವಲಿಂಗಾರ್ಚನೆಯ ವಿರಚಿಸುವ ಕಾಲದಲಿ ||
ಮೃಡನ ದೃಶ್ಯಾದೃಶ್ಯರೂಪುಗ |
ಳೊಡೆಯರಿಬ್ಬರು ಬಂದರೆನುತಲಿ |
ಸಡಗರಿಸಿ ಬಿನ್ನೈಸುತಿರ್ದನು ಬಸವರಾಜಂಗೆ || ೧೪ ||

ಕರತಳ[1]ದೊಳಿಡೆಗೊಂಡು ಪೂಜಾ |
ತುರತೆಯಿಂ[2]ದಿರುತೊಲಿದು ತಾನೇ |
ಚರವನಂಗೀಕರಿಸಿ ಬಂದೊಡೆ ಲೇಸು ಲೇಸೆನುತ ||
ಕರೆಯಿರೇ ಇನ್ನೊಳಯಕೆನ್ನೊಡೆ |
ಯರನು ತಳುವೇಕೆನುತ ಬಸವನು |
ಹರುಷದಿಂದಲಿ ಹಡಪದಪ್ಪಣ್ಣಂಗೆ ನೇಮಿಸಿದ || ೧೫ ||

ಬಸವರಾಜನು ಭಕ್ತಿಯಿಂದಲಿ |
ಬೆಸಸಿದರೆಯಪ್ಪಣ್ಣನತಿ ಭರ |
ವಸದಲೆಯ್ತಂದಲ್ಲಮಪ್ರಭು ಸಿದ್ಧರಾಮರಿಗೆ ||
ಒಸೆದು ಮಿಗೆ ಶರಣಾರ್ಥಿಯೆನುತವೆ |
ಸಸಿನೆ ಸಮ್ಮುಖದಲ್ಲಿ ಕರಯುಗ |
ಬಿಸರುಹಂಗಳ ಮುಗಿದು ಬಿನ್ನಹ ಮಾಡಲನುಗೆಯ್ದ || ೧೬ ||

ದೇವ ಕರುಣಾಕರನೆ ಬಿಜಯಂ |
ಗೆಯ್ವುದೊಳಕಡೆಗೆಂದೊಡೆಮಗೊಳ |
ಗಾವ ತತ್ತ್ವವಸರವು ನಮಗೇಕರಸುಮನೆಗಳಲಿ ||
ಭಾವಿಸಲು ಸಂಚಾರವೆನುತಲಿ |
ದೇವನಲ್ಲಮ ನುಡಿಯಲದ ತಂ |
ದಾ[3]ಶಿವರಿಸಿಯುಪ್ಪಣ್ಣನಱುಪಿದ ಬಸವರಾಜಂಗೆ || ೧೭ ||

೧ ತರತರ (ಕ.) ೨ ಕೆ ನಿಂ (ಚ, ಜ.) ೩ ಕಂ । ದಾ (ಅ, ಒ, ಕ, ಖ.) ; ನಂ । ದಾ (ಚ.)

ಹರಹರಾ ನಾನಕಟ ಗರ್ವದ |
ಗಿರಿಯನೇರಿನಡರಿರ್ದೆನೋ ಮೋಹ್ |
ಮರುಳತನದಲಿಯೆನ್ನ ನಡೆ ನುಡಿ ತಪ್ಪನಪ್ಪಿದುವೋ ||
ಗುರುವೆ ಕರುಣಿಸಿ ಬಂದು ಬಾರದೆ |
ತರಹರಿಸಲೇಕೆನುತ ಚಿಂತಾ |
ಶರಧಿಯೊಳಗ[೧]ದ್ದಿದನು ಕೇಳುತ ಬಸವ ಮನದೊಳಗೆ || ೧೮ ||

ತನಗೆ ತಾನೇ ಭಕ್ತರೆಲ್ಲರ |
ಮನವ ನೋಡಿಹೆನೆಂದು ಕರುಣಿಸಿ |
ಮನೆಯ ಬಾಗಿಲಿಗಾ ಮಹಾ ಘನ ಮಹಿಮನೆಯ್ತರಲು ||
ಅನುವನಱಿಯದೆ ರಾಜಸದ ಹ |
ಮ್ಮಿನಲಿ ಬಳಿಯುಟ್ಟುವದು ಬಸವಾ |
ನಿನಗಿದುಚಿತವೆ ಎಂದನಾ ಮಡಿವಾಳ ಮಾಚಯ್ಯ || ೧೯ ||

ಕಡಲನೀಸಾಡುವಗೆ ತಾಮಸ |
ವ[೨]ಡರಿದಂತಾಯ್ತು[೩]ಕ್ಕಟಕ್ಕಟಿ |
ಮಡಿವಳಯ್ಯನ ಮಾತಹುದು ತಪ್ಪೆನ್ನದೆಂದೆನುತ ||
ನಡೆದು ಶಿವಗಣಸಹಿತೆಯಲ್ಲಮ |
ನಡಿಯೊಳತಿ ಭಯಭಕ್ತಿಯಲಿ ತ |
ನ್ನೊಡಲನೀಡಾಡಿದನು ಭರದಲಿ ಬಸವದಂಡೇಶ || ೨೦ ||

ನಾನು ಮಱವೆಯ ಮರುಳು ಸಂತತ |
ನೀನೆಯಱಿವಿನ ತಿರುಳು ತಿಳಿವೊಡೆ |
ನಾನು ರಂಜಕನಖಿಳರಱಿಯಲು ನೀ ನಿರಂಜಕನು ||
ನಾನು ಭಾವಿಸೆ ಪಶು ವಿಚಾರಿಸೆ |
ನೀನು ಪಶುಪತಿಯೆನ್ನ ತಪ್ಪನು |
ನೀನೆ ತಿದ್ದುವುದೆನುತ ಮೆಯ್ಯಿಕ್ಕಿದನು ಬಸವಣ್ಣ || ೨೧ ||

---

೧ ಸಿಥಿಯಲ ( ಬ, ಕ, ಖ, ಚ. ) ೨ ತೊ ( ಇ. ) ೩ ಕಟಕಟ ದಿಟ ( ಇ. ) ; ಕಟ ನೋಳ್ಪರೆ ( ಗ. )

ಭ್ರಮಿಸಿದೆನು ನಾನೆನ್ನ ಮದ[೧]ದಲಿ |
ಕ್ಷಮಿಸುವುದು ನೀ ನಿನ್ನ ಗುಣದಲಿ |
ರಮಣರಾದವರೆನ್ನ ಕೊಱತೆಯ ನೋಡಬೇಡೆನುತ ||
ವಿಮಳಮತಿ ಭಯಭಕ್ತಿಸಹಿತ[೨] |
ಲ್ಲಮನ ಪಾದಪಯೋಜದಲಿ ನೆಱೆ[೩] |
ನಮಿಸುತಿರ್ದ[೪]ನು ಬಸವದಂಡಾಧೀಶನಡಿಗಡಿಗೆ || ೨೨ ||

ಶಿಶುಗಳಲಿ ಗುಣದೋಷವನು ಭಾ |
ವಿಸುವರೇ ಕರುಣದಲಿ ಮಿಗೆ ರ |
ಕ್ಷಿಸುವ ಮೋಹದ ತಂದೆ ತಾಯಿಗಳಾ ಪ್ರಕಾರದಲಿ ||
ಬಸವರಾಜಗೆ ಮಾತೆ ಪಿತ ನೀ |
ನೊಸೆದು ಕರುಣಿಸಬೇಕೆನುತ ವಂ |
ದಿಸುತಲಿದ್ದನು ಚೆನ್ನಬಸವನು ಅಲ್ಲಮನ ಪದಕೆ[೪] || ೨೩ ||

ಅರಿಗಳಿದಿರಲಿ ತಪ್ಪಿದೊಡೆ ಸಂ |
ಗರದೊಳೂಣೆಯುವಪ್ಪುದಲ್ಲದೆ |
ಗರುಡಿಯಲಿ ಕೈಮುಱಿ[೫]ದೊಳ[೫]ಡಾವುದು ಕೊಱತೆಯದಱಿಂದೆ ||
ಗುರುವೆ ಬಾಲಾಭ್ಯಾಸಭಕ್ತಿಯ |
ಪರಿಚರಿಯದೂಣೆಯುವ[೬] ನೋಡದೆ |
ಕರುಣಿಸೆನುತಲ್ಲಮಗೆ ಮೆಯ್ಯಿಕ್ಕಿದನು ಮಾಚಯ್ಯ || ೨೪ ||

ತನ್ನ ಕಾಯುವೆ ಲಿಂಗ ನೆಟ್ಟನೆ |
ತನ್ನ ಜೀವ[೬]ವೆ ಚಾರು ಜಂಗಮ |
ತನ್ನ ತಾನೇ ತಿಳಿದ[೭] ಬಸವಣ್ಣಂಗೆ ನಿಮ್ಮಡಿಗೆ ||
ಭಿನ್ನ ಭಾವನೆ[೮]ಯಾವುದೈ ಸಾ |
ಕಿನ್ನು ಕೃಪೆ ಮಾಡೆನುತಲಾಗಳು[೮] |
ಕಿನ್ನರಿಯ ಬೊಮ್ಮಣ್ಣ ಬಿನ್ನೈಸಿದನು[೯] ಅಲ್ಲಮಗೆ || ೨೫ ||

---

೧ ನ ( ಅ, ಇ, ಉ, ಕ, ಚ. ) ೨ ಯಲಿಯ ( ಒ, ಜ. ) ೩ ಅಲ್ಲಮಪ್ರಭುವ | ( ಕ, ಚ, ಮು. ); ವಾಧೀಶನಲ್ಲಮಗೆ ( ಗ. ) ೪-೪ ಡದಕಿನ್ನಾವ ಕೊರತೆಗಳು ( ಇ. ) ೫ ವದರೆಡಹು ( ಗ. ) ೬ ಜ್ಞಾನ ( ಇ. ) ೭ ನರಿದಾತ ( ಅ. ) ; ನಿಂತರಿದ ( ಇ, ಉ. ) ; ನಿಂತಳಿದ ( ಕ, ಖ, ಮು. ) ೮-೮ ಯುಂಟೆ ಕೃಪೆಯಿಂ | ಬಿನ್ನ ರಕ್ಷಿಸಬೇಕೆನುತಲಾ ( ಗ. ) ೯ ಬಿನ್ನಪಗೈದನ ( ಗ. )

ಶೃತಿಗೆ ನಿಲುಕದ ಸಕಲ[೧] ಶಾಸ್ತ್ರ |
ಸ್ಮೃತಿಗೆ ಸಿಕ್ಕದ ದಿವಿಜ ಮುನಿಗಳ |
ಮತಿಗೆ ಮೈದೋಱದ ಮಹಾಘನ ಮಹಿಮ ನೀನೊಲಿದು ||
ಕ್ಷಿತಿಗೆ ಬಸವ ನಿಮಿತ್ತ ಬಂದಿ |
ನ್ನತಿಗಳೆಯಬೇಡೆನುತ ದೇವಗೆ |
ಸ್ತುತಿಸಿ ಮೆಯ್ಯಿಕ್ಕಿದರು ಶಿವಗಣವೆಯ್ದೆ[೩] ತಮತಮಗೆ || ೨೬ ||

ನೋಡಿದ್ಯೆ ರಾಮಯ್ಯ ಭಕ್ತರು
ಮಾಡುವದು ತಾನೊಂದು ಮಿಗೆ ಮಾ |
ತಾಡುವದು ಬೇಱೊಂದು ಜಂಗಮವೊಲಿದು ನಡೆತರಲು ||
ಪಾಡನೇ ಪರುಠವಿಸಿ ನುಡಿವ ಸ |
ಗಾಡಿಕೆಯನೊಡ್ಡಯಿಸಿ ತಮ್ಮಯ |
ಖೋಡಿಯನು ತಾವಱಿಯರೆಂದನು ನಗುತ ಪ್ರಭುರಾಯ || ೨೭ ||

ಸಲಹಬೇಕೆಂದಖಿಳ ಭಕ್ತರಿ |
ಗೊಲಿದು ನೀನೇ ಲೀಲೆಯಿಂದಲಿ |
ಸುಲಭವಾಗಿಯೆ ಸುಳಿದ ಬಳಿಕಿನ್ನವರ ಗತಿಮತಿಯ ||
ಹಳಿವನೆಣಿಸುವುದೇನುಕಾರಣ |
ವೆಲೆ ಮಹಾತ್ಮನೆ ಕರುಣಿಸೆನುತಲಿ |
ಸಲುಗೆಯಲಿ ಬಿನ್ನೈಸುತಿರ್ದನು ಸಿದ್ಧರಾಮಯ್ಯ || ೨೮ ||

ದೇವ ದೇವಾ ಸಿದ್ಧರಾಮಯ |
ದೇವರೆಂದೋಪಾದಿಯಲಿ ಮು |
ನ್ನಾವ ಭಕ್ತಿಯ ಕಂಡು ಬಿಜಯಂಗೆಯ್ದೆ[೨] ನಮಗೊಲಿದು ||
ಪಾವನವ ಮಾಡಲಿಕೆ ಬಂದಿ |
ನ್ನಾವ ಕೊಱತೆಯನೆಣಿಸದೆಮ್ಮನು |
ಕಾವುದೆನುತಲಿ ಮತ್ತೆ ಮಣಿದನು ಬಸವನಲ್ಲಮಗೆ || ೨೯ ||

---

೧ ದುರ್ಲಭನೆನಿಪ ( ಅ. ) ೨ ಸ್ತು ( ಅ, ಕ. ) ೩ ಲ್ಲ ( ಅ, ಗ. )

ಮುನ್ನ ನಿರುಪಾಧಿಯುಲಿ ಕರುಣಿಸಿ |
ನಿನ್ನ ಲೀಲೆಯಲೊಲಿದು [1]ನೀ ಬಂ |
ದಿನ್ನುಪಾಧಿಯನಱಸುವದು ಮರಿಯಾದೆಯಲ್ಲೆ[1]ನುತ ||
ಚೆನ್ನಬಸವನು ಹಿರಿಯಬಸವನು |
ಮನ್ನಣೆಯ ಶಿವಭಕ್ತ[2]ರೆಲ್ಲರು |
ಬಿನ್ನಹವ ಮಾಡಿದರು ಮಹಿಮರು ಮತ್ತೆ ತಮತಮಗೆ[3] || ೩೦ ||

ಮಾತನೇ ಮಕರಿಸಿದರಲ್ಲದೆ |
ಜಾತಿ ಭಕ್ತಿಯ ಹೋದ[4] ಹೊಲಬಿನ |
ರೀತಿಯನು ತಾವಱಿಯರಾವಿನ್ನುಚಿತ ಭಕ್ತಿಯನು[5] ||
ಈತಗಳಿಗಱುಹಿಸಲು ಬೇಕೆನು |
ತೋತು ಬಳಿಕೆಮ್ಮಲ್ಲಮಪ್ರಭು |
ವಾತಗಳಿಗಿಂತೆಂದು ನುಡಿದನು ಮತ್ತೆ ಕರುಣದಲಿ || ೩೧ ||

ನಡೆವಳಿಗಳೇನಾದೊಡಾಗಲಿ |
ನುಡಿವಳಿಯುಲತಿ ಜಾಣರಾದಿರಿ |
ಪೊಡವಿಯಲಿ ನೀವಹುದು ಮಝು ಭಾಪೆನುತ ನಸು ನಗುತ ||
ನಡೆಯಿರ್ರೈ ಶಿವಲಿಂಗಭಕ್ತಿಯ |
ಬೆಡಗನೇಕಾಂತದಲಿ ನಿಮಗೊಡ |
ಬಡಿಸಿ ಹೇಳುವೆನೆನುತ ಬಂದನು ಬಳಿಕ ಪ್ರಭುರಾಯ || ೩೨ ||

**ಅಂತು ಗತಿ ೧೪ಕ್ಕಂ ಪದ ೬೪೪ಕ್ಕಂ ಮಂಗಳಂ**

---

೧-೧ ಬಂದಿರಿ । ಯೆನ್ನ ಕೊರತೆಯನೆಣಿಸದೆಮ್ಮನು ಕಾಯಬೇಕೆ ( ಇ. ) ೨ ಶರಣ ( ಇ. ) ೩ ತಮತಮಗಯ್ಯ ಭಕ್ತಿಯಲಿ ( ಗ. ) ; ಮಂಗಳಮೂರ್ತಿಯಲ್ಲಮಗೆ ( ಚ. ) ೪ ಭಾವ ( ಇ. ) ೫ ವಚನದಲಿ ( ಗ. )

# ಮರುಳುಶಂಕರದೇವರ ಗತಿ

**ವಚನ**

ಬೀದಿಯಲ್ಲಿ ಬಿದ್ದ ಮಾಣಿಕ್ಯವು ಹೂಳಿದ್ದ ನಿಧಾನವು ಆರಿಗೆಯೂ ಕಾಣಬಾರದು ನೋಡಾ । ಮರಣವುಳ್ಳವರಿಗೆ ಮರುಜವಣಿ ಸಿಕ್ಕುವದೆ । ಪಾಪಿಯ ಕಣ್ಣಿಗೆ ಪರುಷ ಕಲ್ಲಾಗಿಯಿಪ್ಪಂತೆ ಅಡಗಿಪ್ಪರಯ್ಯಾ ಶಿವಶರಣರು । ನಮ್ಮ ಗುಹೇಶ್ವರನ ಶರಣ ಮರುಳುಶಂಕರದೇವರ ನಿಲವ ನೋಡಾ ಸಂಗನಬಸವಣ್ಣಾ ॥ ೧ ॥

ಕಾಮನ ಕಣ್ಣ ಮುಳ್ಳ ಕಳೆದು ಭೂಮಿಯ ತ್ರೈಲದ ಸೀಮೆಯ ಕೆಡಿಸಿ ಹೋಮವನುರುಹಿ ದಕ್ಷನ ತಲೆಯನರಿದ ನಿಸ್ಸೀಮನಾದ ಮಹಿಮನ ನಿಲವನರಿಯಬಹುದೆ । ಅರಿವಿಂಗಸಾಧ್ಯ ಉಪಮೆಗೆ ಕಡೆಮುಟ್ಟದು । ಗುಹೇಶ್ವರನ ಕರುಣಪ್ರಸಾದಿ ಮರುಳುಶಂಕರದೇವನೆಂತಿಪ್ಪನೆಂಬುದ ತಿಳಿದು ನೋಡಾ ಸಂಗನಬಸವಣ್ಣಾ ॥ ೨ ॥

ಆದಿಯಲ್ಲಿ ಹುಟ್ಟಿತ್ತಿಲ್ಲ । ಅನಾದಿಯಲ್ಲಿ ಬೆಳೆಯಿತ್ತಿಲ್ಲ । ಮೂರ್ತಿಯಲ್ಲಿ ನಿಂದುದಲ್ಲ । ಆ ಮೂರ್ತಿಯಲ್ಲಿ ಭಾವಿಯಲ್ಲ । ಅರವಿನೊಳಗೆ ಅರಿದುದಲ್ಲ । ಮರಹಿನೊಳಗೆ ಮರೆದುದಲ್ಲ । ಎಂತಿರ್ದಡಂತೆ ಬ್ರಹ್ಮ ನೋಡಾ । ತನುಮನಲೀಯವಾಗಿ ಘನಕ್ಕೆ ಘನ ಒಂದಾದರೆ ಮುಕ್ತಿ ಮನಕ್ಕೆ ವಿಸ್ಮಯವ ಮಾಡಲುಂಟೆ । ಕೂಡಲಚೆನ್ನಸಂಗನ ಶರಣ ಮರುಳುಶಂಕರದೇವರು ಪ್ರಭುದೇವರ ಪ್ರಭೆಯಲ್ಲಿ ಕಾಯವೆಂಬ ಕಂತೆಯ ಕಳೆಯದೆ ಬಯಲಾದರೆ ನಿಜವೆಂದು ಪರಿಣಮಿಸಬೇಕಲ್ಲದೆ ಅಂತಿಂತೆನಲುಂಟೆ ಸಂಗನಬಸವಣ್ಣಾ ॥ ೩ ॥

**ಸೂಚನೆ**

ಮರುಳುಶಂಕರದೇವರಿಗೆ ನಿಜ ।
ಪರಮ ಪದವಿಯನಿತ್ತು ಮೆರೆದನು ।
ಧರಣಿಯರಿಯಲು ಗುರು ಗುಹೇಶ್ವರಲಿಂಗ ಲೀಲೆಯಲಿ ॥

ಕರಣವೆಲ್ಲವು ಕರಗಿಯಂತಃ ।
ಕರಣಶುದ್ಧಿಯ ಪಡೆದು[1] ಸಲೆ ಶಂ ।
ಕರನ ಸಾಧಕರೊಕ್ಕುಮಿಕ್ಕುದನುಂಬ ಮಹಿಮಂಗೆ ॥
ಗುರುವೆ ಪ್ರತ್ಯಕ್ಷದಲಿ ಕರುಣಿಸಿ ।
ಪರಮ ಪದವಿಯನೀವ ಭೇದವ ।
ಶರಣರೆಲ್ಲರು[2] ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

೧ ಕರಣವನು ಶುದ್ಧಯಿಸಿ ( ಜ. )  ೨ ಹರುಷದಿಂದವೆ ( ಉ. )

ನಿಂದು ನಿಲ್ಲದ ನೆಲಕೆ ನೆಟ್ಟನೆ |
ಹೊಂದಿ ಹೊಂದದ ರೂಪು ರೇಖೆಗೆ |
ಬಂದು ಬಾರದ ಸಚ್ಚಿದಾನಂದೈಕರಸಮಯನ ||
ವಂದಿಸುತ ನಾನಾ ಪ್ರಕಾರಗ |
ಳಿಂದಲೊಳಕಡೆಗಾಗಿ ತನ್ನಯ |
ಮಂದಿರಕೆ ನಡೆಗೊಳಿಸಿದನು ಬಸವಣ್ಣ ಭಕ್ತಿಯಲಿ || ೨ ||

ಬರುತ ಕಂಡನು ಪರಮ ಪಾವನ |
ಕರದ ಪಾಪಕ್ಷಯದ ಭವಭೀ |
ಕರವನಳಿದ[೧] ಮಹಾಪ್ರಸಾದದ ಕುಂಡತೀರದಲಿ ||
ಇರುಳು ಹಗಲೆಡೆವಿಡದೆ ಸೇವಿಪ |
ಮರುಳುಶಂಕರದೇವರನು ನಿಜ |
ಕರುಣದಲಿ ಬಸವಣ್ಣನರಮನೆಯೊಳಗೆ ಪ್ರಭುರಾಯ || ೩ ||

ಅಲ್ಲಮಪ್ರಭು ಬರುತ ಕಾಣುತ |
ಮೆಲ್ಲಮೆಲ್ಲನೆ ಬಂದು ತನುಮನ |
ವೆಲ್ಲವನು ಕವಿದೊಕ್ಕು [೨]ಸಾಷ್ಟಾಂಗಪ್ರಣತನಾಗಿ[೨] ||
ಪಲ್ಲವಿಸಿ ಪರಿಣಮದ ಪಸರಣೆ |
ಯಲ್ಲಿ ಹಿಗ್ಗುತ ಭಕ್ತಿಭಾವದ |
ಬುಲ್ಲವಣೆಯಲಿ ಮರುಳುಶಂಕರದೇವನಿಂತೆಂದ || ೪ ||

ಗುರುವ ಕಂಡೆನು ಎನ್ನ ಭಾಗ್ಯದ |
ತರುವ ಕಂಡೆನು ಎನ್ನ ಮುಕ್ತಿಯ |
ಸಿರಿಯ ಕಂಡೆನು ಚಾಗು ಮಝು ಭಾಪೆನುತಲಡಿಗಡಿಗೆ ||
ಕರಣಗಳು ಪರಿಣಮಿಸಿ ಹರ್ಷೋ |
ತ್ಕರುಷದಲಿ ಹಾರಯ್ಸಿ ಹೆಚ್ಚುತ |
ಮರುಳುಶಂಕರದೇವ ಸ್ತುತಿಸಿದನಲ್ಲಮಪ್ರಭುವ || ೫ ||

೧ ಸೇಸುವ ( ಒ. ) ೨-೨ ತಿರೆ ಸಾಷ್ಟಾಂಗವೆರಗಿದನು ( ಜ. )

ಶಿಲೆಯ ಮಱೆಯಲಿ ಹೊನ್ನು ನೆಟ್ಟನೆ |
ಶಿಲದ ಮಱೆಯಲಿ ತೈಲ ಭಾವಿಸೆ |
ನೆಲದ ಮಱೆಯು ನಿಧಾನವಿಹವೊಲು[೧] ಮರುಳವೇಷದಲಿ ||
ಬಳಿಯಲಿರೆ ಸಾಕಾರ ಶಂಕರ |
ನೆಲಸಿ ತನ್ನಂಗಣದಲಾತನ |
ಹೊಲಬನಱಿಯನು ಬಸವನೆನುತಲ್ಲಮನು ಬೆಱಗಾದ || ೬ ||

ಪ್ರೇಮದಿಂದಲಿ ಮರುಳುಶಂಕರ |
ನಾಮದಲಿ ಶಂಕರನೆ ಬಂದಿರೆ |
ಭೂಮಿಜರು[೨] ತಾವಱಿಯರಾಡಂಬರದ ಭಕ್ತಿಯಲಿ ||
ತಾಮಸವ ತಕ್ಕೈಸಿ ಸಾತ್ವಿಕ |
ಸೀಮೆಯನು ತಾವಱಿಯಲಱಿಯರು |
ರಾಮ ನೋಡೆನುತಲ್ಲಮಪ್ರಭುರಾಯನಿಂತೆಂದ || ೭ ||

ಭಾವಿಸಲು ಶಿವಲಿಂಗಭಕ್ತಿಯು |
ನಾವ ಪರಿಯಲಿ ಮಾಡಬೇಕೆಂ |
ಬಾ ವಿಧಾನವನಱಿಯದುದ್ದೇಶದಲಿ ಮಾಡಿದೊಡೆ ||
ಹಾವಸೆಯಲಡಿಯಿಡುವನಂತೆಯ |
ದಾವ ಪಾರವ[೪]ನ್ನೈ[೪]ದಬಲ್ಲುದು |
ದೇವನೀ ಪರಿ ಸಿಕ್ಕುವನೆ ರಾಮಯ್ಯ ಕೇಳೆಂದ || ೮ ||

ಅಱಿಯಬೇಕಾರಾವ ವೇಷದ |
ಮಱೆಯಲಿಹರೋ ಮೇಣು ಲಿಂಗದ |
ಬೆಱಗಿನಲಿ ಕಂಡವರ ಕಣ್ಣಿಗೆ ಮರುಳರಾಗಿಹರೊ ||
ಮೆಱೆವ ಭಕ್ತರ ಮನವ ನೋಡಲು |
ಮಱೆಸಿಹರೊ ದಿಟವಿವನು ತಿಳಿಯದೆ |
[೫]ಬಱಿದೆ ಬಹುದೇ ಭಕ್ತಿಸುಖ[೫] ರಾಮಯ್ಯ ಕೇಳೆಂದ || ೯ ||

---

೧ ಪರಿ ( ಇ. ) ೨ ಜನ ( ಜ. ) ೩ ಭಕ್ತಿಯ ( ಜ, ಮು. ) ೪ ಪರಿ ಮನವ್ನೈ ( ಗ. ) ೫-೫ ಬರಿಯ ಭಕ್ತಿಯಲೇನಹುದು ( ಗ. )

ಗುರುವೆ ಬಿನ್ನಹ ನಿನ್ನನೊಲಿಸುವ |
ಪರಿಯ ಭಕ್ತಿಯ ಮಾಡಿ ಮೆಚ್ಚಿಸಿ |
ವರವ ಹಡೆಯಲದಾರು ಬಲ್ಲರು ಭಾವಿಸಲು ನಿನಗೆ ||
ಶರಣು ಶರಣೆಂದೆಂಬ ಶಬುದ |
ಸ್ಮರಣೆಯಿಂದಲಿ ಶುದ್ಧರಲ್ಲದೆ |
ಹಿರಿಯ ಮಾತೇಕೆನುತಲಿದ್ದನು ಸಿದ್ಧರಾಮಯ್ಯ || ೧೦ ||

ನಿನ್ನ ಕೃಪೆಯುಳ್ಳವನೆ ಭಕ್ತನು |
ನಿನ್ನ ಕೃಪೆಯುಳ್ಳವನೆ ಯುಕ್ತನು |
ನಿನ್ನ ಕೃಪೆಯುಳ್ಳವನೆ ಮುಕ್ತನು ದಿಟ ವಿಚಾರಿಪೊಡೆ ||
ನಿನ್ನ ಕೃಪೆಯೊಂದಿಲ್ಲದಿರೆ ವಿ |
ಕ್ಕನ್ಯ ಭಕ್ತಿಯೊಳೇನು ಫಲವೈ |
ನಿನ್ನ ಕರುಣವೆ ಕಾರಣವಲಾ ಗುರುವೆ[೧] ಕೇಳೆಂದ || ೧೧ ||

ಲೇಸು ಭಕ್ತಿಯ ಬಂಧುತನದಭಿ |
ಲಾಷೆಯಿಂತಿರಬೇಕು ಮರ್ತ್ಯರ |
ಹೂಸಿ ಹುಂಡರ[೨] ನಡೆವಳಿಯ ನೀನೊಪ್ಪವಿಟ್ಟೆಯಲಾ ||
ಐಸೆ ಮತ್ತೇನಹುದು ದಿಟ ನೀ |
ನೀಸು ವೊಲವರಕಾಣನೆಂಬುದ |
ನೀಸು ದಿನ ನಾವರಿಯೆವೈ ರಾಮಯ್ಯ ಕೇಳೆಂದ || ೧೨ ||

ವಸುಮತಿಯ ಶಿವಭಕ್ತರೆಸಗುವ |
ಕುಸಲದೊಯ್ಯಾರವನು ಸವಿಸ್ಮಾ |
ಮುಸುಳಿಸಿದ ಮತಿಗರಿಯಬಹುದೇ[೩] ಸಾಕದಂತಿರಲಿ ||
ಅಸಮ ಶಂಕರನೆಂಬ ಮಹಿಮನ |
ಹೊಸಪರಿಯ ರೀತಿಯನು ನಮಗರು |
ಹಿಸಲು ಬೇಕೆನುತಲ್ಲಮನ ಕೇಳಿದನು ರಾಮಯ್ಯ || ೧೩ ||

---

೧ ಕಾರಣವು ಗುರುರಾಯ ( ಉ. ) ; ಹರಣವೈ ಗುರುರಾಯ ( ಇ. ) ೨ ಮಾಡುವ ( ಗ. )
೩ ಬಾರದು ( ಗ. )

ಮರುಳುಶಂಕರನೆಂಬನಱಿವಿನ |
ತಿರುಳು ಲಿಂಗಾಗಮದ[1] ಹೊಳಹಿನ |
ಹುರುಳು ನಿರ್ಮಳ ಧರ್ಮವರ್ಮದ ಚಾರು ಚಾರಿತ್ರ ||
ನಿರುತ ಶಾಂತಿಯ ಚಿತ್ತವೃತ್ತಿಯ |
ಪರಮ ಪಾವನಮೂರ್ತಿಯಾತನ |
ಪರಿಗಳನುಪಮತರ ಕಣಾ ರಾಮಯ್ಯ ಕೇಳೆಂದ || ೧೪ ||

ತೀವಿ ತನ್ನೊಂದುದರಕೋಸುಗ |
ದಾವ ಕೃತ್ಯವ ಮಾಡುತಿರ್ದೊಡೆ |
ಜೀವಜಾಳಕೆ ನೋವು ತಪ್ಪದೆನುತ್ತ ಕರುಣದಲಿ ||
ಭಾವಿಸುತ ಶಿವಲಿಂಗಭಕ್ತರು |
ಸೇವಿಸಿದ ಶೇಷಪ್ರಸಾದವ |
ನಾವರಿಸಿದ ಮಹಾತ್ಮನೀತನು ರಾಮ ಕೇಳೆಂದ || ೧೫ ||

ಕಾಮದಲಿ ಕಂಗೆಡದೆ ಕ್ರೋಧ |
ಸ್ತೋಮದಲಿ ಮುಂಗೆಡದೆ[2] ಲೋಭದ |
ಸೀಮೆಯಲಿ ಸಿಕ್ಕದೆ ವಿಮೋಹದ ಬಲೆಗೆ ಬಗೆ[3]ಗುಡದೆ ||
ಆ ಮದೋನ್ನತ ಮತ್ಸರಂಗಳ |
ನೇಮಿಸದೆ ಲಿಂಗಪ್ರಸಾದ |
ಪ್ರೇಮಿಯಾದ[4] ಮಹಾತ್ಮನೀತನು ರಾಮ ಕೇಳೆಂದ || ೧೬ ||

ಕೇಳುವಾಳೋಕಿಸುವ ರುಚಿಸುವ |
ಲೀಲೆಯಿಂ ಕಂಪಱಿವ ಸೋಂಕುವ |
ಕಾಳು ವಿಷಯೇಂದ್ರಿಯದ ತವಕ[4]ವ ತೆಗೆದು[4] ತರಹರಿಸಿ ||
[5]ಬಾಳಿಕೆಗೆ ನಿರ್ಬಾಧಕದ ಸಂ |
ಮೇಳವೆಂದೀಶ[6]ಪ್ರಸಾದವ |
ಮೇಲೆ ಮಚ್ಚಿದ ಮಹಿಮನೀತನು ರಾಮ[5] ಕೇಳೆಂದ || ೧೭ ||

---

೧ ಗುಂಗದಲಿ ( ಇ. ) ೨ ಮಸ ( ಗ. ) ೩ ದ | ಸೀಮೆಯರಿದ ( ಜ. ) ೪–೪ ದ ತೆಗಹ ( ಉ, ಜ. ) ೫-೫ ಕೇಳುವಾಡಿಯೆ ಲಿಂಗದಲಿ ಸ | ಮ್ಮೇಳದಲಿ ಸಲೆ ಬೆರೆದನೀತನು | ಹೇಳುವರೆ ಸಾಮಾನ್ಯನೇ ರಾಮಯ್ಯ ( ಇ. ) ೬ ಸು ( ಅ, ಒ. ) ; ಸತ್ ( ಕ, ಗ, ಚ, ಜ. )

ತರಣಿಯುದಯಿಸೆ ರತ್ನಕಾಂತಿ |
ಸ್ಫುರಣೆ ಕಂಗಿದಿರಾಗಿ ತೋಱುವ |
ಪರಿಯಲಾನೀ ಮರುಳುಶಂಕರನೆಂಬ ಮಹಿಮನನು ||
ಗುರುವೆ ನೀನೆಯ್ತರಲು ಕಂಡೆನು |
ಪರಮ ಪಾವನ ನಾನಲಾ ಹರ |
ಹರ ಎನುತ ಪರಿಣಮಿಸುತಿರ್ದನು ಬಸವದಂಡೇಶ || ೧೮ ||

ಬಸವ ನಿನ್ನಯ ಭಕ್ತಿವೃಕ್ಷದ |
ಪಸರಣೆಯನಾಶ್ರೈಸಬೇಕೆಂ |
ದೊಸೆದು ಬಂದ ಮಹಾತ್ಮರಗಣಿತವವರೊಳೀತಂಗೆ ||
ವಸುಮತಿಯೊಳೆಣೆಗಾಣೆನಿಂತ |
ಪ್ಪಸಮರೆಲ್ಲರು ನಿನ್ನ ಬಾಗಿಲ |
ಮುಸುಱಿ[1]ಕೊಂಡಿಹರಾಗಿ ನೀನೆ ಕೃತಾರ್ಥನಹುದೆಂದ || ೧೯ ||

ದೇವ ನೀನೊಲಿದನೆ ಕೃತಾರ್ಥನು |
ಭಾವಿಸಲು ನೀನಾಡಿಸುವ ಸೂ |
ತ್ರಾವಳಿಯ ಬೊಂಬೆಗಳು ನಮಗುಂಟೇ ಸ್ವತಂತ್ರ ಗುಣ ||
ನೀವೆ ಬಲ್ಲಿರಿ ನಿಮ್ಮ ಮಹಿಮೆಯ |
ನಾವು ಬಲ್ಲೆವೆ ಎನುತಲಲ್ಲಮ |
ದೇವರಿಗೆ ಬಿನ್ನೈಸುತಿರ್ದನು ಬಸವದಂಡೇಶ || ೨೦ ||

ಮನವ ನೋಡುವೆನೆಂದು ನಿನ್ನನು |
ಕನಲಿದೆವು ನಾವಿನ್ನೆಬರ ನಿನ |
ಗಿನಿತು ಮುನಿಸಿನ ಮೊಳಕೆ ಮೈದೋಱಸದ ಪರಿ ಲೇಸು ||
ಘನಮಹಿಮ ನೀನಹುದು ಸಮತೆಯ |
ನೆನಹು ನೆಲಸಿತು ಚಾಗು ಚಾಗೆಂ |
ದೆನುತ ಬಸವನ ಹೊಗಳುತಲ್ಲಮಲಿಂಗನಿಂತೆಂದ || ೨೧ ||

---

೧ ಕಿ (ಇ.)

ಕಾರಣವ ಬಲ್ಲವರಿಗಱಿಯಲು |
ಧಾರುಣಿಯಲೀ ಬಸವನಂಗಣ |
ವಾರಣಾಸಿವಿಮುಖ್ಯ[1]ತೀರ್ಥಕ್ಷೇತ್ರದಿಂದಧಿಕ ||
ಆರು ಪಡೆವರು ಭಕ್ತರಿಕ್ಕೆಯ |
ಸಾರಿ ಸದ್ಗತಿ ಪಡೆವುದಸು ನಿ |
ರ್ಧಾರಿಸಲು ಸಾಮಾನ್ಯವೇ ರಾಮಯ್ಯ ಕೇಳೆಂದ || ೨೨ ||

ದೇವ ನಿನ್ನಯ ಕರುಣವೇ[2] ಸಂ |
ಭಾವಿಸಿದ ಕಾರಣದಲಾನೀ |
ಭೂವಳಯದಲಿ ಬಸವಮುಖ್ಯ ಸಮಸ್ತ ಭಕ್ತರನು ||
ತೀವಿ ಕಂಡು ಕೃತಾರ್ಥನಾದೆನಿ |
ದಾವ ಪುಣ್ಯದ ಫಲವೊ ಶಿವ ಮಹ |
ದೇವ ಎನುತಲಿ ಹಿಗ್ಗುತಿರ್ದನು ಸಿದ್ಧರಾಮಯ್ಯ || ೨೩ ||

ಬಸವರಾಜನ ಭಕ್ತಿಯನು ಬ |
ಣ್ಣಿಸುವೊಡಾತನ ಭಕ್ತಿಯನು ಲೆ |
ಕ್ಕಿಸುವೊಡರಿದಗಣಿತವಲಾ ಕೇಳ್ ಸಿದ್ಧರಾಮಯ್ಯ ||
ಪಸರಿಸುವದಂತಿರಲಿ ನಾವಿ |
ನ್ನಸಮ ಶಂಕರಗೈಕ್ಯಪದವಿಯ |
ನೊಸೆದು ಕೊಡಬೇಕೆನುತಲಲ್ಲಮಲಿಂಗನಿಂತೆಂದ || ೨೪ ||

ಇಂದ್ರಿಯವನತಿಗಳೆದನಳುಪಿನ |
ದಂದುಗವ ಧಿಕ್ಕರಿಸಿದನು ಭವ |
ಬಂಧನದ ಬೇರಿಂಗೆ ಕಿಚ್ಚಿಕ್ಕಿದನಲಾ ಎನುತ ||
ಅಂದು ಬಳಿಕಾ ಮರುಳುಶಂಕರ |
ತಂದೆಯನು ತಾನೊಲಿದು ಪರಮಾ |
ನಂದದಿಂ ನೋಡಿದನು ನಮ್ಮಯ ಗುರು ಗುಹೇಶ್ವರನು || ೨೫ ||

೧ ಸ್ಥಾದ್ಯಖಿಳ ( ಗ. ) ೨ ದರುಶನವು ( ಜ. )

ಹಲವು ಯುಗ ಯುಗ ಜನ್ಮ ಜನ್ಮಂ |
ಗಳಲಿ ಸಾಧಿಸಿ ಭೇದಿಸುವ[೧] ನಿ |
ರ್ಮಳ ನಿರಾಕುಳ ಸಿದ್ಧ ಶಿವತತ್ವಾನುಭಾವನೆಯ ||
ಫಲವನೊಂದೇ ನಿಮಿಷದಲಿ ನೆಱ[೩] |
ನಿಲಿಸಿ ನಿಜ ಪದವಿಯನು ಕೊಟ್ಟನು |
ಸುಲಭದಲಿ ಶಂಕರಗೆ ನಮ್ಮಯ ಗುರು ಗುಹೇಶ್ವರನು || ೨೬ ||

ಆಡಿ ಕೆಲರಿಗೆ ಕರುಣದಲಿ ಮಾ |
ತಾಡಿ ಕೆಲರಿಗೆ ನುಡಿಸಿ [೨]ಕೆಲರಿಗೆ |
ನೋಡಿ ಕೆಲರಿಗೆ ಜಱಿ[೩]ದು ಕೆಲರಿಗೆ ಜಡಿದು ಕೆಲಬರಿಗೆ ||
ಹಾಡಿ ಕೆಲರಿಗೆ ಹರಸಿ ಕೆಲರಿಗೆ |
ಕೂ[೪]ಡಬಲ್ಲನು ನಿತ್ಯ ಸುಖವನು |
ರೂಢಿಯೊಳು ಘನಮಹಿಮನೆಮ್ಮಯ[೪] ಗುರು ಗುಹೇಶ್ವರನು[೨] || ೨೭ ||

## ಅಂತು ಗತಿ ೧೫ಕ್ಕಂ ಪದ ೬೭೧ ಕ್ಕಂ ಮಂಗಳಂ

---

೧ ಸದ ( ಇ. ) ೨–೨ ಕೇಳುತ | ಜೇಡಿದಿಟ್ಟಿಯನಿತ್ತು ಪುಷ್ಟಿಯಬಡಿಸಿ ಕೆಲರಿಂಗೆ || ನೋಡಿ ಕೆಲರಿಗೆ ಜರಿದು ಕೆಲರಿಗೆ | ರೂಢಿಗಟ್ಟರಿವಡಿಸಿ ಮುಕ್ತಿಯ | ಗಾಡಿಸಿದನೆಮ್ಮಯ ಗುಹೇಶ್ವರಲಿಂಗ ಲೀಲೆಯಲಿ || ( ಇ. ) ೩ ಮಾ ( ಜ. ) ೪–೪ ಳಗೆಮ್ಮಲ್ಲಮಪ್ರಭು ( ಉ, ಗ. )

# ಇಷ್ಟಲಿಂಗದ ಗತಿ

**ವಚನ**

ಮೂಗ ಕಂಡ ಕನಸಿನಂತಾಯಿತೆನ್ನ ಶಿವಾಚಾರ । ಹೇಳಬಾರದು ಕೇಳಬಾರದಾರಿಗೆಯು । ಎನ್ನ ಹೆಗ್ಗತನವ ಮಾಣಿಸಯ್ಯಾ ಕೂಡಲಸಂಗಮದೇವಪ್ರಭುವೇ ॥ ೧ ॥

ಎಲ್ಲ ಎಲ್ಲವನರಿಯಬಹುದು । ಸಾವನರಿಯಬಾರದು । ಶಿವ ಶಿವ ಮಹಾಪುರುಷರಿಗೆಯು ಸಾವು । ದೇವ ದಾನವ ಮಾನವ ಕಾಮ ಕಾಲ ದಕ್ಷಾದಿಗಳಿಗೆಯೂ ಸಾವು । ಈ ಸಾವನರಿದು ಲೋಕಪ್ರಪಂಚವ ಮರೆದು ಲಿಂಗದಲ್ಲಿಯೇ ನೆನಹು ನೆಲೆಗೊಂಡ ಮಹಾಮಹಿಮಂಗೆ ಮರಣವಿಲ್ಲ । ಸಾವನರಿಯದೆ ಲೋಕಪ್ರಪಂಚವ ಮರೆಯದೆ ಅರಿವ ಮರುಳುಗಳು ಅರಿತಿಹೆವೆಂಬದು ಮಹಾ ಹಾನಿ ಕಾಣಾ ಗುಹೇಶ್ವರಾ ॥ ೨ ॥

ನಾನು ಭಕ್ತನಲ್ಲವಯ್ಯಾ । ನಾನು ಯುಕ್ತನಲ್ಲವಯ್ಯಾ । ನಾನು ಮುಕ್ತನಲ್ಲವಯ್ಯಾ । ನಾನು ಕಪಟ ವೇಷಡಂಬಕನಯ್ಯಾ । ಕೂಡಲಸಂಗಮದೇವಾ ಎನ್ನ ಭಕ್ತಿ ಮಳಲೊಟ್ಟಲು ಎಂಬುದ ನೀವು ತೋರಿದಿರಾಗಿ ಎನಗೆ ಅರಿಯ ಬಂದಿತಯ್ಯಾ ಪ್ರಭುವೇ ॥ ೩ ॥

ಸಜ್ಜನಸನ್ನಿಹಿತವಾದ ಭಕ್ತಿ ಹೊತ್ತಿಗೊಂದು ಪರಿಯುಂಟೆ ಅಯ್ಯಾ । ಒಮ್ಮೆ ಅಹಂಕಾರ ಒಮ್ಮೆ ಕಿಂಕರವೆ । ಮನಕ್ಕೆ ಮನ ಸಾಕ್ಷಿಯಾಗಿ ಮಾಡುವ ಭಕ್ತರಲ್ಲಿ ಗುಹೇಶ್ವರನಿಪ್ಪನಲ್ಲದೆ ಪ್ರಪಂಚಿನೊಳಗಿಲ್ಲ ಕಾಣಾ ಸಂಗನಬಸವಣ್ಣಾ ॥ ೪ ॥

**ಸೂಚನೆ**

ಬಸವ ಮೊದಲಾಗಿರ್ದ ಭಕ್ತರಿ ।
ಗೊಸೆದು ಲಿಂಗದ ಮಾರ್ಗವನು ಬೋ ।
ಧಿಸಿದನೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ ॥

ನಿಷ್ಠೆ ನೆಲಸಿರೆ ಮೊಟ್ಟ[1]ಮೊದಲಲಿ ।
ಯಿಷ್ಟಲಿಂಗದ ಭಕ್ತಿಮಾರ್ಗದ ।
ಶಿಷ್ಟತೆಯ ಶೀಲವನು ಸಕಲಾಗಮದ ಸಾರವನು ॥
ಕಷ್ಟಕರ್ಮಭ್ರಮೆಯ ಕೇಡನು ।
ದೃಷ್ಟ ಜನ್ಮದಲಿರ್ದು ಕಾಬರೆ ।
ಶ್ರೇಷ್ಠ ಭಕ್ತರು ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

---

೧ ಯಿಲಿ ನೆರೆ ನೆಲಸಿ ( ಅ. ) ೨ ದು ( ಉ, ಒ, ಖ, ಚ. )

ಮರುಳುಶಂಕರಗೈಕ್ಯಪದವಿಯ |
ಪರುಟವಿಸಿ ಕೊಟ್ಟೊಲವಿನಿಂದಲಿ |
ಪರಿಮಿತಾಲಯಕೆಯ್ದಿ ಪರಮಾನಂದಲೀಲೆ[೧]ಯಲಿ ||
ಕರುಣ[೨] ಮಿಗೆ[೩] ನಡೆತಂದು[೪] ಬಸವೇ |
ಶ್ವರನು ಮಾಡುವ ಭಕ್ತಿಯುಕ್ತಾ |
ದ[೫]ರಣೆಯನು ಕೈಕೊಳುತಲಿರ್ದನು ಗುರು ಗುಹೇಶ್ವರನು || ೨ ||

ಮಣಿಖಚಿತ ಮಂಗಳದ ಪರುಷದ |
ಕಣಿಯ ಪೀಠದ ಮೇಲೆ ನೆಱೆ ನಿ |
ರ್ಗುಣದ ಸಗುಣದ ನಿರ್ಮಲದ ನಿರ್ವಾಣ ಗುರುವಿರಲು ||
ಎಣಿಸಬಾರದ ಬಹಳ ಭಕ್ತಿಯ |
ಗಣನೆಯಲಿ ಕೈಮುಗಿದು ಮೌಳಿಯ |
ಮಣಿದು ಮಹಿಮಗೆ ಬಸವ ಬಿನ್ನಹ ಮಾಡಲನುಗೆಯ್ದು || ೩ ||

ಕುರುಡ ಕನ್ನಡಿವಿಡಿದ ಮಾಟದ |
ಪರಿಯಲಿದೆ ಶಿವಭಕ್ತಿಯೆಂಬುದು |
ಮರುಳು ಕಂಡಾ ಕನಸಿನಂತಿರೆ ಮಾತಿಗರಿದಾಯ್ತು ||
ಗುರುವೆ ನಾನಿದನಱಿವವೊಲು ವಿ |
ಸ್ತರಿಸಿ ಪೇಳೆಂದೆನುತಲಾ ವರ |
ಗುರು ಗುಹೇ[೬]ಶಗೆ ಬಿನ್ನಹವ ಮಾಡಿದನು ಬಸವಣ್ಣ[೬] || ೪ ||

ಚಾಗು ಭಲರೇ ನೀನಹುದು ನಿಗ |
ಮಾಗಮಂಗಳ ಸ[೭]ತ್ವಸಾರವ |
ನಾಗು ಮಾಡಲು ಬಂದ ಕಾರಣಪುರುಷ ನೀನೆನುತಲ್ ||
ಆಗಳಾ ಪ್ರಶ್ನೆಗೆ ಮನೋಮುದ |
ವಾಗಿ ಮೆಚ್ಚುತಲಲ್ಲಮಪ್ರಭು |
ವಾ ಗುಣಾರ್ಣವ ಬಸವದಂಡಾಧೀಶಗಿಂತೆಂದ || ೫ ||

೧ ಮಹಿಮೆ ( ಅ, ಕ, ಚ. ) ೨ ಹರುಷ ( ಗ. ) ೩ ಣೆಸಿಯೆ ( ಜ. ) ೪ ಯ್ತೆತಂದು ( ಉ, ಜ. ) ೫ ಚ ( ಮ. ) ೬–೬ ಶ್ವರಲಿಂಗನಿಗೆ ಬಿನ್ನೈಸಿದನು ಬಸವ ( ಇ. ) ೭ ತ ( ಇ, ಉ, ಖ, ಗ. ) ೮ ಸಹುದು ( ಜ. )

ಭಾವಿಸಲು ಭಾಸ್ಕರನ ಬಟ್ಟೆಗೆ |
ದೀವಿಗೆಯ ಹಂಗೇಕೆ ತಿಳಿಪೊಡೆ |
ಪಾವಕನ ಪಸಿವಿಂಗೆ ಪಚನಾರಂಭವಿಧಿಯೇಕೆ ||
ಆ ವಿಚಾರತೆಯಂತೆ ನಿನಗಿ |
ನ್ನಾವ ಬೋಧೆಗಳ ಪ್ರಯೋಜನ |
ದೈವಪುರುಷನು ನೀ ಕಣಾ ಬಸವಣ್ಣ ಕೇಳೆಂದ || ೬ ||

ಹರ ಹರಾ ನಾನಾರು ನಿನ್ನಯ |
ಚರಣ[1]ಶರಣರ ಶರಣರೊಳು[1] ಕಿಂ |
ಕರರ ಕಿಂಕರ ನಾನೆಲೈ ಎನಗಿಲ್ಲಿಪರಿಯಂತ ||
ಗುರುವೆ ಭರ ಭಾರವನು ಹೊಱಸಲು |
ಕರುಣವಿಲ್ಲವೆ ನಿನಗೆಯೆನುತಲಿ |
ನಿರುತ ನಿರಹಂಕಾರನಿಧಿ ಬಸವಣ್ಣನಿಂತೆಂದ || ೭ ||

ಬಿತ್ತಿ ಬೆಳೆಯದ ಮುನ್ನ ಮೊಳಕೆಯ |
ಕಿತ್ತು ನೋಡುವರೇ ವೃಥಾ ನಾ |
ನೆತ್ತಲೀ ಸ್ತುತಿಯೆತ್ತ ಶಿವ ಶಿವ ಗುರುವೆ ನೀ ಬಲ್ಲೆ ||
ಚಿತ್ತವಿಸು ಮನ್ಮನದ ಮಧ್ಯದ |
ಕತ್ತಲೆಯ ಕಳೆದಱವಿನರ್ಕನ |
ತೆತ್ತಿಸೆನ್ನೊಳಗೆನುತಲಿರ್ದನು ಬಸವದಂಡೇಶ || ೮ ||

ಸುಧೆಯ ನಿರುಪಮ ರುಚಿಗೆ ಬೇಱೊಂ |
ದಿದಿರ ಸವಿ[2]ಗಲಿಸುವರೆ ಆದರೆ |
ಹದನ ನೀ ಕೇಳಿದರೆ ನಾವದನಲ್ಲವೆನಲೇಕೆ ||
ವಿದಿತ ನಿರಹಂಕಾರಿ ನಿನಗ |
ಲ್ಲದೆ ಬಳಿಕ್ಕಿನ್ನಾರಿಗೈ ಲಿಂ |
ಗದ ಮಹಾ ಸೇವಾನುಭವಸುಖ ಬಸವ ಕೇಳೆಂದ || ೯ ||

---

೧-೧ ಕಮಲವನರ್ಚಿಸುವ ( ಖ. ) ೨ ರುಚಿ ( ಉ. )

ತಿಳಿವೊಡೀ ಮಾಯಕದ ಜನ್ಮಂ |
ಗಳ ಶರೀರಗಳಪ್ರಯೋಜನ |
ಕುಲಗಳಾಗಿಹವಲ್ಲಿ ಮಾನವ ದೇಹವವಱೊಳಗೆ ||
ಸಲುವ ಕರ್ಮಂಗಳಿಗೆ ಕರ್ತನು |
ಗಳಿಸಿ ಕೊಡುವುದು ಪುಣ್ಯ ಪಾಪಂ |
ಗಳನು ಮುಂದಕೆ ಬಸವದಂಡಾಧೀಶ ಕೇಳೆಂದ || ೧೦ ||

ಮನುಜದೇಹಿಗಳಾದರೆಯು ತನು |
ಮನಗಳಲಿ ಪಟುವಾಗಿ ದುರ್ವಾ |
ಸನೆಯ ಬುದ್ಧಿಗೆ ನಿಲುಕದಿಹುದರಿದಾ ಶರೀರದಲಿ ||
ಅನಿತಱೊಳಗೆಚ್ಚತ್ತು ಜನ್ಮದ |
ಜಿನುಗಿಗಾನಿನ್ನಾಱೆನೆಂಬಾ
ಮನುಜನೇ ಕೃತಕೃತ್ಯನಹನೈ ಬಸವ ಕೇಳೆಂದ || ೧೧ ||

ಹಾಲು ಹಯನುಳ್ಳಲ್ಲಿ ಹಬ್ಬವ |
ಹೇಳದೆಯು ಕೇಳದೆಯು ಸವೆವು[1]ದು |
ಗಾಳಿ ಬೀಸುವ ದಿನದಲೇ ತೂಱುವುದು ಹೊಟ್ಟುಗಳ ||
ಕಾಲು ಕೈ ಕಣ್ಣುಗಳು ತನುವಿಹ |
ಕಾಲದಲಿ ಕಾಲನ ನಿವಾರಿಸಿ |
ಮೇಲುಗತಿಯಱಸು[2]ವನೆ ಜಾಣನು ಬಸವ ಕೇಳೆಂದ || ೧೨ ||

ಅದು ನಿಮಿತ್ತದಲಾಗಮಂಗಳ |
ಹೃದಯದಲಿ ಹುರುಳಱಿದು ತನ್ಮಾ |
ರ್ಗದಲಿ ಬುದ್ಧಿಯನಿಕ್ಕಿ ಗುರುಕಾರುಣ್ಯವನು ಪಡೆದು ||
ಮೊದಲು ತನು ಮನ ಧನದ ಮೇಲಣ |
ಮದ ವಿಮೋಹಾದಿಗಳನೆಲ್ಲವ |
ಕೆದಱಿ ಕೆಡಿಸುವನವನೆ ಜಾಣನು ಬಸವ ಕೇಳೆಂದ || ೧೩ ||

೧ ಮಾಳ್ಪ ( ಅ. )  ೨ ರಿವ ( ಕ. )

ಪ್ರಾಣವಿದು ನೋಡೆಂದು ಪ್ರತಿ ಗುರು |
ವಾಣತಿಯನಿ[೧]ದಿರಿಡಲು[೨] ಕಣ್ಣಿಗೆ |
ಕಾಣಿಸುವ ತನ್ನಿಷ್ಟಲಿಂಗವನತಿ ಸವೋಳದಲಿ ||
ಮಾಣದಾಗಳು ಹಿಡಿದು ಹಿಂಗದೆ |
ಕೇಣವಿಲ್ಲದೆ ನಿಂದ ನಿಷ್ಠೆಯು |
ಜಾಣನೇ ಶಿವ[೩]ಭಕ್ತನಹನೈ ಬಸವ ಕೇಳೆಂದ || ೧೪ ||

ಕೈಯ್ಯೊಳಗೆ ಶಿವಲಿಂಗವಿಪ್ಪೊಡೆ |
ಮೆಯ್ಯ ಸೊಂಕಿ[೪]ರಬೇಕು ವಸ್ತ್ರದ |
ಹುಯ್ಯಲಿಗೆ ಹೂ ಪತ್ರಿಗಳ ಜಂಜಡಕೆ ಜೊಂಪಿಸದೆ ||
ಒಯ್ಯನೀಕ್ಷಿಸಿ ತನ್ನಲಿಹ ಮೂ |
ಮೆಯ್ಯ ವಸ್ತ್ರವ ಮಾಡುವನೆ ಜಗ |
ದಯ್ಯನೆನಿಸುವ ಭಕ್ತನಹನೈ ಬಸವ ಕೇಳೆಂದ || ೧೫ ||

ಲಿಂಗದೇವಗೆ ತನ್ನಲಿಹ ಮೂ |
ಋಂಗವೇ ವಸ್ತ್ರಂಗಳಾದೊಡೆ |
ಲಿಂಗ ನೆನಹಿನಲಹುದು ಸಕಲಾರಂಭವನು ಮಱೆದು ||
ಅಂಗಸುಖವನೆ ಬಯಸುವೊಡೆ[೫] ಶಿವ |
ಲಿಂಗ ಪೂಜೆಯ ಮಾಡುತಿಹುದಾ[೬] |
ಲಿಂಗ ಪೂಜೆಯ ಮಾಡುವಂದವ ಬಸವ ಕೇಳೆಂದ || ೧೬ ||

ಕರಣದಲಿ ಸಲೆ ಸಕಲ ಸಚರಾ |
ಚರಚಯಂಗಳ ಮೇಲೆ ಕರಗುವ |
ಕರುಣೆಯಾಗಿಯೆ ಬಳಿಕ ಲಿಂಗಕೆ ಮಜ್ಜನಕ್ಕೆಱೆದು ||
ಪರಮ ಶಾಂತಿಯ ಚಿತ್ತ ತನಗಾ |
ವರಿಸಿದೊಡೆ ಲಿಂಗಕ್ಕೆ ಗಂಧವ |
ನೊರೆಯ ಬಲ್ಲೊಡೆ ಭಕ್ತನಹನೈ ಬಸವ ಕೇಳೆಂದ || ೧೭ ||

---

೧ ಲಿ ( ಇ, ಕ. ) ; ಯೊಳಿ ( ಉ. ) ೨ ಟ್ಟು ( ಇ. ) ೩ ನವನೇ ( ಉ. ) ೪ ಹಂಗಿ ( ಇ. )
೫ ವರು ( ಉ. ) ೬ ಡ ಬೇಹುದು ( ಉ. )

ಕರ್ಮಗಳ ಕಡೆಗಣಿಸಿ ಯುಕ್ತಿಯ |
ವರ್ಮವನು ತಾನಱಿದು ಸಲೆ ಶಿವ |
ಧರ್ಮದಲಿ ನೆಱೆ ನಿಲುವೊಡಕ್ಷತೆಯಿಂದಲರ್ಚಿಪುದು ||
ಕೂರ್ಮೆಯಿಂದಲಿ ತನ್ನ ಬಗೆಯನು |
ನಿರ್ಮಲತೆಯೆನಿಸುವೊಡೆ ಪುಷ್ಪದ |
ವರ್ಮ ಪೂಜೆಯ ಮಾಡಕಲಿವುದು ಬಸವ ಕೇಳೆಂದ || ೧೮ ||

ಒಡಲ ದುರ್ಗುಣಗಣವನೆಲ್ಲವ |
ಸುಡುವೊಡೀವುದು ಧೂಪಧೂಮವ |
ನಿಡಿದ ತನುವಿನ ತಮವನಳಿಯಲು ಬಲ್ಲೊಡರ್ತಿಯಲಿ ||
ಬಿಡದೆ ಬಗೆ ಬಂದನಿತು ದೀಪದ |
ಗಡಣಗಳನೆತ್ತುವುದು ಭಕ್ತಿಯ |
ಬಿಡಗನಱಿವಂಗಿನಿತುಬೇಹುದು ಬಸವ ಕೇಳೆಂದ || ೧೯ ||

ರುಚಿಪದಾರ್ಥವ ಲಿಂಗನೆನಹಿನ |
ರಚನೆಯಲಿ ರಂಜಿಸಿದ ಬೋನವ |
ಶುಚಿತನದಲಾಗೆನಿಸಿ ನೈವೇದ್ಯವನು ಮುಟ್ಟಿಸುತ ||
ಪ್ರಚುರವೆನಿಪಾನಂದಸಹವಾ |
ದುಚಿತದಗ್ಗವಣಿಗಳನಿಂಟಿಸ |
ಲಚಲ ಭಕ್ತಿಯನಱಿವನಾತನು ಬಸವ ಕೇಳೆಂದ || ೨೦ ||

ಬಿಟ್ಟು ಸತ್ವರಜಸ್ತಮೋಗುಣ |
ದೊಟ್ಟಿಲನು ಬಳಿಕಲ್ಲ ಲಿಂಗಕೆ |
ಮುಟ್ಟಿಸುಗೆ[1] ತಾಂಬೂಲವನು ವಿತ್ತಾನುಸಾರದಲಿ ||
ನೆಟ್ಟನೀ ಪರಿ ಲಿಂಗ ನೆನಹೀ[2] |
ಗಟ್ಟಿಯಾದರೆ ಪ್ರಾಣಲಿಂಗದ |
ಬಟ್ಟೆಯನು ಭೇದಿಸುವನಾತನು ಬಸವ ಕೇಳೆಂದ || ೨೧ ||

---

೧ ಕೆ ( ಇ. ) ೨ ಹದು ( ಅ. ) ; ಹಿನ ( ಇ, ಉ, ಕ, ಗ. )

ಪ್ರಾಣವೆಂತಾ ಮೂಱು ತನುವಿನ |
ಕೋಣೆಯೊಳಗಿಪ್ಪಂತೆ ಲಿಂಗಕೆ |
ಮಾಣದೊಂದೊಳವಸ್ತ್ರವಿಮ್ಮೆಯ್ ಸಜ್ಜೆ ಸೇರಿಸಿದ ||
ಕಾಣಿಸುವ ಶಿವದಾರ ಸಹ ನಿ |
ರ್ವಾಣದೊಳಗಳವಡಿ[1]ಸಬಲ್ಲೊಡೆ |
ಜಾಣ ಭಕ್ತಿಯನಱಿವನಾತನು ಬಸವ ಕೇಳೆಂದ || ೨೨ ||

ತಿಳಿವೊಡಾ[2] ಶಿವದಾರ ಸಜ್ಜೆಗ |
ಳಳವಡುವೊಡಾ[2] ಮೂಱು ತನುವಿನ |
ಮಲುಕಿನಂತಿರಲೊಂದಱಿಂದೊಂದೊಂದು ಸಿರಿದಾಗಿ ||
ಲಲಿತ ವಸ್ತ್ರ[4]ತ್ರಯವನೊ[4]ಂದಿಸಿ |
ಬಳಿಕಲವಱೊಳಗಿಷ್ಟಲಿಂಗವ |
ನಿಲಿಸುವ[5]ನೆ ಶಿವಭಕ್ತ[6]ಸಹಸ್ರೈ ಬಸವ[5] ಕೇಳೆಂದ || ೨೩ ||

ಪರಿವಿಡಿಯುಲಿಂತಿಷ್ಟಲಿಂಗವ |
ನಿ[7]ರಿಸಿ ಗಂಟಿರಡೆ[8]ರಡನಿಂ[9]ತಿಂ |
ಪರಿಯಲಿಕ್ಕುವುದೆರಡು ವಸ್ತ್ರಕೆ ಮೇಲು ವಸ್ತ್ರವನು ||
ನಿರುತ ತನ್ನಂಗ[10]ದಲಿ ಬಿಡದವ[10] |
ಧರಿಸಿಕೊಂಡಿರಬಲ್ಲನಾದೊಡೆ |
ಪರಮ ಭಕ್ತಿಯನಱಿವನಾತನು ಬಸವ ಕೇಳೆಂದ || ೨೪ ||

ಮೂಱು ತನುವಿನಲಾ ಷಡು ಸ್ಥಳ |
ತೋಱುವಂತಿರೆ ಮೂಱು ವಸ್ತ್ರವ |
ಬೇಱೆ ಮಾಡದೆ ಬಲಿದ ಬಳಿಕಿ[11]ಡಿಪಾಱುಗಂಟುಗಳು ||
ಮೀಱಿದಳವಡುತಿರ್ದುವಾದೊಡೆ |
ಸಾಱಿ ಶಾಶ್ವತ ಭಕ್ತಿ ನೆಲೆಗೊಂ |
ಡೇಱಿ ತೊಡಗುವುದಾತನಲಿ ಬಸವಣ್ಣ ಕೇಳೆಂದ || ೨೫ ||

---

೧ ವಧರಿ ( ಅ, ಇ, ಒ, ಕ, ಖ, ಚ, ಮು. ) ೨ ವುದೀ ( ಉ. ) ೩ ಪೆದಿರಲ್ ( ಗ. ) ೪-೪ ವ ತನ್ನೊಳೊ ( ಉ. ) ೫-೫ ವನೇ ಭಕ್ತನೈ ಬಸವಣ್ಣ ( ಇ. ) ೬ ಕೃತಕೃತ್ಯ ( ಒ, ಜ. ) ೭ ಧ ( ಚ. ) ೮ ಟುಗಳಿ ( ಅ. ) ; ಟಿಡಲೆ ( ಉ. ) ೯ ಟುಗಳಿಂದಲಿಂ ( ಜ. ) ೧೦-೧೦ ಮೊಳು ಲಿಂಗವ ( ಉ.) ೧೧ ವಿ ( ಇ, ಉ, ಕ. )

ಅಂಗವಿಸಲೀ ಪ್ರಾಣವಿದು ಶಿವ |
ಲಿಂಗಪದಕೆ ತನುತ್ರಯಂಗಳ |
ಸಂಗ್ರಹವೆ ವಸ್ತ್ರತ್ರಯಂಗಳು ಸಲೆ ಷಡು ಸ್ಥಲದ ||
ಇಂಗಿತವಲಾ ಗ್ರಂಥಿಗಳು ವ |
ಸ್ತ್ರಂಗಳಲಿ ಬಲಿದಂಗದಲಿ ನಿಲೆ |
ಲಿಂಗಪದವನು ಕಾಂಬನಾತನು ಬಸವ ಕೇಳೆಂದ || ೨೬ ||

ಲಿಂಗವೇ ಪ್ರಾಣಸ್ವರೂಪೆಂ |
ದಂಗವಿಸಿ ತಾನೋತು ಬಳಿಕಾ |
ಲಿಂಗವನು [1]ಬೇಱಿರಿಸಲಾಗದು ಭಕ್ತಿಭಾವಕರು[1] ||
ಅಂಗಸಂಗ[2]ದಲಗಲದಂತಿರೆ[2] |
ಲಿಂಗ[3]ಧಾರಣವಾದುದಾ[3]ದರೆ |
ಮಂಗಳಾತ್ಮಕನಾತನೇ ಬಸವಣ್ಣ ಕೇಳೆಂದ || ೨೭ ||

ಪ್ರಾಣಲಿಂಗಕೆಯಿಷ್ಟಲಿಂಗದ[4] |
ಕಾಣಿಸಿದ ಷಡು ರುಚಿಯ ದ್ರವ್ಯ |
ಶ್ರೇಣಿಯನು ನೆಱೆ[5] ಲಿಂಗನೆನಹಿನೊಳಿತ್ತು ತನ್ನೊಳಗೆ ||
ಮಾಣದಾ ಸಂತುಷ್ಟಿ ಸೌಖ್ಯ |
ತ್ರಾಣವ[6]ನು ಮಿಗೆ ತೃಪ್ತಿಲಿಂಗಕೆ |
ಜಾಣಿಕೆಯಲೀವವನು ಚದುರ[7]ನು ಬಸವ ಕೇಳೆಂದ || ೨೮ ||

ವರ ಸಮಾಧಿಯಲೊಳಗೆ ಫಲಿ[8]ಸುವ |
ಪರಿಯಲೀ ಗುರುಲಿಂಗಜಂಗಮ |
ಕರುಣಿಸಿದ ಪಾದೋದಕವನಾ ಸುಪ್ರಸಾದವನು ||
ಧರಿಸುತಿರ್ದೊಡೆ ಸತ್ಯ[9]ಭಕ್ತಿಯ |
ಪರುಟವಣೆಗಧಿಕಾರಿಯಾಗಿಯೆ |
[10]ಪರಮ ಪದವಿಯ ಪಡೆವನೈ ಬಸವಣ್ಣ[10] ಕೇಳೆಂದ || ೨೯ ||

---

೧-೧ ತಾ ಹಿಂಗಲಾಗದು ಸಂಗಸಮರಸದಿ ( ಇ. ) ೨-೨ ದಿ ಹಿಂಗದಿರ್ದೊಡೆ ( ಇ. ) ೩-೩ ನೆನಹು ಡು ಗಟ್ಟಿಯಾ ( ಅ. ) ೪ ಕೆ ( ಅ. ) ೫ ಶಿವ ( ಜ. ) ೬ ಶ್ರೇಣಿಯ ( ಇ. ) ೭ ಭಕ್ತ ( ಇ. ) ೮ ಬೆರ ( ಖ. ) ; ಸಲಿ ( ಗ. ) ೯ ಯಚ್ಚ ( ಗ. ) ೧೦-೧೦ ನೆರೆವನೆನ್ನನು ಬಳಿಕಲಾತನು ಬಸವ

ಇಷ್ಟಗುರುವಿಗೆ ತನುವ ಸಲಿಸುತ |
ಲಿಷ್ಟಲಿಂಗಕೆ ಮನವ ಸಲಿಸುತ |
ಲಿಷ್ಟಜಂಗಮಕರ್ಥವನು ಸಲೆ ಸಲಿ[1]ಸ ಕಲಿತಂಗೆ ||
ದೃಷ್ಟವಹ[2] ಗುರುಲಿಂಗಜಂಗಮು |
ಶ್ರೇಷ್ಠವಾಗಿಯೆ ತನ್ನೊಳಗೆಯು |
ತ್ಕೃಷ್ಟವಾಗಿಯೆ ಕಾಣಿಸುವುದೈ ಬಸವ ಕೇಳೆಂದ || ೩೦ ||

ಇದ್ದ ನೆಲೆಗಳವಡುವ ಭಕ್ತಿಯ |
ಶ್ರದ್ಧೆಯಲಿ[3] ವಿತ್ತಾನುಸಾರದ |
ಹೊದ್ದಿಗೆಯನಱಿದಱಿದು ನಿರ್ವಂಚನೆಯನನುಕರಿಸಿ ||
ಬುದ್ಧಿಯಲಿ ತನುಮನದ ತವಕವ |
ತಿದ್ದಿ ತಿಳಿದ[4]ಳವಟ್ಟೊಡಾತನೆ |
ಶುದ್ಧ ಭಕ್ತಿಯನಱಿವನೈ ಬಸವಣ್ಣ ಕೇಳೆಂದ || ೩೧ ||

ದಿಟ ವಿಚಾರಿಸಲಿಷ್ಟಲಿಂಗದ |
ಘಟಣೆಯೆಂಬುದು[5] ಸರ್ವ ಸಂಗವ |
ನಟಮುಟಸಬೇಕಾಗಿಯುಂತರ್ಮಾರ್ಗದೋವರಿಗೆ ||
ಪಟುವೆನಲು ಪತಿಯಾಗಿ ಮಾಯೆಯ |
ನಟಣೆಯನು ನೈ[6]ವಾರಿಸುವ[7] ಸಂ |
ಘಟಕೆ ಸಾಧನವೆನಿಸುವುದು ಬಸವಣ್ಣ ಕೇಳೆಂದ || ೩೨ ||

ಅದು ನಿಮಿತ್ತದಲಿಷ್ಟಲಿಂಗವೆ |
ಮೊದಲು ಬೇಹುದು ನಿತ್ಯ ನಿರ್ಮಲ |
ಪದವ ಪಡೆದಹೆನೆಂಬ ಪಾವನ ಬುದ್ಧಿವಂತಂಗೆ ||
ಹೃದಯದೊಳಗಾ ಪ್ರಾಣಲಿಂಗದ |
ಹದನನಱಿವೊಡೆ ಸಚ್ಚಿದಾನಂ |
ದದಲಿ ನಿಲುವೊಡೆ ಮುಖ್ಯವಿದು ಬಸವಣ್ಣ ಕೇಳೆಂದ || ೩೩ ||

---

೧ ಸವೆ ( ಜ. ) ೨ ದವಿ ( ಇ. ) ೩ ಸಿದ್ಧಿಯನು ( ಉ. ) ೪ ವ ( ಉ. ) ೫ ಬೀ ( ಉ. )
೬ ಕೈ ( ಅ, ಉ, ಗ. ) ೭ ತ ( ಉ. )

ತನ್ನ ತಾನಿಂತಱಿವ ಭಕ್ತಿಯು |
ಬಿನ್ನಣವ ತಾನಱಿಯಲಱಿಯದೆ |
ಭಿನ್ನಭಾವಭ್ರಮೆಯಲೊಂದಾನೊಂದು ಕಲ್ಪನೆಯ ||
ಗನ್ನಗತಕದೊಳಿದ್ದನಾದೊಡೆ[೧] |
ಮುನ್ನಿನಿಂ ಮಿಗಿಲಾಗಿ ಭವದೊಳು |
ಬನ್ನಬಡುತಿಹನಾತನೈ ಬಸವಣ್ಣ ಕೇಳೆಂದ || ೩೪ ||

ಶಿವಯುತರ ಸಂಗವನು ಮಾಡದ |
ಶಿವಯುತರ ಸಂಗತಿಯ ಕೇಳದ |
ಶಿವಯುತರ ಸವಿದೊಕ್ಕುಮಿಕ್ಕುದ ಹಾರಿಕೊಂಡಿರದ ||
ಶಿವಯುತರ ನೆಱೆ ನಂಬಿ ನಚ್ಚದ |
ಶಿವಯುತರ ದಾಸೋಹಿಯಾಗದ |
ಭವವಿಕಾರಿಗೆ ಭಕ್ತಿಯಹುದೇ ಬಸವ ಕೇಳೆಂದ || ೩೫ ||

ಕಾಲನಿಯಮಗಳೆಂಬ ಕರ್ಮದ |
ಕಾಲಸರ್ಪನ ಬಾಯ್ಗೆ ಸಿಕ್ಕುವ |
ಶೀಲ ಶೀಲಗಳೆಂಬ ಶೂಲಕೆ ಸಿಕ್ಕಿ ಸೆಱೆಯಾಗಿ[೨] ||
ಹಾಳು ಸಂಕಲ್ಪವ್ರತಂಗಳ |
ಕಾಳು ಕಿಚ್ಚಿನಲುರಿವುತಿಹ ದು |
ಶ್ಶೀಲವಂತಗೆ ಭಕ್ತಿಯಹುದೇ ಬಸವ ಕೇಳೆಂದ || ೩೬ ||

ವಂದನೆಗೆ ಮೈಗೊಟ್ಟು ನಿಲ್ಲದೆ |
ನಿಂದೆಗೆಡೆಗೊ[೩]ಟ್ಟೋಡಿ ಹೋಗದೆ |
ಬಂದ ತಾಗು ನಿರೋಧದಲಿ ಕಳವಳಿಸಿ ಕಂಗೆಡದೆ ||
ಹಿಂದು ಮುಂದಣ ನೆರವ ಹಾರದೆ |
ನಿಂದ ಧೀರೋದ್ಧಾರ[೪]ಗಲ್ಲದೆ |
ಹಂದೆಗಹುದೇ ಭಕ್ತಿಯೆಂಬುದು ಬಸವ ಕೇಳೆಂದ || ೩೭ ||

೧ ಘಾತಕತನದಲಿರ್ದೊಡೆ ( ಇ, ಮು. ) ೨ ದ ( ಕ, ಚ. ) ೩ ಬಿ ( ಅ. ) ೪ ಬಾತ್ತ ( ಮು. )

ಭುಲ್ಲವಣೆಯಲಿ ಮಾತನಾಡಲಿ |
ಬಲ್ಲೆನೆನುತಲಿಯನುಭವಂಗಳ |
ಸೊಲ್ಲು ಸೊಲ್ಲಿಗೆ ಮತ್ಸರಿಸಿ ಮಿಗೆ ಮತ್ತತನದಿಂದೆ ||
ಹೊಳ್ಳುಗಳೆದನ್ಯರನು ಮಿಗೆ ಮದ |
ದಲ್ಲಿ ಬೆಬ್ಬನೆ ಬೆಱೆತು ಬೀಗುವ |
ಖುಲ್ಲಗಹುದೇ ಭಕ್ತಿಯೆಂಬುದು ಬಸವ ಕೇಳೆಂದ || ೩೮ ||

ಕೋಪದುರಿಯಲಿ ಕೊರಗಿ ದರ್ಪದ |
ತಾಪದಲಿ ಲಯವಾಗಿ ಮತ್ಸರ |
ಕೂಪದಲಿ ಕುಕ್ಕುಱಿಸಿ ಡಂಬಿನ ಸೀಮೆಯಲಿ ಸಿಲುಕಿ ||
ಲೋಪಬುದ್ಧಿಗೆ ಲೋಲನಾಗಿ ಮ |
ಹಾಪರಾಧದಲುಕ್ಕಿ ಸೊಕ್ಕುವ |
ಪಾಪಿಗಹುದೇ ಭಕ್ತಿಯೆಂಬುದು ಬಸವ ಕೇಳೆಂದ || ೩೯ ||

ಹಿಸುಣತೆಯ ಹಿಂಗಿಸಿ ಮನಸ್ಸಿನ |
ಮಸಕವನು ಮಾಣಿಸಿ ವಿಕಾರದ |
ವಿಷಯ ವಿಧಿಗನುರೆ ವಿಸರ್ಜಿಸಿ ಭವಿಯ ಪರಿಹರಿಸಿ ||
ಮುಸುಱ ಮುಕ್ತಿದ ಸಟೆಯ ಸಡಿಲಿಸಿ |
ಸಸಿನೆ ಸತ್ಯದಿ ನಡೆವಗಲ್ಲದೆ |
ಹುಸಿಯ ನುಡಿವಗೆ ಭಕ್ತಿಯಹುದೇ ಬಸವ ಕೇಳೆಂದ || ೪೦ ||

ಹುಟ್ಟಿದೆಡೆಯನು ಹೊ[೧] ಹೊಂದುವ |
ಬಟ್ಟೆಯನು ನೆಱೆ[೨] ಕೆಡಿಸಿ ಕರ್ಮದ |
ಕಟ್ಟಳೆಯನೊಡೆ[೩]ಮೆಟ್ಟಿ ಸಂತತ ಲಿಂಗಸೇವೆಯಲಿ ||
ಮುಟ್ಟಿ ಹಸು ತೃಷೆ ನಿದ್ರೆಯೆಂಬಿವ |
ನಿಟ್ಟೊರಸಿದಾತ ಧೀರಗಲ್ಲದೆ |
ಹೊಟ್ಟೆಹೊರಕಗೆ ಭಕ್ತಿಯಹುದೇ ಬಸವ ಕೇಳೆಂದ || ೪೧ ||

೧ ಕ ( ಉ. ) ೨ ಕೆಡೆ ( ಅ, ಉ, ಒ, ಗ. ) ; ನೆರೆ ( ಚ. ) ೩ ದೆತಿ ( ಉ. )

ಅದು ನಿಮಿತ್ತದಲಿಷ್ಟಲಿಂಗದ |
ಸದಮಲದ ಸೇವಾನುಭಾವನೆ |
ಹೃದಯದಲಿ ನೆಲೆಗೊಂಡು ಬಿಡದಳವಟ್ಟು ಬಲಿದಿರಲು ||
ವಿದಿತವೆನಿಪಾ ಪ್ರಾಣಲಿಂಗದ |
ನಿಧಿಯ[೧]ನಱಿವಂಜನವು ನೇತ್ರಕೆ |
ಹುದುವ[೨]ಹುದೆಲ್ಲೈ ತನಗೆ ತಾನೇ ಬಸವ ಕೇಳೆಂದ || ೪೨ ||

ಹಲವು ಪರಿಯಿಂದೀ ಪ್ರಕಾರದ |
ಲೊಲಿದು ತೋಱುತಿಷ್ಟಲಿಂಗದ |
ಸಲುವ ಮಾರ್ಗ[೩]ಕ್ರಿಯೆಯನಱಿವಂತಿರೆ ನಿರೂಪಿಸಲು ||
ಸಲೆ ಹಸಾದವ ಸಲಿಸಿ ಬಗೆ ಮಿಗೆ |
ತುಳುಕಲಲ್ಲಮಲಿಂಗದೇವಗೆ |
ಬಳಿಕಲೊಯ್ಯನೆ ಬಸವದಂಡಾಧೀಶನಿಂತೆಂದ || ೪೩ ||

ಗುರುವೆ ನೀನೀ ಪೇಳ್ದ ಮಾರ್ಗಾಳಿ |
ಚರಣೆಯನು ಕೇಳಿದೊಡೆ ಸಾಲದೆ |
ಪರಿವಿಡಿಯನಿ[೪]ದನೆಲ್ಲ ಮುಟ್ಟಲಿ ಮಾಡುತಿರಬೇಕು ||
ಪರಿಕಿಸಲು ಸಾವಲ್ಲಿ ಪರಿಯಂ |
ತರವು ಸಾಧನೆ ಮಾಡಿ ಸಮರಕೆ |
ಗರುವನಹ ದಿನವಿನ್ನದಾವುದು ದೇವ[೫] ಹೇಳೆಂದ || ೪೪ ||

ಈಸುವನು[೬]ವನು ಕೇಳಿದರೆ ಮೇ |
ಹೇಸು ದಿನ ತಾ ಕಂಡರೇನ |
ಭ್ಯಾಸಿಯಾಗದೆ ಯಾರು ತೇಲುವ[೭] ತೆಱನ ತಿಳಿವವರು ||
ಗಾಸಿಯಾಗದೆ ತನುಮ[೮]ನದ ಮೇ |
ಲಾಸೆ ಹಿಂಗದೆ ಭಕ್ತಿ ಮಾಡದೆ |
ಹೂಸಿ ಹುಂಡನವೇನು ಫಲವೈ ಬಸವ ಕೇಳೆಂದ || ೪೫ ||

---

೧ ವಿಧವ ( ಉ. ) ೨ ಗಿ ( ಇ, ಜ. ) ೩ ಪರಿಯ ಪೇಳ್ವ ( ಅ. ) ೪ ಲಿ ( ಅ, ಉ, ಒ, ಕ, ಖ.)
೫ ವಾವುದೈ ಗುರುರಾಯ ( ಅ, ಇ. ಜ. ) ೬ ಈ ಸುದಿನ ( ಜ. ) ೭ ನಾನು ಪೇಳಿದ ( ಜ. )
೮ ಧ ( ಕ. )

ಹೊನ್ನಿನೊಳಗೊಂದೊರೆಯು ವಸ್ತ್ರದ |
ಮನ್ನಣೆಯಲೊಂ[೧]ದೆಳೆಯನಥವಾ[೨] |
ಧಾನ್ಯದೊಳಗಣುಮಾತ್ರವೆನಗೆನ್ನವರಿಗಿರಲೆಂದು ||
ದೈನ್ಯತೆಯಲಾ ಜಂಗಮವನತಿ |
ಮನ್ನಿಸದೆ ಮಱೆತಿರ್ದೆನಾದೊಡೆ |
ನಿನ್ನ ಪಾದಕೆ ದೂರನಾನಹೆ ದೇವ ಕೇಳೆಂದ || ೪೬ ||

ಕನಕಗಿರಿ ರಜತಾದ್ರಿ ಹಾಲಿನ |
ವನಧಿ ಸುರಕುಜ ಕಾಮಧೇನುಗ |
ಳಿನಿತು ನಿರುಪಮದಷ್ಟಮಹದೈಶ್ವರ್ಯ ಮೊದಲಾದ ||
ವಿನುತ ವಸ್ತುಗಳೆಲ್ಲವಾ ಲಿಂ |
ಗನವು ಪ್ರಮಥರವಳಟ ಮರುಳೇ[೩] |
ನಿನಗವೆಲ್ಲಿಯವೇನನಿತ್ತೆ ಬಸವ ಕೇಳೆಂದ || ೪೭ ||

ದೇವ ನಾನಾ ಪರಿಗಳಲಿ ಮೇ |
ಣಾವ ಮುಖದಲಿ ಬಂದು ಬೇಡಿದೊ |
ಡೀವೆ ನೀ ದಣಿವಂತೆಯೆನ್ನಯ ಧನವ ತನು ಮನವ ||
ಈ ವಿಚಾರಕೆ ಹುಸಿದೆನಾದೊಡೆ |
ಭಾವಿಸಲು ಬಳಿಕಾನೆ ನಿನ್ನಯ |
ಸೇವೆಗತಿ ದೂರಸ್ಥನೈ ಗುರುರಾಯ ಕೇಳೆಂದ || ೪೮ ||

ಧನವ ಕೊಟ್ಟೆನು ತನುವ ಕೊಟ್ಟೆನು |
ಮನವ ಕೊಟ್ಟೆನು ಕೊಟ್ಟೆನೆಂಬೀ |
ಬಿನುಗು ಬಿಂಕವನಾಡಲಾ ಧನತನುಮನಂಗಳನು ||
ನಿನಗೆ ಕೊಟ್ಟವರಾರು ನೀನಾ |
ರಿ[೪]ನಿತನಱಿಯದೆ ಬಱಿದೆ ನುಡಿವುದು |
ನಿನಗಿದುಚಿತವೆ ಬಸವ ದಂಡಾಧೀಶ ಕೇಳೆಂದ || ೪೯ ||

---

೧ ಬಣ್ಣದೊಳಗೊಂ ( ಇ, ಜ, ಮು. ) ೨ ನಾ ಧನ ( ಅ, ಜ. ) ೩ ಮರುಳೇ | ಇ ( ಇ. ); ನೀಸಿಂ | ತಿ ( ಜ. )

ಅಂತುಕಾರಣವಿದನು ಹವಿಸ್ಮನ |
ಭ್ರಾಂತಿಯನು ಬಱದೆನಿಸಿ ತಾನೋ |
ರಂತೆ ನಿಜ ನಿರ್ಲೇಪ ಭಕ್ತಿ[1]ಯನಱಿಯಬೇಕಾಗಿ[2] ||
ಮುಂತೆ ಕಾಣಿಸುವಿಷ್ಟಲಿಂಗದ |
ಚಿಂತೆಯಲಿ ಚಿ[3]ರಸಾ[4]ಗಿ ತನ್ನಯ |
ಚಿಂತಿತಾರ್ಥವ ಹಡೆಯಬೇಹುದು ಬಸವ ಕೇಳೆಂದ || ೫೦ ||

ದೇವ ಬಿನ್ನಹವಿಷ್ಟಲಿಂಗದ |
ಸೇವೆಯನು ಸಲೆ ಮಾಡುತಿದ್ದರೆ |
ಭಾವಿಸಲು ಶಿವಭಕ್ತನಹ ಪರಿ ಬಳಿಕಲಹುದೆಂದು ||
ನೀವು ಚಿತ್ತೈಸಿದಿರಿ ದಿಟವಿ |
ನ್ನಾವ ಪರಿಯಲಿ ಭಕ್ತಿಯನುವನು |
ತೀವಿ ತಿಳಿವಂತೆನಗೆ ವರ ಗುರುರಾಯ ಹೇಳೆಂದ || ೫೧ ||

ಕುಸುಮ ಸೌರಭವಿಂತುಟೆಂದಾ |
ರುಸುರ ಬಲ್ಲರು ತುಂಬಿಯೊಳು ಭಾ |
ವಿಸಲು ಭಕ್ತಿಯ ಮಾರ್ಗವಂತಿಂತೆಂದು ನಿನ್ನೊಳಗೆ ||
ಬೆಸಸ ಬಲ್ಲವರಿಲ್ಲವೈ ಪರಿ |
ಕಿಸಲು ನೀನೇ ಪರಮ ಪುರುಷನು |
[5]ಬಸವ ಕೇಳೆನುತಲ್ಲಮಪ್ರಭುರಾಯನಿಂತೆಂದ[5] || ೫೨ ||

ಕೇಳಿದೈ ಬಸವಣ್ಣ ಮೊದಲಲಿ |
ಕೋಲುವಿಡಿದಭ್ಯಾಸ ಮಾಡಿಯೆ |
ಮೇಲೆ ರಣರಂಗದಲಿ ಕೈದುವ ಹಿಡಿದು[6] ಹಗೆಗಳನು ||
ಸೋಲಿಸುವನಂತಿಷ್ಟಲಿಂಗದ |
ಕೀಲಣೆಯನಱದಲ್ಲದಾಗದು |
ಹೆ ಳುವೊಡೆ ಶಿವಭಕ್ತಿಯದು ಸಾಮಾನ್ಯವಲ್ಲೆಂದ[7] || ೫೩ ||

---

೧ ವೃತ್ತಿ ( ಇ, ಜ. ) ೨ ಬಗೆಯನನುಕರಿಸಿ ( ಅ, ಜ. ) ೩ ಸ್ಥಿ ( ಉ. ) ೪ ಬೆರಗಾ ( ಇ, ಖ, ಗ, ಜ. ) ೫-೫ ಅಸಮನೇತ್ರನ ಶರಣನಹುದೈ ಬಸವ ಕೇಳೆಂದ ( ಅ. ) ೬ ಕೊಂಡು ( ಜ. ) ೭ ತರವಲ್ಲ ( ಖ, ಜ. )

ಗುರುವೆಯಮೃತವನುಂಡ ಬಳಿಕೇ |
ನರುಚಿಯಱುದಿಂಗಳಿಗೆ ಹೋಹುದೆ |
ನಿರುತ ನಿನ್ನ ಕಟಾಕ್ಷವಿಕ್ಷೇಪಂಗಳೆಮ್ಮೊಳಗೆ ||
ಬೆರಸಿ ಬಳಿಕಿನ್ನೆಲ್ಲಪರಿಯಂ |
ತರವು ಕಾಲಕ್ಷೇಪವನು ವಿ |
ಸ್ತರಿಪ ಕಾರಣವಾವುದೈ ಪ್ರಭುರಾಯ ಹೇಳೆಂದ || ೫೪ ||

ಶಶಿಕಳಾಲಂಕಾರವೆಂತಾ |
ಶಶಿಧರಂಗಳವಟ್ಟುದಂತಾ |
ಶಶಿಕಳಾಮೃತ ಸೇವನಾ ಸದ್ಭಕ್ತಿ ಸಾರಾಯ ||
ಬಸವ ನಿನಗೊಚ್ಚತವಲಾ ಭಾ |
ವಿಸಲು ಬಳಿಕಿನ್ನಾರಿಗಱು ವೇ |
ದಿಸುವುದೇ ಕೇಳೆನುತಲಾ ಪ್ರಭುರಾಯನಿಂತೆಂದ || ೫೫ ||

ನಿನ್ನ ಹೆಸರನು ಕೇಳಿದೊಡೆ ಮೋಕ್ಷ |
ನಿನ್ನ ಮೂರ್ತಿಯ ನೋಡಿ ಕಂಡೊಡೆ |
ನಿನ್ನ ನೆನೆದೊಡೆ ನಿನ್ನ ನೆಱೆದೊಡೆ ನಿನ್ನ ಹೊಗಳಿದೊಡೆ ||
ನಿನ್ನ ಭಜಿಸಿದೊಡವರು ಭಕ್ತಿಯ |
ಬಿನ್ನಣವನಱಿದೈಕ್ಯರಹರೆನೆ |
ನಿನ್ನ ಮಹಿಮೆಯನೇನನೆಂಬೆನು ಬಸವ ಕೇಳೆಂದ || ೫೬ ||

ಹುಸಿವುದೇ ಕೈ ಲಿಲನ ಹೊಯ್ದರೆ |
ಹುಸಿವುದೇ ಕಣೆ ಗಿರಿಯನೆಚ್ಚೊಡೆ |
ಹುಸಿವುದೇ ಕೇಳೆನ್ನನಱಿದಿಹೆನೆಂಬ ನಿನ್ನಱಿವು ||
ಹುಸಿಯಲಱಿವುದೆ ನಿನ್ನ ಕಾರಣ |
ವಸುಮತಿಗೆ ನೀ ಬಂದೆಯದಱಿಂ |
ಹುಸಿಯ ಮಾಯೆಯ ಹುಸಿಸಿ ತೋಱುವೆ ಬಸವ ಕೇಳೆಂದ || ೫೭ ||

---

೧ ನಿ ( ಅ, ಇ, ಒ, ಗ, ಜ. ) ೨ ಭಾವಿಸ ( ಅ, ಉ. ) ೩ ರೈ ( ಉ, ಕ, ಗ. ) ೪ ಯದು ( ಇ, ಖ. ) ೫ ನಿ ( ಇ, ಉ, ಚ ) ೬ ನಾ ( ಇ, ಉ, ಚ. )

ಈ ತೆಱದೊಳ್[೧]ಱ[೨]ದಿಷ್ಟಲಿಂಗ |
ಪ್ರೀತಿಮಾರ್ಗಾಚಾರವನು ವಿ |
ಖ್ಯಾತಿಯುತ[೩] ಬಸವಣ್ಣ ಮೊದಲಾದಖಿಳ ಭಕ್ತರಿಗೆ ||
ಓತು ನಿಯಮಿಸಿ ನಿರ್ವಿಕಾರದ |
ನೀತಿ ನಿಶ್ಚಯ ಭಕ್ತಿಮಾರ್ಗದ |
ರೀತಿದಾಯಕನೊಪ್ಪುತಿರ್ದನು ಗುರು ಗುಹೇಶ್ವರನು || ೫೮ ||

**ಅಂತು ಗತಿ ೧೬ಕ್ಕಂ ಪದ ೭೨೯ ಕ್ಕಂ ಮಂಗಳಂ**

---

೧ ನನ ( ಅ, ಒ, ಗ, ಚ, ಜ. ) ೨ ಳೊಲಿ ( ಉ, ಖ. ) ; ನನೊಲಿ ( ಕ. ) ೩ ತನಹ ( ಜ. )

# ಮಹಾದೇವಿಯಕ್ಕನಿಗೆ ಪ್ರಭು ಪ್ರಸನ್ನವಾದ ಗತಿ

**ವಚನ**

ಅಂಗವಿಕಾರಸಂಗವ ಮರೆದು ಲಿಂಗವನೊಡಗೂಡುತಿಪ್ಪವರ ತೋರಾ ಎನಗೆ । ಕಾಮವಿಕಾರಕತ್ತಲೆ ಯಳಿದು ಭಕ್ತಿಯೇ ಪ್ರಾಣವಾಗಿಪ್ಪವರ ತೋರಾ ಎನಗೆ । ತ್ರಿಕರಣಶುದ್ಧವಾಗಿ ನಿಮ್ಮ ನೆರೆ ನಂಬಿದ ಸದ್ಭಕ್ತರ ತೋರಾ ಎನಗೆ ಚೆನ್ನಮಲ್ಲಿಕಾರ್ಜುನಾ ॥ ೧ ॥

ಕಲ್ಯಾಣವೆಂಬುದಿನ್ನಾರಿಗು ಹೊಗಬಾರದು । ಅಸಾಧ್ಯವಯ್ಯಾ । ಆಸೆ ಆಮಿಷವನಳಿದಂಗಲ್ಲದೆ ಕಲ್ಯಾಣ ದತ್ತಲಡಿಯಿಡಬಾರದು । ಒಳಗು ಹೊರಗು ಶುದ್ಧವಾದಂಗಲ್ಲದೆ ಕಲ್ಯಾಣವ ಹೊಗಬಾರದು । ನೀನೆಂಬು ದನರಿದು ನಾನೆಂಬುದ ಮರೆದು ತಾನು ತಾನಾದಂಗಲ್ಲದೆ ಕಲ್ಯಾಣವ ಹೊಕ್ಕು ಬೆರಸಬಾರದು । ಲಜ್ಜೆಗೆ ಟ್ಟಿನಲಾ ಸತಿಬೇಟಕ್ಕೊಲಿದು । ನಾನಾವುದನು ಅರಿಯೆನಾಗಿ ಚೆನ್ನಮಲ್ಲಿಕಾರ್ಜುನನ ಧರ್ಮದಿಂದ ನಾನು ಕಲ್ಯಾಣವ ಕಂಡೆನು ॥ ೨ ॥

ಗಿರಿಯೊಳು ವನದೊಳು ಗಿಡಗಿಡದತ್ತ ದೇವ ಎನ್ನ ದೇವ ಬಾರಯ್ಯಾ ತೋರಯ್ಯಾ ನಿಮ್ಮ ಕರುಣವನೆಂದು ನಾನು ಅರಸುತ್ತ ಅಳಲುತ್ತ ಕಾಣದೆ ಸುಯಿದು ಬಂದು ಕಂಡೆ ಶರಣರ ಸಂಗದಿಂದ । ಅರಸಿ ಹಿಡಿದೇ ನೆಂದು ನೀನಡಗುವ ಠಾವ ಹೇಳಾ ಚೆನ್ನಮಲ್ಲಿಕಾರ್ಜುನಾ ॥ ೩ ॥

ಅರಸಿ ತೊಳಲಿದರಿಲ್ಲ । ಹರಸಿ ಬಳಲಿದರಿಲ್ಲ । ಬಯಸಿ ಹೊಕ್ಕರಿಲ್ಲ । ತಪಸ್ಸು ಮಾಡಿದರಿಲ್ಲ । ಅದು ತನ್ನ ತಾನಹ ಕಾಲಕಲ್ಲದೆ ಸಾಧ್ಯವಾಗದು । ಶಿವನೊಲಿವಲ್ಲದೆ ಆಗದು । ಚೆನ್ನಮಲ್ಲಿಕಾರ್ಜುನನೆನಗೊಲಿ ದನಾಗಿ ನಾನು ಸಂಗನಬಸವಣ್ಣನ ಶ್ರೀಪಾದವ ಕಂಡು ಬದುಕಿದೆನಯ್ಯಾ ॥ ೪ ॥

ಅಯ್ಯಾ ನಿಮ್ಮ ಸದ್ಭಕ್ತರ ಕಂಡೆನಾಗಿ ಎನ್ನ ಕಂಗಳ ಪಟಲ ಹರಿಯಿತ್ತು । ಅಯ್ಯಾ ನಿಮ್ಮ ಸಜ್ಜನ ಸದ್ಭಕ್ತರ ಶ್ರೀಚರಣಕ್ಕೆರಗಿದೆನಾಗಿ ಎನ್ನ ಹಣೆಯ ಲಿಖಿತ ತೊಡೆಯಿತ್ತು । ಚೆನ್ನಮಲ್ಲಿಕಾರ್ಜುನದೇವಾ ನಿಮ್ಮ ಶರಣ ಸಂಗನಬಸವಣ್ಣನ ಕಂಡು ಮಿಗೆ ಮಿಗೆ ನಮೋ ನಮೋ ಎನುತಿರ್ದೆನಯ್ಯಾ ॥ ೫ ॥

ಕಾಯದ ಲಜ್ಜೆಯ ಕಲ್ಪಿತವಳಿದು ಜೀವದ ಲಜ್ಜೆಯ ಮೋಹವನಳಿದು ಮನದ ಲಜ್ಜೆಯ ನೆನಹು ಸುಟ್ಟು ಭಾವದ ಕೂಟ ಬತ್ತಲೆ ಎಂದರಿದು ತವಕದ ಸ್ನೇಹ ವ್ಯವಹಾರಕ್ಕೆ ಪೋಗದ ಕೂಡಲಸಂಗ ಮದೇವರಲ್ಲಿ ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲುವು ನೋಡಾ ಪ್ರಭುವೇ ॥ ೬ ॥

ರೂಪಿಲ್ಲದವಂಗೆ ಒಲಿದವರಿಗೆ ತನುವಿನ ಹಂಗುಂಟೇ । ಮನವಿಲ್ಲದವಂಗೆ ಮಚ್ಚಿದವರಿಗೆ ಅಭಿಮಾನದ ಹಂಗುಂಟೇ । ದಿಗಂಬರಗೊಲಿದವರಿಗೆ ಕೌಪೀನದ ಹಂಗುಂಟೇ ಕೂಡಲಸಂಗಮದೇವಯ್ಯಾ । ಮಹಾ ದೇವಿಯಕ್ಕನೆಂಬ ಭಕ್ತೆಯ ರೂಪಿಂಗೆ ಆವ ಹೋಲ್ಕೆಯುವಿಲ್ಲಾ ಪ್ರಭುವೇ ॥ ೭ ॥

ಉನ್ಮದ ಯೌವನವನೊಳಕೊಂಡ ಸತಿ ನೀನು । ಇತ್ತಲೇಕೆ ಬಂದೆ ಹೇಳವ್ವಾ । ಸತಿಯೆಂದರೆ ಮುನಿ ವರು ನಮ್ಮ ಶರಣರು । ನಿನ್ನ ಪತಿಯ ಕುರುಹು ಹೇಳಿದರೆ ಬಂದು ಕುಳ್ಳಿರು ಅಲ್ಲದಿರ್ದರೆ ತೊಲಗು ತಾಯೇ । ಗುಹೇಶ್ವರ ಶರಣರಲ್ಲಿ ಲಿಂಗದ ಸಂಗಸುಖವ ಬಯಸುವರೆ ನಿನ್ನ ಪತಿಯ ಕುರುಹು ಹೇಳಾ ಎಲೆ ಅವ್ವಾ ॥ ೮ ॥

ಗುರುವೆ ತೆತ್ತಿಗನಾದ । ಲಿಂಗವೇ ಮದವಣಿಗನಾದ । ನಾನು ಮದವಣಗಿತ್ತಿಯಾದೆನು । ಈ ಭುವನವೆಲ್ಲ ವರಿಯಲು ಅಸಂಖ್ಯಾತರು ಎನಗೆ ತಾಯಿತಂದೆಗಳಾಗೆ ಕೊಟ್ಟರು ಎನಗೆ ಸಾದೃಶ್ಯಮಪ್ಪ ವರನ ನೋಡಿ। ಇದುಕಾರಣ ಚೆನ್ನಮಲ್ಲಿಕಾರ್ಜುನ ಗಂಡನಾದ ಬಳಿಕ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧ ವಿಲ್ಲವಯ್ಯಾ ॥ ೯ ॥

ಸಾವಿಲ್ಲದ ಸಹಜಂಗೆ ರೂಹಿಲ್ಲದ ಚೆಲುವಂಗೆ ಭವವಿಲ್ಲದ ಅಭವಂಗೆ ನಿಶ್ಚಯದ ನಿಶ್ಚಲಗೆ ನಾನೊಲಿದೆ ನಯ್ಯಾ । ಚೆನ್ನಮಲ್ಲಿಕಾರ್ಜುನಂಗೊಲಿದ ಕಾರಣ ಮಿಕ್ಕಿನವರಾರು ಸಂಬಂಧವಿಲ್ಲವಯ್ಯಾ ॥ ೧೦ ॥

ರೂಪಿಂಗೆ ಕೇಡುಂಟು ನಿರೂಪಿಂಗೆ ಕೇಡಿಲ್ಲ ರೂಪು ನಿರೂಪಿನೊಳೊಡಗೂಡುವ ಪರಿಯೆಂತು ಹೇಳಾ । ಸಂಬಂಧ ಅಸಂಬಂಧವಾಗಿದೆ । ಪಂಚೇಂದ್ರಿಯವೆಂಬ ಜಾತಿಸೂತಕವಿರಲು ಗುಹೇಶ್ವರಲಿಂಗವ ಮುಟ್ಟ ಬಾರದು ಕೇಳವ್ವಾ ॥ ೧೧ ॥

ಎನ್ನ ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದನುಂಡು । ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆನೆನೆದು । ಎನ್ನ ಕಂಗಳು ಶುದ್ಧವಾಯಿತ್ತು ಇಂದು ಸಕಲ ಶಿವಗಣಂಗಳ ಮುಖವ ನೋಡಿ। ಎನ್ನ ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತನೆಯ ಕೇಳಿ । ಎನ್ನ ಭಾವನೆ ಎನಗಿದು ಜೀವನವು ಕೇಳಾ ಲಿಂಗತಂದೇ । ನೆಟ್ಟನೆ ನಿಮ್ಮ ಪೂಜಿಸಿ ಭವಗೆಟ್ಟೆನು ಕಾಣಾ ಚೆನ್ನಮಲ್ಲಿಕಾರ್ಜುನಾ ॥ ೧೨ ॥

ಲಿಂಗಸುಖಸಂಗದಲ್ಲಿ ಮನ ವೇದ್ಯವಾಯಿತ್ತು । ಇನ್ನೆಂತಯ್ಯಾ ಎನಗೆ ನಿಮ್ಮಲ್ಲಿ ನಿರವಯವು । ಇನ್ನೆ ಲ್ಲಿಯದಯ್ಯಾ ನಿಮ್ಮಲ್ಲಿ ಕೂಡುವದು । ಪರಮಸುಖಪರಿಣಾಮ ಮೀರಿದಪ್ಪಿ ನಾನು ನಿಜವನೈದುವ ಠಾವ ಹೇಳಾ ಚೆನ್ನಮಲ್ಲಿಕಾರ್ಜುನನ ಪ್ರಭುವೇ ॥ ೧೩ ॥

ಕದಳಿಯ ಬನ ಹೊಕ್ಕು ಹೊಲಬು ತಿಳಿಯದನ್ನಕ್ಕ ಬಯಲ ಗಾಳಿಯ ಹಿಡಿದು ಗಟ್ಟಿಮಾಡದನ್ನಕ್ಕ ಬರಿದೆ ಬಹುದೇ ಶಿವಜ್ಞಾನ । ಅರಿಷಡ್ವರ್ಗವಳಿಯದನ್ನಕ್ಕ ಬರಿದೆ ಬಹುದೇ । ಅಷ್ಟಮದವ ನಷ್ಟಮಾ ಡದನ್ನಕ್ಕ ಬರಿದೆ ಬಹುದೇ। ಮದ ಮತ್ಸರ ಮಾಡಲಿಲ್ಲ । ಹೊದಕುಳಿಗೊಳಲಿಲ್ಲ । ಗುಹೇಶ್ವರಲಿಂಗ ಕಲ್ಪಿತದೊಳಗಿಲ್ಲ ॥ ೧೪ ॥

ನೀನು ನಾನೆಂಬುಭಯಸಂಗವಳಿದು ತಾನು ತಾನಾದ ತ್ರಿಕೂಟವೆಂಬ ಮಹಾಗಿರಿಯ ಮೆಟ್ಟಿ ತುಟ್ಟ ತುದಿಯಲಿ ನೋಡಲು ಬಟ್ಟಬಯಲು ಕಾಣಬಹುದು ನೋಡಾ । ಆ ಬಟ್ಟಬಯಲ ಬೆರಸುವರೆ ಶ್ರೀಗಿರಿ ಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ । ಆ ಕದಳಿಯ ತಿಳದಲ್ಲಿ ಒಳಹೊಕ್ಕು ನೋಡಲು ತೊಳಗಿ ಬೆಳಗುವ ಜ್ಯೋತಿಯುಂಟು ನೋಡಾ । ನಡೆಯಲ್ಲಿಗೆ ತಾಯೇ ಗುಹೇಶ್ವರಲಿಂಗದಲ್ಲಿ ಪರಮ ಪದವು ನಿನಗೆ ಸಯವಪ್ಪುದು ನೋಡಾ ॥ ೧೫ ॥

**ಸೂಚನೆ**

ಶರಣರಱಿಯಲು ಪ್ರಾಣಲಿಂಗಾ ।
ಚರಣೆಯಲಿ ಮಹದೇವಿಯಕ್ಕಗೆ ।
ಕರುಣಿಸಿಯೆ ಕಳುಹಿದನು ನಮ್ಮಯ ಗುರು ಗುಹೇಶ್ವರನು ॥

ಇಷ್ಟಲಿಂಗದ ಮಾರ್ಗದಲಿ ಸಂ |
ತುಷ್ಟರಾಗಿ ಶಿವಾನುಭಾವದ |
ಗೋಷ್ಟಿಯನು ಸಲೆ ಕೇಳಿ ಕೇಳಿ ಮನೋನುರಾಗದಲಿ ||
ದುಷ್ಟ ದುರ್ವಾಸನೆಯ ನೀಗಿ ವಿ |
ಶಿಷ್ಟವೆನಿಪಾ ಪ್ರಾಣಲಿಂಗದ |
ನಿಷ್ಠರಪ್ಪರು ತಿಳಿವುದೀ ಪ್ರಭುಲಿಂಗಲೀಲೆಯಲಿ || ೧ ||

ಗುರುವನಱಸುವೆನೆಂದು ತಿಱ್ರನೆ |
ತಿರುಗಿದಳು ಗಿರಿಗಹ್ವರಂಗಳ |
ಗುರುವನಱಸುವೆನೆಂದು ತೊಟ್ಟನೆ ತೊಳಲಿದಳು ಧರೆಯ ||
ಗುರುವನಱಸುವೆನೆಂದು ಕಾಯವ |
ಕರಗುತಿರ್ದಳು ಕಾತರಿಸಿ ಸ |
ದ್ಗುರುವನಱಸುವ ವೇಧೆಯಲಿ ಮೆಱೆದಳು ಮಹಾದೇವಿ || ೨ ||

ಹೊಂಪುಳಿಯ ಘನಸೌಖ್ಯ ಮಿಕ್ಕಳಿ |
ಗಂಪುಗಳ[೧]ಲಿಲ್ಲೆನುತ ತನ್ನೊಳು |
ಜೊಂಪಿಸುವ ಮನವೆಂಬ[೧] ತುಂಬಿಯ ಭಾವ ಮಿಗೆ ತುಂಬಿ ||
ಸಂಪಿಗೆಯ ಸಾ[೨]ರ್ವಂತೆ ಬಂದಳ |
ಲಂಪಿನಲಿ ಮಹದೇವಿ ಮುಕ್ತಿಯ[೩] |
ಸೊಂಪು ಶೋಭಿಸುವಲ್ಲಮಪ್ರಭುರಾಯನಿದ್ದೆಡೆಗೆ || ೩ ||

[೪]ಅಱಲುಗೊಂಡವನಿದಿರ[೪]ಲ[೫]ಮೃತದ |
ತೊಱೆಯನೇ ಕಂಡಂತೆ ಕುರುಡಗೆ |
ಮೆಱೆ[೬]ವ ಕೂದಲ[೬] ಕೂಪವೆಲ್ಲವು ಕಂಗಳಾ[೭]ದಂತೆ ||
ನೆಱೆ ನಿರಂತರ ನಿರ್ವಿಕಾರದ |
ನಿಱೆಗೆಯಮಲಜ್ಞಾನವನು ಕ |
ಣ್ದೆಱಸುವಾ ಪ್ರಭುರಾಯನನು ಕಂಡಳು ಮಹಾದೇವಿ || ೪ ||

---

೧-೧ ಪೂವಿಂದೆ ಪೂರಿಸಿ | ಹೊಂಪು ಹೊದರಿಸದೆನುತ ( ಕ. ) ೨ ಸಾ ( ಕ, ಜ. ) ೩ ಯರಿವಿನ
೪-೪ ಅರತ ತೃಷೆ ತರುಗಿರಿಯ ( ಗ. ) ೫ ಡಿರ್ದವರಿಗ ( ಇ. ) ೬ ಸುರಿವ ರೋಮವದ ( ಇ. )
೭ ಕಾಣ ಬಂ ( ಒ. )

ನೋಡಿ ಕಂಡಳು ವೇದ[1]ತತಿ ವೈ |
ನೀಡಿವರೆ ಕೈ ನಿಲುಕದಾತನ |
ಹಾಡಿ ಹೊಗಳುತಲೊಡಲನೀಡಾಡಿದಳು ಚರಣದಲಿ ||
ಕೂಡೆ ಶರಣೆನೆ ಶಿವಗಣಕೆ[2] ಕೈ |
ಗೂಡಿ ಶರಣೆಂದೆನುತ ಭಕ್ತಿಯ |
ಗೂಡು ತಾನೆಂಬಂತೆ ಕಾಣಿಸಿದಳು ಮಹಾದೇವಿ || ೫ ||

ಬಸವ ನೋಡಾ ಭಕ್ತಿ ಬೇಟದ |
ಬೆಸನದಲಿ ವೈಮಱೆತು ಲಜ್ಜೆಯ |
ಹೆಸರ ಹೆಮ್ಮೆಯ ಕೆಡಿಸಿ ತನುಮೋಹವನು ಪಲ್ಲಟಿಸಿ ||
ಹಸು ತೃಷೆಯ ಹರವರಿಗಳನು ಭಂ |
[3]ಗಿಸಿ ದಿಗಂಬರೆಯಾಗಿ ಮಿಗೆ[3] ಕಾ |
ಣಿಸುವ ಮಹದೇವಿಯರನೆನುತಾ ಪ್ರಭು ನಿರೀಕ್ಷಿಸಿದ || ೬ ||

ಬತ್ತಲೆಯ ಬಗೆಗೊಂಡು ಹೆಂಗೂ |
ಸಿತ್ತಲೇತಕೆ ಬಂದೆ ಕಾಮದ |
ಕತ್ತಲೆಯ ಕಳೆಯದೆ ವೃಥಾ ವೈರಾಗ್ಯವೇಷದಲಿ ||
ಹತ್ತಿರಿದ್ದರೆ ನಮ್ಮ ಶರಣರು |
ಚಿತ್ತದಲಿ ಕೆರಳುವರು ಕೇಳೆನು |
ತೊತ್ತಿ ನೋಡಿದನಾಕೆಯಂತಸ್ಥವನು[4] ಪ್ರಭುರಾಯ || ೭ ||

ಜಗಭರಿತಗೊಲಿದವಳಿಗುಡಿಗೆಯ |
ತೊಗಲ[5]ದೇತಕೆ ತನುಮನಂಗಳ |
ನಗಲದೀಶಂಗಿತ್ತೆನಗೆ ಸತಿಕಾಮವೆಂದೆಂಬ ||
ಬಗೆಯದೇತಕೆಯೆನ್ನ ಕಂಡರೆ |
ಭುಗಿಲಿಡಲದೇಕಯ್ಯ[6] ಶರಣರ[7] |
ಮಿಗಿಲು ನುಡಿಗಾನಮ್ಮನೆನುತಿರ್ದಳು ಮಹಾದೇವಿ || ೮ ||

---

೧ ದೇವ ( ಕ. ) ೨ ಭಕ್ತರಿಗೆ ( ಗ. ) ೩–೩ ಗಿಸುತ ಮಿಗೆ ಗಂಭೀರತೆಯ ( ಉ. ) ೪ ತಃಕರಣ ( ಇ. ) ೫ ಬಗೆಯ ( ಗ. ) ; ತೆಗಹ ( ಜ, ಮು. ) ೬ ಲನಲ್ಲದೆ ಗೆಯ್ಯೆ ( ಇ. ) ; ಲಿಡಲದೇಕಕ್ಕೆ ( ಉ. ) ೭ ರು ( ಇ. )

ಕಾಣಿಸುತ ನೀನಿ[೧]ದ್ದು ನೆಟ್ಟನೆ |
ಕಾಣಬಾರದ ಶಿವನನೊಲಿಸುವ |
ಜಾಣತನವೆಂತವ್ವ[೨] ವಾ[೩]ಗದ್ವೈತಭಕ್ತಿಯುಲಿ ||
ಕೇಣಿಕಾಱರು ನೀವು ನಿಮ್ಮೊಳು |
ಹೂಣಿಸಲು ಹುರುಳಿಲ್ಲವೆನುತಲಿ |
ಮಾಣದಾಕೆಯ ಮತ್ತೆ ಜಱಿದನು ನಗುತ ಪ್ರಭುರಾಯ || ೯ ||

ರೂಪುವಿಡಿದಿರ್ದಲ್ಲದೆಂ[೪]ತು ನಿ |
ರೂಪ ಬೇ[೫]ರಸುವ ಭೇದವಱಿವೊಡೆ |
ರೂಪಿನೊಳಗೆ ನಿರೂಪು ತಿಳಿಯೆ ನಿರೂಪಿನೊಳು ರೂಪು ||
ಈ ಪರಿಯುನೊಂದೊಂದನಗಲದೆ[೬] |
ವ್ಯಾಪಿಸಿಹವೆಂದಱಿದು ನಾನಾ |
ರೂಪನನು ನೆಲೆಗೊಂಡೆನೆಂದಳು ಮತ್ತೆ ಮಹದೇವಿ || ೧೦ ||

ಹಾಲಿನೊಳು ನೆಱೆ[೭] ತುಪ್ಪವಿಪ್ಪುದ |
ಹೇಳಿದರೆ ಹಱಿಯುದು ತದಂಗದ |
ಕೀಲನಱಿಯದೆ ಬಱಿಯ ನುಡಿಯುಲಿ ಬಸುಱು ತುಂಬುವುದೆ ||
ಕಾಳು ಮಾತು ನಿರೂಪು ರೂಪಿನ |
ಮೇಳವಿಲ್ಲದ ಮಹಿಮನಲಿ ಸಂ |
ಮೇಳ ನಿನಗೆಂತಾದುದೌ ಮಹದೇವಿ ಹೇಳೆಂದ || ೧೧ ||

ಸಾರೆಯುಲಿ ಶಿವ[೮]ಸಂಗವೆಂದೇ |
ಹಾರವಿಸಿಕೊಂಡಿದ್ದೆನಂತದ |
ದೂರ[೯]ದೂರವದೆಂದು ನೀನೇ ಹೆದಱಿಸಿದೊಡೆನಗೆ ||
ಆರು ಕರುಣಿಸಿ ಕಾಣಿಸುವರೆನ |
ಗಾರು ಗತಿಮತಿಯೆನುತ ಕರುಣಾ |
ಕಾರಗಾ ಮಹದೇವಿ ಬಿನ್ನೈಸಿದಳು ಭಕ್ತಿಯಲ್ || ೧೨ ||

---

೧ ನಿಂದಿ ( ಕ. ) ೨ ತಹುದು ( ಜ. ) ೩ ವೇನವ್ವ ನಿಮ ( ಗ. ) ೪ ಚಲವೆಂ ( ಉ. ) ೫ ವ ( ಜ. ) ೬ ದು ತನ್ನೊಳು ( ಪ. ) ೭ ನಿಜ ( ಒ, ಜ. ) ; ತಿಳಿ ( ಗ. ) ೮ ಶಿವಪಥ ( ಗ. ) ೯-೯ ವೆಂದೇ ನೀವೆ ಹೆದರಿಸಿ ನುಡಿದೊಡಿನ್ನೆಮಗೆ || ಆರು ಕರುಣಿಸುವವರು ಗತಿ ಮತಿ | ಯಾರು ಎನ್ನಯ ಭವದ ಬಳ್ಳಿಯ | ನಾರು ಹರಿವವರವರೆ ಗುರುವೆಂದಳು ಮಹಾದೇವಿ ( ಇ. )

ಆರು ನನ್ನನು ತಿಳಿವವೆನುತಲಿ |
ಸಾರೆಯೆಂದಿದಿರಿಟ್ಟು ನೋಡಲು |
ದೂರವಾಗಿಹೆನಲ್ಲದಿರ್ದೊಡೆ ದೂರವೆಂದೆನಲು ||
ಸಾರೆಯಾಗಿಹೆನೀ ಪರಿಯನಿದ |
ನಾರಿಗುಪಮಿಸಬಹುದು ಭಕ್ತಿ ವಿ |
ಚಾರವನು ಬಸವಣ್ಣನಲಿ ಮಹದೇವಿ ಕೇಳೆಂದ || ೧೩ ||

ಎನ್ನ ಜೀವ ಬಸವಣ್ಣನೆನಗಾ |
ಚೆನ್ನಬಸವನೆ ಗುರುವೆಲೈ ದಿಟ |
ವೆನ್ನ ಲಿಂಗವೆ ನೀನು ಜಂಗಮವೆನಗೆ ರಾಮಯ್ಯ ||
ಎನ್ನ ತನುವೇ ಮಡಿವಳನು ನಾ |
ನಿನ್ನು ಸುಖಿಯಹುದೇನು ಸೋಜಿಗ |
ನಿನ್ನ ದಾಸರ ದಾಸಿಯಾನೆಂದಳು ಮಹಾದೇವಿ || ೧೪ ||

ಲೋಕದೊಳು ಸತಿಜನ್ಮವನು ತಾ |
ಸ್ವೀಕರಿಸಿ ತನು ಮೋಹ ಲೋಭವ |
ನೂಕಿ ನಿಸ್ಪೃಹೆಯಾಗಿ ನಿಲುವವರಾರು ಸೃಷ್ಟಿಯಲಿ ||
ಈಕೆಗಾರೆಣೆ ಶಿವ ಶಿವಾ ಎನು |
ತಾಕೆಯನು ಬಸವಣ್ಣ ಮುಖ್ಯರ |
ನೇಕ ಪರಿಯಲಿ ಹೊಗಳುತಿರ್ದರು ಶರಣು ಶರಣೆನುತ || ೧೫ ||

ಕರಣಗಳು ಸಲೆ ಶುದ್ಧವಾದುವು |
ಶರಣರನು ನೆನೆನೆನೆದು ಸಂತತ |
ಶರಣರಿಗೆ ಶರಣೆಂದು ಕಾಯ ಪುನೀತಮಯವಾಯ್ತು ||
ಶರಣರಿಂದಾನಿಂದು ಶುಚಿಯಾ |
ಗಿರಲು ತನುಮನಗಳ ವಿಕಾರದ |
ಭರಕೆ ನಾನಂಜುವೆನೆಯೆಂದಳು ಮತ್ತೆ ಮಹದೇವಿ || ೧೬ ||

---

೧ ಬಳಿ | ಕೆ ( ಅ, ಒ, ಜ, ಮು. ) ೨ ಧರಣಿ ( ಇ. ) ೩ ಸುಖಿ ( ಕ, ಗ. )

ಇಂತು ನಿರಹಂಕಾರದಿಂದೊ |
ರಂತೆ ಕಾಯಮನೋವಿಕಾರದ |
ಸಂತತಿಯ ಸ್ಯೈತಿಟ್ಟು ಪರಿಪಾಕಪ್ರ[1]ಭಾವ[2]ದಲಿ ||
ಸಂತಗೊಂಡು ಸಮಸ್ತಭಾವ |
ಭ್ರಾಂತಿಯಳಿದೊಮ್ಮುಖವನೈದಿ ನಿ |
ರಂತರದಲತಿ ಮೆಱೆ[3]ವುತಿರ್ದಳು ಮತ್ತೆ ಮಹದೇವಿ || ೧೭ ||

ನರೆ ತೆರೆಗಳಿಡಿದಡರಿ[4] ತನು ಜ |
ರ್ಜರಿತವಾಗಿಯನೇಕ ದಿನದಲಿ |
ಹಿರಿಯು[4]ರೆಂದೆನಿಸಿದರೆ ಹಿರಿಯರೆ[4] ಬೆಟ್ಟದಂದದಲಿ ||
ಹಿರಿದು ದಿನವಿರೆ ಹಿರಿಯರಹರೇ |
ನಿರುತ ನಿರಹಂಕಾರವಿಲ್ಲದೆ |
ಹಿರಿಯತನ ಮಹದೇವಿಗಾಯಿತ್ತೆಂದುದಭವಗಣ || ೧೮ ||

ಬಳಿಕಲಾಕೆಯ ಚಿತ್ತವತಿ[5] ನಿ |
ರ್ಮಳತೆಯಾದುದನಱಿದು ತಾ ತ |
ನ್ನೊಳಗೆ ಸಂತೋಷಿಸುತೆ ಹೋ ಮಝು ಮಾಯೆ ಎಂದೆನುತ ||
ತಿಳಿಯಬೇಕೆಂದೆನ್ನ ಕಾರಣ |
ತೊಳಲಿ ಬಳಲಿದಳಿನ್ನು ಕರುಣಿಸಿ |
ನಿಲಿಸಬೇಕೆಂದಲ್ಲಮಪ್ರಭುರಾಯನಿಂತೆಂದ || ೧೯ ||

ಆಯತವನಳವಡಿಸಿ ದಿಟವಾ |
ಸ್ವಾಯತವನವಗಯಿಸಬೇಕೆಂ |
ಬಾಯತಕೆ ಸರ್ವಾಂಗವನು ಸಲೆ ಸವೆದರಾರುಂಟು ||
ಬಾಯ ನುಡಿಗಳ ಚದುರರಲ್ಲದೆ |
ಕಾಯದಲಿ ಕಲಿ ಯಾರು ಭಕ್ತಿಯ |
ದಾ[6]ಯ ನಿನ್ನಲಿ ನೆಲಸಿತೌ ಮಹದೇವಿ ಕೇಳೆಂದ || ೨೦ ||

---

೧ ಕೈಕ ( ಇ. ) ೨ ವಾಹ ( ಜ. ) ೩ ಕಿರಿದ ( ಇ. ) ; ಸಿ ( ಗ. ) ೪–೪ ರೆನಿಸಿಯೆಕೊಂಡು ಬೆಳೆದಿರೆ ( ಗ. ) ೫ ದಲಿ ( ಇ, ಕ. ) ೬ ಕಾ ( ಉ. )

ಹಾಲ ಹಸದಲಿ ಹೆಪ್ಪನೆಱೆದರೆ |
ಮೇಲೆ ತುಪ್ಪವನುಂಬರಾ ಪರಿ |
ಹೇಳಬಲ್ಲೊಡೆ ನಿನ್ನ ನಿರ್ಮಳ ಭಾವಭೂಮಿಯಲಿ ||
ಲೀಲೆ ಮಿಗೆ ಶಿವತತ್ವ ಬೀಜವ |
ಹೂಳಿದರೆ ಫಲಿಸುವುದೆನುತ ಕರು |
ಣಾಳು ವರ ಗುರುರಾಯನಾ ಮಹದೇವಿಗಿಂತೆಂದ || ೨೧ ||

ಆನು ನೀನೆಂಬುಭಯದನುಸಂ |
ಧಾನವನು ಮಿಗೆ ಮೀ[1]ಱಿ ಸಮ ಸಂ |
ಸ್ಥಾ[2]ನದಲಿ ಸುಯಿಧಾನಿಯಾಗಿ ನಿರಾಳದಲಿ ನಿಂದು ||
ಜ್ಞಾನ ಜ್ಯೋತಿಯು ಬೆಳಗಿ ಕಾಯದ |
ನೂನ ಕದಳಿಯು ಗೆಲಿ[3]ದು ನಿನ್ನಲಿ |
ನೀನೆ ಮುಕ್ತಿಯನಱಿ[4]ವುದೌ ಮಹದೇವಿ ಕೇಳೆಂದ || ೨೨ ||

ಎನುತಲಾ ಮಹದೇವಿಯಕ್ಕಗೆ |
ತನುಮನೋವಾಯುಗಳ ಸಂಚವ |
ನನಲನಲಿ ಸಲೆ ಸುಡುವ ಸುಮತಿ[5]ಯ ಜೀವಪರಮರನು ||
ಅನುಗೊಳಿಸಿ ನಿರ್ವಯಲ ಮಾ[6]ಡುವ |
ನೆನಹಿನುಪದೇಶವನು ಮಾಡಿದ |
ನನುಪಮೋಪಮ ಸಗುಣ ನಿರ್ಗುಣ ಗುರು ಗುಹೇಶ್ವರನು || ೨೩ ||

ಪರುಷ ಮುಟ್ಟಲು ಮುಂದೆ ಕಬ್ಬಿನ |
ವರುಷದಲಿ ಹೊನ್ನಹುದೆ ನಿಮಿಷಕೆ |
ಗುರುನಿರೂಪಜ್ಞಾನ[7] ಜ್ಯೋತಿಪ್ರಭೆ ಪ್ರಕಾಶಿ[8]ಸಲು ||
ಹರಿದುದಾಗಳೆ ಸಂದ[9] ಸಂಶಯ |
ನೆರವಿಗತ್ತಲೆ ನಿತ್ಯ[10] ನಿರ್ಮಳ |
ಗಿರಿಯ ಗಹನಕೆ ಗಮಿಸಿದಳು ಮಹದೇವಿ ಮನದೊಳಗೆ || ೨೪ ||

---

೧ ತೋ ( ಉ. ) ೨ ಧಾ ( ಉ. ) ೩ ತಿಳಿ ( ಕ. ) ೪ ಪಡೆ ( ಡ. ) ೫ ಸಮತೆ ( ಇ, ಉ. )
೬ ಕೊ ( ಇ. ) ೭ ವಿನಪ್ಪಣೆಯಿಂದೆ ( ಜ. ) ೮ ವಿಕಾಸಿ ( ಅ, ಖ, ಗ, ಚ. ) ; ವಿರಾಜಿ ( ಇ, ಜ. )
೯ ಮನದ ( ಗ. ) ೧೦ ನೀಗಿ ( ಇ. )

ಎಲ್ಲರಲಿ ಶರಣಾರ್ಥಿಯೆಂದೆನು |
ತೆಲ್ಲರಲಿ ಹರಕೆಯನು ಕೈಕೊಳು |
ತೆಲ್ಲ ಶರಣರ ಚರಣವನು ನೆನಹಿನಲಿ ನೆಲೆಗೊಂಡು ||
ಬುಲ್ಲವಿಸಿ ಮೈ ಮಣಿ[1]ದು ಪಸರಿಸಿ |
ಪಲ್ಲವಿಸಿ ಮಹದೇವಿ ಬಳಿಕೆ |
ಮ್ಮಲ್ಲಮಪ್ರಭುರಾಯನನು ಬೀಳ್ಕೊಂಡಳರ್ತಿಯಲಿ || ೨೫ ||

ನಡೆದು ಬಳಿಕೇಕಾಂತವಾಸದೊ |
ಳಿಡಿದ ಕಾಯದ ಕದಳಿಯನು ಹೊ |
ಕ್ಕಡರಿ[2] ನಿಜ ಸಿರಿಗಿರಿಯ ಶಿಖರದ ಸಿದ್ಧಪೀಠದಲಿ ||
ಬಿಡದೆ ನೆಲಸಿದಳಚಲ ಪದವಿಯ[3] |
ಪಡೆದಳಾ ಮಹದೇವಿ ಸುಖದಲಿ[4] |
ಪೊಡವಿಯಱಿಯಲು ಗುರು ಗುಹೇಶ್ವರಲಿಂಗ ಲೀಲೆ[5]ಯಲಿ || ೨೬ ||

**ಅಂತು ಗತಿ ೧೭ಕ್ಕಂ ಪದ ೭೫೫ಕ್ಕಂ ಮಂಗಳಂ**

---

೧ ಮರೆ ( ಇ, ಉ. ) ೨ ಗಿ ( ಉ. ) ೩ ದಲಿ ( ಇ. ) ೪ ವನು ( ಇ. ) ೫ ನೊಲುಮೆ ( ಗ. )

# ಸಾಧಕಾಂಗದ ಗತಿ

## ವಚನ

ಸಂಬಂಧ ಸಂಬಂಧವೆಂದು ಹೆಸರಿಟ್ಟುಕೊಂಡು ನುಡಿವಿರಿ । ಸಂಬಂಧವಾವುದು ಬಲ್ಲರೆ ಹೇಳಿರೇ । ಕಾಯ ಜೀವ ಪ್ರಾಣ ಈ ತ್ರಿವಿಧಸಂಬಂಧವನರಿದಡೆ ಗುಹೇಶ್ವರಲಿಂಗದಲ್ಲಿ ಆತನೇ ಸಂಬಂಧಿ ॥ ೧ ॥

ಒಳಗೆ ತೊಳೆಯಲರಿಯದೆ ಹೊರಗನೆ ತೊಳೆದು ಕುಡಿವುತಿರ್ದರಲ್ಲಾ । ಪಾದೋದಕ ಪ್ರಸಾದವನರಿಯದೆ ಭವಬಂಧನದಲ್ಲಿ ಮುಳುಗುತ್ತಿಹರು ಗುಹೇಶ್ವರಾ ॥ ೨ ॥

ಆಧಾರದಲ್ಲಿ ಅಜನೆಂಬ ಸ್ವಾಯತ ಸ್ವಾಧಿಷ್ಠಾನದಲ್ಲಿ ವಿಷ್ಣುವೆಂಬ ಸ್ವಾಯತ ಮಣಿಪೂರಕದಲ್ಲಿ ರುದ್ರನೆಂಬ ಸ್ವಾಯತ ಅನಾಹತದಲ್ಲಿ ಈಶ್ವರನೆಂಬ ಸ್ವಾಯತ ವಿಶುದ್ಧಿಯಲ್ಲಿ ಸದಾಶಿವನೆಂಬ ಸ್ವಾಯತ ಆಜ್ಞಾಚಕ್ರದಲ್ಲಿ ಶಾಂತ್ಯತೀತ ಗುಹೇಶ್ವರಲಿಂಗದಲ್ಲಿ ವ್ಯೋಮ ವ್ಯೋಮವ ಕೂಡಿದಂತೆ ॥ ೩ ॥

ಊರಕ್ಕಿ ಊರೆಣ್ಣೆ ಉಣ್ಣು ಮಾರಿಕವ್ವಾ ತಾಯೆ ಬಾರೇ ಕುಮಾರನ ತಲೆಗಾಯಿ ಎಂಬಂತೆ ಕಾಡ ಹೂವಿನಲಿ ಕಲ್ಲಲಿಂಗಪೂಜೆಯ ಮಾಡುವ ಭವಿಯ ಭಕ್ತನೆಂಬರು ನೋಡಾ । ಹಾಗಲ್ಲ । ತನ್ನ ತನುವೇ ಲಿಂಗ ಮನವೇ ಪುಷ್ಪವಾಗಿ ಪೂಜೆಯ ಮಾಡುವಾತನೇ ಸದ್ಭಕ್ತ ಕಾಣಾ ಗುಹೇಶ್ವರಾ ॥ ೪ ॥

ಇಷ್ಟಲಿಂಗವೇ ಪ್ರಾಣಲಿಂಗವೆಂದು ನುಡಿವ ಮಿಟ್ಟೆಯ ಭಂಡರು ನೀವು ಕೇಳಿರಯ್ಯಾ । ಇಷ್ಟಲಿಂಗವನು ಕಾಯವನು ಮೆಟ್ಟಿ ಹೂಳುವಲ್ಲಿ ಬಿಟ್ಟು ಹೋಹ ಪ್ರಾಣಕಿನ್ನಾವುದು ಲಿಂಗ ಹೇಳಾ ಗುಹೇಶ್ವರಾ ॥ ೫ ॥

ಅಸ್ಥಿಗೆ ಚರ್ಮವಾಧಾರವಾಗೆ ಪ್ರಾಣಕ್ಕೆ ಪ್ರಸಾದವೇ ಮೃತ್ತಿಕೆಯಾಗೆ ಇದು ಪ್ರಾಣಲಿಂಗಸಂಬಂಧವಲ್ಲ ನಿಲ್ಲಿ ಭೋ । ಪ್ರಾಣಲಿಂಗಸಂಬಂಧವೆಂಬುದು ಕರ ಕಷ್ಟ ನೋಡಾ । ಒಡೆದ ಮಡಿಕೆಗೆ ಒತ್ತಿ ಮಣ್ಣು ಮೆತ್ತಿದರೆ ಅದು ತರಹರವಾಗಬಲ್ಲುದೇ ಗುಹೇಶ್ವರಾ ॥ ೬ ॥

ಪ್ರಾಣಲಿಂಗವೆಂಬ ಶಬುದಕ್ಕೆ ನಾಚಿತ್ತು ನಾಚಿತ್ತು ಎನ್ನ ಮನ । ಪ್ರಾಣ ಹೋದರೆ ಕಾಯ ಬಿದ್ದರೆ ಲಿಂಗ ಒಂದೆಸೆಯಾದರೆ ನಾಚಿತ್ತು ನಾಚಿತ್ತು ಎನ್ನ ಮನ । ಪ್ರಾಣಲಿಂಗಸಂಬಂಧಿ ಗುಹೇಶ್ವರಾ ನಿಮ್ಮ ಶರಣನು ॥ ೭ ॥

ಸುತ್ತಿ ಸುತ್ತಿ ಬಂದಡಿಲ್ಲ । ಲಕ್ಷ ಗಂಗೆಯ ಮಿಂದಡಿಲ್ಲ । ತುಟ್ಟತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ । ಸುತ್ತಿ ಸುಳಿವ ಮನವ ಚಿತ್ತದಲಿ ಸಂತೈಸಬಲ್ಲಡೆ ಬಟ್ಟಬಯಲು ಕಾಣಾ ಗುಹೇಶ್ವರಾ ॥ ೮ ॥

ಒಕ್ಕುದ ಮಿಕ್ಕುದನುಂಬ ನಿಚ್ಚ ಪ್ರಸಾದಿಗಳು ನೀವು ಕೇಳಿರೋ । ಒಕ್ಕು ಹೋವುದಾವುದು ಬಲ್ಲರೆ ನೀವು ಹೇಳಿರೋ । ಒಕ್ಕು ಹೋವುದೇ ಕಾಯ ಮಿಕ್ಕು ಹೋವುದೇ ಪ್ರಾಣ ಇವು ತಕ್ಕುವೆಂದರಿದು ಸಿಕ್ಕಿಸಿಕೊಳಬಲ್ಲಡೆ ಸಿಕ್ಕದಾದ ಕಾಣಾ ನಮ್ಮ ಗುಹೇಶ್ವರಾ ॥ ೯ ॥

ಕಾಲನ ಕೊಂದಾತನಲ್ಲದೆ ಶುದ್ಧಪ್ರಸಾದಿಯಲ್ಲ । ಕಾಮನ ತಿಂದಾತನಲ್ಲದೆ ಸಿದ್ಧಪ್ರಸಾದಿಯಲ್ಲ । ತ್ರಿಪುರವ ಸುಟ್ಟಾತನಲ್ಲದೆ ಪ್ರಸಿದ್ಧಪ್ರಸಾದಿಯಲ್ಲ । ಕೆಸರಲ್ಲಿ ಕಿಚ್ಚನಿಕ್ಕಿ ಬಸುರ ಬಡಿದುಕೊಂಡಾತಗಲ್ಲದೆ ಈ ತ್ರಿವಿಧ ಪ್ರಸಾದವಿಲ್ಲ ಕಾಣಾ ಗುಹೇಶ್ವರಾ ॥ ೧೦ ॥

ಅಚ್ಚಪ್ರಸಾದಿಗಳು ನಿಚ್ಚಪ್ರಸಾದಿಗಳು ಎಂಬಿರಿ । ನಿಚ್ಚಕ್ಕೆ ನಾವು ಹುಸಿಗಳ ಕಂಡೆವಲ್ಲಾ । ವಾಯು ಬೀಸುವಲ್ಲಿ ಆಕಾಶ ಬಲಿವಲ್ಲಿ ಲಿಂಗಾರ್ಪಿತಮುಖವನರಿಯರಲ್ಲಾ । ಭೋಜನವನುಂಡು ಭಾಜನವ ಮಿಕ್ಕಿಟ್ಟು ಹೋಹ ಹಿರಿಯರಿಗೆ ಅವೇ ಭಂಗ ಗುಹೇಶ್ವರಾ ॥ ೧೧ ॥

ತನು ಹೊರಗಿರಲು ಪ್ರಸಾದ ಒಳಗಿರಲು ಏಸೆಂಬೆನಯ್ಯಾ । ನಿಮ್ಮ ಮನಕ್ಕೆ ಮನ ನಾಚದು । ಪ್ರಾಣಲಿಂಗದಲ್ಲಿ ಪ್ರಸಾದವ ಕೊಂಡರೆ ವ್ರತಕ್ಕೆ ಭಂಗ ಕಾಣಾ ಗುಹೇಶ್ವರಾ ॥ ೧೨ ॥

ತಲೆಯುಲಟ್ಟುಣಲೊಲ್ಲದೆ ಒಲೆಯುಲಟ್ಟುಂಬರೇ । ಒಲೆಯುಲಟ್ಟುಂಡು ಒಡಲ ತುಂಬಿದರೆ ಹೊಗೆಯು ಘನವಾಯಿತ್ತು । ಇದು ಕಂಡಾದರೆಯೂ ಹೇಸಿ ಬಿಡಬೇಡವೇ ಗುಹೇಶ್ವರಾ ॥ ೧೩ ॥

ವಚನ

ಬಸವರಾಜಗೆ ಸಾಧಕಾಂಗದ ।
ಬೆಸುಗೆಯನುವಿನ ಭೇದವನು ಬೋ ।
ಧಿಸಿದನೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ ॥

ಆರು [1]ಮೊದಲಲಿ[2] ಭಕ್ತಿ[1] ಮಾರ್ಗದ ।
ದಾರಿಯನು ಸಲೆ ತೆಱಹು ಮಾಡಿ ಮ ।
ನೋರಥವ ಹಡೆವವರು ಕಾಯದ ಕೀಲನಱಿವವರು ॥
ಕಾರಣಾಂಗಳ ಮೂಲವನು ಕ ।
ಣ್ಣಾರೆ ಕಾಬ ಮಹಾಂತ[3]ರುಗಳವ ।
ಧಾರಿಪುದು ಮುದದಿಂದಲೀ ಪ್ರಭುಲಿಂಗ ಲೀಲೆಯನು ॥ ೧ ॥

೧-೧ ಭಕ್ತಿಯ ಜ್ಞಾನ ( ಜ. ) ೨ ಕೆಲವರು ( ಗ. ) ೩ ಹಾತ್ಮ ( ಅ, ಉ, ಗ, ಜ, ಮ. )

ನಿಲಿಸಿ ನಿರ್ವಯಲಿನ ಸಮಾಧಿಯ |
ನಳವಡಿಸಿ ಮಹದೇವಿಯಕ್ಕನ |
ಕಳುಹಿ ತದನಂತರದಲಗ್ಗದ ಬಸವರಾಜಂಗೆ ||
ತಿಳುಹುವೆನು ಶಿವತತ್ವಭಕ್ತಿಯ |
ಬಳಕೆಯನುಭಾವದ ವಿವೇಕ |
ಸ್ಥಲವನೆಂದೆನುತಲ್ಲಮಪ್ರಭುರಾಯನಿಂತೆಂದ || ೨ ||

ಒಸೆದು ತಾ ಹಿಡಿದಿಷ್ಟಲಿಂಗದ |
ಬೆಸನದಲಿ ಗುರುಲಿಂಗಜಂಗಮ |
ವಶದಲಿಂತಿರುತಿರಲಿಕಂತಃಕರಣವೃತ್ತಿಗಳ ||
ಬೆಸುಗೆ ಬಿಡುವುದು ಪ್ರಾಣಲಿಂಗದ |
ದೆಸೆಗೆ ಮನವೆಳಸುವುದು ಮಾಯೆಯ |
ಮಸಕವೆಲ್ಲವು[೧] ಮಾದು ಹೋಹುದು ಬಸವ ಕೇಳೆಂದ || ೩ ||

ದೇವ ಚಿತ್ತೈಸಾದೊಡಾನಿ |
ನ್ನಾವ ಪರಿಯಲಿ ಭಕ್ತಿಭರಸಂ |
ಭಾವಿಯಹೆನ್ನೈ ಸಹಜಭಕ್ತಿಯನಱಿವ ಪರಿಯೆಂತು ||
ಈ ವಿಕಾರವ ಕಳೆದು ಕಾಯ ಕ |
ಳಾವಿಳಾಸವ ತಿಳಿದು ನಿಖಿಲ ನಿ |
ರಾವಲಂಬವನೆಂತು[೨] ಕಾಂಬೆನು ಗುರುವೆ ಹೇಳೆಂದ || ೪ ||

ಉಣ್ಣೆ ಕೆಚ್ಚಲಲೇಸುದಿನವಿ |
ದ್ದಣ್ಣೆವಾಲುಣಬಲ್ಲುದೇ ಕೇ |
[೩]ನ್ನ ಭಕ್ತಿದ್ವಾರವನು ಹುಗದನ್ಯಮಾರ್ಗದಲಿ ||
ಕಣ್ಣುಗಾಣದೆ ನಡೆದರದಱಲಿ[೪] |
[೪]ನೆಶ್ನನಱಿವುದು ಹುಸಿ ಕಣಾ ಬಸ |
ವಣ್ಣ ಕೇಳೆನುತಲ್ಲಮಪ್ರಭುರಾಯನಿಂತೆಂದ[೫] || ೫ ||

---

೧ ವದು ತಾ ( ಉ. ) ೨ ದು ( ಅ, ಉ, ಮ. ) ; ನನೆಂದು ( ಕ. ) ೩ ವ ಮನುಜರು ( ಜ. )
೪-೪ ಮುನ್ನಿನಿಂ ಮಿಗಿಲಾಗಿ ಭವದಲಿ | ಬನ್ನ ಬಡುತಿಹನಾತನೈ ಬಸವಣ್ಣ ಕೇಳೆಂದ ( ಖ. ) ೫ ದೊ
ಡೀ ಪರಿ | ಯೆ ( ಉ. )

ಗಿಡುವಳುಕೆ ಹೂ ಪತ್ರೆಗೋಸುಗ |
ಮಡು ನಡುಗ[1]ಂಸುಗ್ಗವಣಿಗೋಸುಗ |
ಮು[2]ಡಿದುವುಪಹಾರಕ್ಕೆ ಸಕಲೌಷಧಿ ವನಸ್ಪತಿಯ ||
ಕೆಡಿಸುತೀ ಪರಿ ಹೆಱರುಗಳ ತ |
ನ್ನೊಡಲ ವಂಚಿಸಿ ಬಾಹ್ಯಭಕ್ತಿಯ |
ನಡೆವವರ ನಾ ಮೆಚ್ಚೆನೈ ಬಸವಣ್ಣ ಕೇಳೆಂದ || ೬ ||

ತೇಗು ಬಿಕ್ಕಳು ಸೀನು ಉದುಗರ |
ವಾಗಳಿಕೆಯಾಲಸ್ಯ ಕೆಮ್ಮುಗ |
ಳೋಗಡಿಕೆ ಮದ ನಿದ್ರೆ ತೂಕಡು ಕನಸು ಕಳವಳಿಕೆ ||
ಱಗು ಹೋಗೆಂದೆಂಬ ಗೊಡವೆಯ |
ನೀಗಿ ನಮ್ಮಯ ಸಿದ್ಧರಾಮನ |
ಲಾಗಿನಂತಿರಬೇಕು ಭಕ್ತರು ಬಸವ ಕೇಳೆಂದ || ೭ ||

ಉಸುರುಗರಗಸದಲ್ಲಿ ತನುವಿನ |
ಬೆಸುಗೆಯನು ಬಿಡುಮಾಡಿ ಬಿಸುಡದೆ
ಹಸುತೃಷೆಯ ಹರಿಹುಗಿಲಿನು[3]ಪಟಳಕಂಜಿ ಮುಖಗೊಡದೆ ||
ದಶವಿಧೇಂದ್ರಿಯ ದಾಳಿಯಲಿ ಶಂ |
ಕಿಸದೆ ನಿಲುವೊಡೆ[4] ಸಿದ್ಧರಾಮನ |
ದೆಸೆಯ ನೆನೆಯಲು ಭಕ್ತರಹರೈ ಬಸವ ಕೇಳೆಂದ || ೮ ||

ದೇವ ದೇವ ಮಹಾಪ್ರಸಾದವಿ |
ದಾವ ಶಬ್ದವ ಚಿತ್ತವಿಸಿದಿರಿ |
ನೀವು ನಿಮ್ಮಯ ಕಿಂಕರರೊಳಿನ್ನಾರ ಹೋಲುವೆನು ||
ದೇವ ನೀ ಮನ್ನಿಸಿದೊಡಧಮನೆ |
ಪಾವನಾತ್ಮಕನಲ್ಲದೊಡೆ ಜಡ |
ಜೀವರಿಂದತಿಕಷ್ಟವೆಂದನು ಸಿದ್ಧರಾಮಯ್ಯ || ೯ ||

---

೧ ವಳುಕೆ ( ಇ, ಖ, ಗ, ಮು. ) ೨ ಹಿ ( ಉ. ) ೩ ರವರಿಗಳು ( ಉ. ) ೪ ನಮ್ಮಯ ( ಉ. )

ಪರಮ ಪೂರ್ವಾಚಾರ್ಯ ಬಸವೇ |
ಶ್ವರನು ಘನ ಗುರು ಚೆನ್ನಬಸವನು |
ನಿರುಪಮಜ್ಞಾನೈಕ[೧]ನಿಧಿ ಮಡಿವಾಳ ಮಾಚಯ್ಯ ||
ವರ ಮಹಾಗಣ ತಿಂತಿಣಿ[೨]ಯೊಳನಿ |
ಬರೊಳು ಗಣಿಸುವೊಡಾನದೇಸ[೨]ಱ |
ಹುರುಳು ಹೇಳಾ ದೇವ ಎಂದನು ಸಿದ್ಧರಾಮಯ್ಯ || ೧೦ ||

ಪೂತು ಮಝುರೇ ಸಿದ್ಧರಾಮನ |
ಮಾತು ತಪ್ಪದು ಭಕ್ತರುಪಮಾ |
ತೀತರಹುದೈ ಬಸವ ಮಡಿವಳ ಚೆನ್ನಬಸವಣ್ಣ ||
ಈತಗಳು ಸಾಕ್ಷಾತ ಲೋಕ |
ಖ್ಯಾತಪುರುಷರು ಸತ್ಯವೆನುತ ಪು |
ರಾತರನು ಮಿಗೆ ಹೊಗಳುತಾ ಪ್ರಭುರಾಯನಿಂತೆಂದ || ೧೧ ||

ಆದಿಪುರುಷನು ಬಸವರಾಜನ |
ನಾದಿಪುರುಷನು ಬಸವರಾಜನು |
ನಾದ ಪುರುಷನು ಬಸವರಾಜನು ಬಸವರಾಜನನು ||
ವೇದಶಾಸ್ತ್ರಗಳಱಸಕಲಱಯದೆ |
ಹೋದುವೆನುತಲಿ ಬಸವರಾಜನ |
ನೆಯ್ದೆ ಹೊಗಳುತಲಲ್ಲಮಪ್ರಭುರಾಯನಿಂತೆಂದ || ೧೨ ||

ಆದೊಡಾಲಿಸಿ ಕೇಳು ಭಕ್ತಿಯ |
ಹಾದಿಗೊಂದೇ ಕೀಲು ದಿಟ ಬೇ |
ಕಾ[೪]ದುದೀ ತನು [೫]ತನುವಿಡಿದು ಕಾಬುದು ಸಮಸ್ತ[೪]ವನು ||
ಆದರಿಸಿಯೀ ತನುವ ಲಿಂಗೋ |
ಪಾಧಿಯ[೩]ಲಿ ಜೋಗೈಸಿಕೊಳುತಲಿ |
ಸಾಧಿಸುವುದು ಸಮಾಧಿಯನು ಬಸವಣ್ಣ ಕೇಳೆಂದ || ೧೩ ||

---

೧ ಮಾನಂದ್ಯೈಕ್ಯ ( ಜ. ); ಕ್ಯ ( ಗ. ) ೨-೨ ಯನಿ | ಭರ್ಗರದೊಳಗೆ ಗಣಿಸುವೊಡದೇತ ( ಇ. ) ೩ ರಿಯ ( ಕ. ) ೪-೪ ದೊಡೀ ತನುವಿಡಿದು ಕಾಂಬುದು ಸರ್ವವೆಲ್ಲ ( ಇ. ) ೫-೪ ವಿಡಿದು ಕಾಂಬುದು ಸುಖಸಮಸ್ತ ( ಜ. )

ಅನುಶ್ರವಣ ಮನನದ ನಿಧಿಧ್ಯಾ |
ಸನದಲೊಚ್ಚತನಾಗಿ ತನ್ಮಯ |
ತನುಮನೋವಾಕ್ಕಾಯಕರ್ಮಗಳೊ[೧]ಂದು ಹುರಿಯಾಗಿ ||
ನೆನಹು ನೆಲೆಗೊಂಡಾ ಮಹಾತ್ಮಗೆ
ಘನವದಾವುದು ಗಮಿಸಿದರೆಯಾ |
ತನೆ ಕಣಾ ಸ್ವಾತಂತ್ರಭಕ್ತನು ಬಸವ ಕೇಳೆಂದ || ೧೪ ||

ತನ್ನೊಳಗೆ ಗುರುಲಿಂಗಜಂಗವು |
ತನ್ನೊಳಗೆ ಪಾದೋದಕಾಮೃತ |
ತನ್ನೊಳಗೆ ಪರಮಪ್ರಸಾದ ಸಮಸ್ತವೆಲ್ಲವನು ||
ತನ್ನೊಳಱಿಯದೆಯಿದಿರೊಳಱಸುವ |
ಭಿನ್ನ ಭಾವಭ್ರಾಂತಭವಿಗಳು |
ನನ್ನ ಸಾಧಿಸಲಱಿಯರ್ಕೈ[೨] ಬಸವಣ್ಣ ಕೇಳೆಂದ || ೧೫ ||

ಅದು ನಿಮಿತ್ತದಲಂತರಂಗದ |
ಪದರ[೩]ದೊಳು ಗುರುಲಿಂಗಜಂಗವು |
ದೊದವನಾ[೪] ಪಾದೋದಕಾಮೃತ[೫] ಸುಪ್ರಸಾದವನು ||
ಹೃದಯುದಲಿ ಕಾಂಬನ್ನಬರ ತ |
ವ್ಮಿದಿಱನಲಿ ಪೂಜಿಪರಲ್ಲೈ ಪ್ರತಿ |
ನಿಧಿಯ ನಿಯಮಿಸಿ ಪೂರ್ವಪುರುಷರು ಬಸವ ಕೇಳೆಂದ || ೧೬ ||

ವ್ಯಾಧಿಗಳ ನೆಱ[೬] ಗೆಲಿದು ಶೀತೋ |
ಷ್ಣಾದಿಗಳ ಪರಿಹರಿಸಿ ತಾಗು ನಿ[೭] |
ರೋಧವೆಲ್ಲವ ನೀಗಿ ನಿಂದಾಸ್ತುತಿಗೆ ಸಮನಾಗಿ ||
ಐದು ಮುಖದಲಿ ಹರಿವ ಮನವನು |
ಸೇದಿ ನಿಶ್ಚಲವೆನಿಸಿ ಸತ್ಯಸ |
ಮಾಧಿಯ[೭]ಲಿ ನಿಂದವನೆ ಭಕ್ತ[೮]ನು ಬಸವ ಕೇಳೆಂದ || ೧೭ ||

೧ ವೆಲ್ಲವನೊಂ ( ಇ. ) ೨ ಬಲ್ಲರೇ ( ಇ. ) ೩ ಸದನ ( ಉ. ) ೪ ವಧಿಕಪಹ ( ಇ. )
೫ ಕವನಾ ( ಒ. ) ೬ ವಿ ( ಗ. ) ೭-೭ ನೆ ಕಂಡವನು ಜಾಣ ( ಜ. ) ೮ ಜಾಣ ( ಇ. )

ಮನವನೊಬ್ಬುಳಿ ಮಾಡಿದಲ್ಲದೆ |
ತನುವಿನೊಳಗನು ಕಾಣಬಾರದು |
ತನುವಿನೊಳಗನು ಕಾಣದಿರ್ದೊಡೆ ಭಕ್ತಿರತಿಯಿಲ್ಲ ||
ವಿನುತ[೧] ಭಕ್ತಿಯು ರತಿಯು ಕಾಣದೆ |
ಘನವನೆಯ್ದಲು ಬಾರದಂತಾ |
ಘನವ ಬೆರಸದೆ ಮುಕ್ತಿಯಾಗದು[೨] ಬಸವ ಕೇಳೆಂದ || ೧೮ ||

ವಾರುವನನೇಱುವೊಡೆ ವಾಘೆಯ |
ದಾರವನು ಪಿಡಿದಲ್ಲದಾಗದು |
ಧೀರತನದಲಿ ಸಂಚಲಿಸುತಿಹ ಮನವ ನಿಲಿಸುವೊಡೆ ||
ಮಾರುತನ ಗತಿಗೆಡಿಸಿ ಕಾಯದ |
ಕಾರಣವನಱಿದಲ್ಲದಾಗದು |
ವೀರಶೈವದ ಬಟ್ಟೆಯಿದು ಬಸವಣ್ಣ ಕೇಳೆಂದ || ೧೯ ||

ಮಾಯೆಯೆಂಬುದು ಮನವು ಮನವೇ |
ವಾಯುವಾಗಿಹುದಾ ಮನಸ್ಸೇ |
ವಾಯುರೂಪಾಗಿರುತಲಿಹುದಾ ವಾಯು ಹರಿದಾಡಿ ||
ಕಾಯವನು ಕಂಗೆಡಿಸಿ ಭಕ್ತಿಯು |
ಬಾ[೩]ಯು ಕಾಣಿಸಲೀಯದಂತಾ[೪] |
ವಾಯುವನೆ ಗೆಲುವವನೆ ಭಕ್ತನು ಬಸವ ಕೇಳೆಂದ || ೨೦ ||

ಹೇಳುವೊಡೆ ಮನವೆಂಬ ಹಕ್ಕಿಗೆ |
ಕಾಲುಗಳಿಲ್ಲೈ ತೊಳಲುತಿಹ ಕ |
ಣ್ಣಾಲಿಗಳು ದಿಟವದಕೆ ಪಕ್ಕಗಳೀಡೆ ಪಿಂಗಳದ ||
ಗಾಳಿಯಾಗಿಹುದಂತುಕಾರಣ |
ವಾಲಿಯೇ ಸಾಧನಕೆ ಸಾಧನ |
ಮೂಲವನು ನಿಲಿಸುವನೆ ಭಕ್ತನು ಬಸವ ಕೇಳೆಂದ || ೨೧ ||

---

೧ ಇನಿತು ( ಇ, ಉ. ) ೨ ಯಹುದೇ ( ಇ. ) ೩ ದಾ ( ಒ. ) ; ಛಾ ( ಮು. ) ೪ ದಿಹುದಾ ( ಇ. )

ಆಲಿ ನಿಂದೊಡೆ ಸುಳಿದು ಸೂಸುವ |
ಗಾಳಿ ನಿಲುವುದು ಗಾಳಿ ನಿಲೆ ಮನ |
ಮೇಲೆ ನಿಲುವುದು ಮನವು ನಿಂದೊಡೆ ಬಿಂದು ನಿಂದಿಹುದು ||
ಲೀಲೆಯಿಂದಾ ಬಿಂದು ನಿಂದೊಡೆ |
ಕಾಲಕರ್ಮವ ಗೆದ್ದು ಮಾಯೆಯ |
ಹೋಳಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ || ೨೨ ||

ಅಂಗಭೂಮಿಯಲನ್ನಬೀಜವ |
ಲಿಂಗನೆನಹಿನಲಿಕ್ಕಿ[೧] ಜಲಪಾ |
ನಂಗಳಿಂದವೆ ಸಪ್ತಧಾತುಸಮೇಳದ[೨]ಲಿ ಬೆಳೆ[೩]ಸಿ ||
ಹಿಂಗದೊದವಿದ ಬಿಂದುಫಲವನ |
ನಂಗಗೀಯದೆ ವಿಮಲವೆನಿಸಿಸಿಂಪಿ[೪] |
ಸಂಗಡಿ[೫]ಸಿಕೊಂಡಿಹನೆ ಭಕ್ತನು ಬಸವ ಕೇಳೆಂದ || ೨೩ ||

ಸಲೆ ಷಡಾಧಾರಾಂಬುಜಂಗಳ |
ನೆಲೆಯನಱಿಯಲಿಬೇಕು ಬೇಹಡೆ[೬] |
ಬಲಿವುದಿಂತು ಷಡುಸ್ಥಳಂಗಳನಱಿವ[೭] ಮೇಳದಲಿ ||
ಇಳೆ ಜಲಾನಲ ವಾಯು ಗಗನ |
ಸ್ಥಲಕುಲಂಗಳನಾತ್ಮತತ್ವದೊ |
ಳಿಳುಹಿ ಸುಖಿಸುವನವನೆ ಭಕ್ತ[೮]ನು ಬಸವ ಕೇಳೆಂದ || ೨೪ ||

ಆಱು ಭೂತಗಳಾ[೯]ಱು ಚಕ್ರಗ |
ಳೇಱಿಹವು ಪರಿವಿಡಿಯಲವಱೊಳು |
ಮೀಱಿದಜ ಹರಿ ರುದ್ರನೀಶ ಶಿವಾ[೧೦]ತ್ಮತತ್ವಗಳು ||
[೧೧]ತೋಱುವುವು ನೆಲೆವಿಡಿದು ಸಲೆ ಬಲು |
ಹೇಱ[೧೨] ಸಾಧಿಸಿಯಂತವೆಲ್ಲವ |
ಸಾಱಿ ದಾಂಟುವನವನೆ ಭಕ್ತನು ಬಸವ[೧೧] ಕೇಳೆಂದ || ೨೫ ||

---

೧ ತ್ತು ( ಇ, ಗ. ) ೨ ವ ಸಮತೆಯ ( ಇ. ) ೩ ರ ( ಕ. ) ೪ ಸು ( ಒ. ) ೫ ಣಿ ( ಉ, ಕ, ಚ. ) ೬ ಬಗೆವೊಡೆ ( ಉ. ) ೭ ವರ ( ಗ, ಚ, ಮು. ) ೮ ಜಾಣ ( ಜ. ) ೯ ದಲಾ ( ಕ, ಖ, ಗ, ಚ, ಜ. ) ೧೦ ರವಿಶಶಿಯಾ ( ಗ. ) ೧೧–೧೧ ಮಾರದಳವಡುತಿರ್ದುವಾದರೆ | ಸಾರೆ ಶಾಶ್ವತಭಕ್ತಿ ನೆಲೆಗೊಂ | ಡೇರತೊಡಗುವುದಾತನೊಳು ಬಸವಣ್ಣ ( ಉ. ) ೧೨ ತೋರೆ ( ಒ. )

ನೆಟ್ಟನಾ ಗುದಲಿಂಗನಾಭಿಯ |
ಮುಟ್ಟ ಗುರುನೆಲೆ ನಾಭಿ ಹೃದ್ಗಳ |
ಮುಟ್ಟ ಜಂಗಮದಿಕ್ಕೆ ಗಳ ಭ್ರೂ ಭ್ರಹ್ಮರಂಧ್ರಗಳ[೧] ||
ನಿಟ್ಟಿಸಲು ಶಿವಲಿಂಗದೋವಜು |
ಯೊಟ್ಟಿಲಾಗಿಹವಿವನು ಬೆರಸುವ |
ಕಟ್ಟಳೆಯ ಕಂಡವನೆ ಭಕ್ತನು ಬಸವ ಕೇಳೆಂದ || ೨೬ ||

ಬಿಂದುವಸ್ತುವ ಗುರುಮುಖಾಗ್ನಿಗೆ |
ತಂದು ಪಚನಿಸಿ ಜಂಗಮದ ಮುಖ |
ದಿಂದೆ ಲಿಂಗಕೆ ನೀಡಿ[೨] ತನ್ಮುಖದಿಂದಲೊಕ್ಕುಳಿದ ||
ಸಂದ ಸುಧೆಯನಿಪಾ ಪ್ರಸಾದವ |
ನೊಂದು ಮನಸಿನಲುಂಡು ಪರಮಾ |
ನಂದವನು ಪಡೆದವನೆ ಭಕ್ತನು ಬಸವ ಕೇಳೆಂದ || ೨೭ ||

ಧರೆ ಜಲಾಗ್ನಿಯನೆಯ್ದಿದರೆ ಸ |
ದ್ಗುರುಕುಮಾರಕನಗ್ನಿ ವಿಡಿದಾ |
ಮರುತ ಗಗನವನೆಯ್ದಿದರೆ ಜಂಗಮದಲವಧಾನಿ ||
ವರಗಗನವಾತ್ಮಸ್ಥಲವನೆ |
ಯ್ದಿರಲು ಶಿವಲಿಂಗೈಕ್ಯನಿಂತೀ |
ಪರಿಯನಱಿದವನೆನ್ನ[೩] ಭಕ್ತನು ಬಸವ ಕೇಳೆಂದ || ೨೮ ||

ಧರಣಿ ಜಲದಲಿ ಕರ್ಮಿ ಪಾವಕ |
ಮರುತ ಮಂಡಲದಲ್ಲಿ ಭಕ್ತನು |
ಪಿರಿಯ ಗಗನಾತ್ಮಸ್ಥಳಾನ್ವಿತನಾಗೆ[೪] ಸುಜ್ಞಾನಿ ||
ಪರಿವಿಡಿಯುಲವನಿಳಿಹಿ ನಿಂದರೆ |
ಪರಕೆ ಪರತರ ವಸ್ತುವಾಗಿಯೆ |
ನೆರೆವನೆನ್ನಲಿ ಬಳಿಕಲಾತನು ಬಸವ ಕೇಳೆಂದ || ೨೯ ||

೧ ದೊಳು ( ಅ, ಒ, ಜ. ) ೨ ಕೊಟ್ಟು ( ಇ. ) ೩ ಪರಿವಿಡಿಯನರಿವವನೆ ( ಒ. ) ೪ ಳವನ್ನೈದಿರಲು ( ಇ. )

ಶಕ್ತಿಯೆಡೆ ಗುದಲಿಂಗವಂತಾ |
ಭಕ್ತಿಯೆಡೆಯಾ ನಾಭಿ ಹೃದಯುವು |
ಮುಕ್ತಿಯೆಡೆಯಾ ತಾಲು ಹುಬ್ಬುಗಳದು ನಿಮಿತ್ತದಲಿ ||
ಶಕ್ತಿಯಲಿ ಸಂಪನ್ನನಾಗಿಯೆ |
ಭಕ್ತಿಯಲಿ ಭಾವಜ್ಞನಾದೊಡೆ |
ಮುಕ್ತಿಯೆಂಬುದು ಮುಂದೆ ನಿಲುವುದು ಬಸವ ಕೇಳೆಂದ || ೩೦ ||

ತನ್ನನೊಲಿವೊಡೆ ಶಕ್ತಿಯಿದಲಾ |
ತನ್ನನಱಿ[1]ವೊಡೆ ಭಕ್ತಿಯಿದಲಾ |
ತನ್ನನಳಿ[2]ವೊಡೆ ಮುಕ್ತಿಯಿದಲಾ ಲಿಂಗವಂತಂಗೆ ||
ತನ್ನ ತಾನಿಂತಡಱಿ[3] ತನ್ನೊಳು |
ತನ್ನ ತಾನಾಗಿದ್ದನಾದೊಡೆ |
ನನ್ನ ನಚ್ಚಿನ ಭಕ್ತನಾತನು ಬಸವ ಕೇಳೆಂದ || ೩೧ ||

ಶುದ್ಧವೆನಿಪಾ ಪೂರ್ವಪಶ್ಚಿಮ |
ಸಿದ್ಧ ಮುದ್ರಾಬಂಧ ಮೊದಲಾ |
ಗಿದ್ದ ನಾನಾ [4]ಪರಿಪರಿಯ ಯೋಗೋಪದೇಶಗಳ[4] ||
ಉದ್ಧರಿಸಲಾ ಬಸವರಾಜನ |
ಬುದ್ಧಿ ಪ್ರಜ್ವಲ[5]ವಾಗಿ ಪಸರಿಸು |
ತಿದ್ದುದೇನೆಂದೆಂಬ[6]ನಾ ಪ್ರಭುಲಿಂಗನೊಲುಮೆಯುನು[6] || ೩೨ ||

ಮಾಡುತಿಹುದನವರತಲನುಭವ |
ಕೂಡುವನ್ನಕವನುಭವಂಗಳ[7] |
ಗಾಢದಲಿ ಗಮನಿಸುವುದೂರ್ಧ್ವಪದ[8]ಪ್ರಚಾ[9]ರಣೆಗೆ ||
ನೀಡಿ ನಿಲುಕುವುದಂತರಂಗದ |
ನಾಡನಾಳುವೊಡೀ[10] ಪ್ರಕಾರವ[11] |
ಜೋಡಿಸುತ್ತಿರುತಿಹುದು ಭಕ್ತರು ಬಸವ ಕೇಳೆಂದ || ೩೩ ||

---

೧ ನರಿ ( ಖ. ) ೨ ನರಿ ( ಖ. ) ೩ ನಿಂದಲ್ಲಿ ( ಉ. ) ; ನೆಂದರಿದು ( ಜ. ) ; ನಿಂತರಿತು ( ಅ. ) ೪-೪ ಪರಿಯ ಮಂತ್ರಕ್ರಿಯೋಪದೇಶವನು ( ಇ. ) ೫ ಪಂಜಳ ( ಕ, ಗ. ) ೬-೬ ನಲ್ಲಮಲಿಂಗನೊಲುಮೆಯಲಿ ( ಗ. ) ೬ ಲೀಲೆಯಲಿ ( ಇ, ಒ, ಜ. ) ೭ ನ್ನೆಗ ಭಕ್ತಿಮಾರ್ಗವ ( ಇ. ) ೮ ಥ ( ಕ, ಗ. ) ೯ ಸಾ ( ಜ. ) ೧೦ ವುದೀ ( ಗ, ಚ, ಜ. ) ೧೧ ದಿ ( ಇ, ಚ. )

ಅನುಭವಣೆಯುಳವಡುವ ಪರಿಯಂ |
ತನುಮತವನೊಳಗೊಂಡು ನಿಶ್ಚಲ |
ದನುವನಂಗೀಕರಿಸಿ ನೀವಿರಲಾ ದಿನಂಗಳಲಿ ||
ಮನವೊಲಿದು ನಾ ಬಂದು ಮೇಲಣ |
ನೆನಹಿಗಾ ಕ್ಷಣ ಹಱುವ ಮಾಡುವೆ |
ನೆನುತಲಾ ಪ್ರಭುರಾಯನಾ ಬಸವಣ್ಣಗಿಂತೆಂದ || ೩೪ ||

ನೋಡಬೇಕಾರಾರು ಭಕ್ತಿಯ |
ಮಾಡಿ ಮುಕ್ತಿಯ ಹಡೆವೆವೆಂದನು |
ಗೂಡಿ ನಿಚ್ಚಟರಾಗಿ ಧಿರೋದಾರ ವೃತ್ತಿಯಲಿ ||
ಜೋಡಿವೋಗದೆ ನಿರ್ವಹಿಸಿ ಹೇ |
ಡಾಡದವರನು ಕಾಬೆವಾವಿ |
ನ್ನಾಡಿ ಬಹೆವೆಂದೆನುತಲಿರ್ದನು ಗುರು ಗುಹೇಶ್ವರನು || ೩೫ ||

**ಅಂತು ಗತಿ ೧ಲಕ್ಕಂ ಪದ ೭೯೦ ಕ್ಕಂ ಮಂಗಳಂ**

# ಗೋರಕ್ಷನ ಗತಿ

**ಸೂಚನೆ**

ಕಳ್ಳಗಂಜಿ ಕಾಡ ಹೊಕ್ಕರೆ ಹುಲಿ ತಿನ್ನದೆ ಮಾಬುದೆ ।
ಹುಲಿಗಂಜಿ ಹುತ್ತ ಹೊಕ್ಕರೆ ಸರ್ಪ ತಿನ್ನದೆ ಮಾಬುದೆ ।
ಕಾಲಗಂಜಿ ಭಕ್ತನಾದರೆ ಕರ್ಮ ತಿನ್ನದೆ ಮಾಬುದೆ ।
ಮೃತ್ಯುವಿನ ಬಾಯ ತುತ್ತಾದ ವೇಷಡಂಬಕರ ನಾನೇನೆಂಬೆನು ಗುಹೇಶ್ವರಾ ॥ ೧ ॥

ನಾರುಬೇರಿನ ಕುಟಿಲಕರ್ಮದ ಯೋಗವಲ್ಲಿದು ನಿಲ್ಲಿಭೋ ।
ಕಾಯಸಮಾಧಿ ಕರಣಸಮಾಧಿ ಯೋಗವಲ್ಲಿದು ನಿಲ್ಲಿಭೋ ।
ಜೀವಸಮಾಧಿವೆಂಬುದಲ್ಲ ನಿಜಸಹಜಸಮಾಧಿನಿಧಿ ಕಾಣಾ ಗುಹೇಶ್ವರಾ ॥ ೨ ॥

**ಸೂಚನೆ**

ಶರಣರೆಲ್ಲರ ನಿಲಿಸಿ ಹೋಗುತ ।
ಕರುಣದಲಿ ಗೋರಕ್ಷನಾಥಗೆ ।
ವಿರಚಿಸಿದನೆಮ್ಮಲ್ಲಮಪ್ರಭು ಲಿಂಗತತ್ವವನು ॥

ನರ ತೊಗಲು ಎಲು ಮಿದುಳು ಕಬ್ಬಸು ।
ಕರಳು ಕಂಡ ಪುರೀಷ ಪುಂಜದ ।
ಶರಿರವೇ ಸ್ವ[೧]ಯುವಾಗಿ ಸಿದ್ಧಿಯ ಪಡೆವೆವೆಂದೆಂಬ ॥
ಮರುಳುತನವನು ನಿಲಿಸಿ ಸಾಕ್ಷಾತ್ ।
ಪರಮ ಪದವಿಯುಲಿರಿಸುವನುವನು[೨] ।
ಶರಣರೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

---

೧ ಸ ( ಒ, ಕ. ) ; ಶ ( ಇ, ಉ, ಒ, ಗ, ಚ. ) ೨ ನೀವ ಭೇಧವ ( ಜ. )

ಸಾಧಿಸುವುದಿನ್ನಿನ್ನು ನಿಮ್ಮೊಳು |
ನಾದ ಬಿಂದು ಕಳಾ ಪ್ರಪಂಚ[1]ದ |
ಹಾದಿಯನು ಹೆಱು ಮಾಡುತಿಹುದೇಕಾಗ್ರ ಚಿತ್ತದಲಿ ||
ಆ ದಿನಕೆ ನಾ ಬಂದು ನಿಮ್ಮ ಸ |
ಮಾಧಿಗಳ ಸಾಹಸದ ಪ್ರಾಪ್ತಿಯ |
ನೆಯ್ದೆ ನೋಡುವೆನೆನುತಲಾ ಪ್ರಭುರಾಯನಿಂತೆಂದ || ೨ ||

ಸ್ತುತ್ಯರಾಗಿಹುದಖಿಳ ಭಕ್ತರು |
ನಿತ್ಯರಾಗಿಹುದಚಲ ಭಕ್ತರು |
ಸತ್ಯರಾಗಿಹುದಮಲ ಭಕ್ತರು ಭಕ್ತಿಯಿಂದೆನುತ ||
ಮತ್ತೆ ಮುದದಲಿ ಸಿದ್ಧರಾಮನ |
ನುತ್ತಮೋತ್ತಮ ಬಸವರಾಜನ |
ಚಿತ್ತದಣಿಯಲು ಹರುಷದಲಿ ಹರಸಿದನು ಪ್ರಭುರಾಯ || ೩ ||

ಮನವೊಲಿದು ಶಿವಶರಣರೆಲ್ಲರು |
ತನತನಗೆ ಸಾಷ್ಟಾಂಗಸಹಿತ[2]ವೆ |
ತನುವನೀಡಾಡಿದರು ಗುರುವಿಗೆ ಬಳಿಕಲವರುಗಳ ||
ವಿನಯದಿಂದಿರಹೇಳಿ ಮರ್ತ್ಯದ |
ಮನುಜರನು ಪಾವನವ ಮಾಡುವೆ |
ನೆನುತ ಗಮಿಸಿದನಲ್ಲಮಪ್ರಭುಲಿಂಗ ಲೀಲೆಯಲಿ || ೪ ||

ಇತ್ತಲೀ ಬಸವಣ್ಣ ಮೊದಲಾ |
ದುತ್ತಮದ ಶಿವಭಕ್ತರೆಲ್ಲರು |
ಚಿತ್ತದಲಿ ನಿಜಗುರುನಿರೂಪವ ಮಾಡತೊಡಗಿದರು ||
ಅತ್ತ ಸೊನ್ನಲಪುರಕೆ ಹೋಗಿ ವಿ |
ಚಿತ್ರದಿಂದಲಿ ಸಿದ್ಧರಾಮನು |
ಮತ್ತೆ ಮನದಲಿ ಮಾಡುತಿರ್ದನು ಶಿವಸಮಾಧಿಯನು || ೫ ||

---

೧ ಬಂಧ ( ಆ, ಒ, ಜ. )  ೨ ದಿಂದ ( ಇ. ) ; ವೆನುತ ( ಉ. )

ಧರಣಿಯೊಳಗಾರಾರದಾವಾ[೧] |
ಚರಣೆಗಳನಾಚರಿಸುತಿಹರಾ |
ಪರಿಯಲವರವರಿಗೆ ಯಥೋಚಿತ ಸುಪ್ರಸನ್ನತೆಯ ||
ಕರುಣಿಸುವೆನೆಂದೆನುತ ಸಚರಾ |
ಚರರಿಗುಪಕಾರಾರ್ಥವಾಗಿಯೆ |
ಗುರು ಗುಹೇಶ್ವರಲಿಂಗ ಸುಳಿದನು ತನ್ನ ಲೀಲೆಯಲಿ || ೬ ||

ಒಸೆದು ಕುಲಗಿರಿಕುಲವನೊಲಿದೀ |
ಕ್ಷಿಸಲು ಪರುಷದ ಪರ್ವತಂಗಳ |
ಹೆಸರ ಹಡೆದುವು ತರುಲತಾನಿಕರವ ನಿರೀಕ್ಷಿಸಲು ||
ಮಿಸುಪ ಸುರತರು ಕಲ್ಪಲತೆಯೆಂ |
ಬೆಸಕವಾದುವು ನೋಡೆ ಸರಸಿ |
ಪ್ರಸರವಮೃತಗಳಾದುವಾ ಪ್ರಭುಲಿಂಗಲೀಲೆಯಲಿ || ೭ ||

ಪೊಡವಿಯನು ಪಾವನವ ಮಾಡುತ |
ನಡೆದು ನಲವಿಂ ಬರುತ ಬರುತಲಿ |
ಬಡಗ ಭೂಮಿಯ ಪುಣ್ಯಪುರುಷರ ಚಾರು ಚರಿತೆಯನು ||
ಬಿಡದೆ ನೋಡುವೆನವರು ಬೇಡಿತ |
ಕೊಡುವೆನೆಂದೆನುತೊಲಿದು ಕರುಣದ |
ಕಡಲಿನಂತಿರೆ[೨] ಬಂದನಾ ಪ್ರಭು ಲಿಂಗಲೀಲೆಯಲಿ || ೮ ||

ಇದಿರುವರಿತಂದಲ್ಲಮುಪ್ರಭು |
ಪದಪಯೋಜಸ್ಪರುಶನದ ಸಂ |
ಪದದ ಸತ್ತ್ವದಲಾದುವಗ್ಗದ ಪುಣ್ಯನದಿನಿಕರ ||
ಮುದದಲೆಡೆಗೆಯ್ದೆ ಡೆಗಳೆಲ್ಲವು |
ಸದಮುಲಕ್ಷೇತ್ರಂಗಳಾದುವು |
ವಿದಿತವೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ || ೯ ||

---

೧ ವ ಪರಿಯಾ ( ಇ. ) ೨ ನಂದದಿ ( ಇ )

ನಿಧಿಯ ಚಿಂತಾಮಣಿಯ ದಿವ್ಯೌ |
ಷಧಿಯ ಪರುಷದ ಕಣಿಯು ಸುಲಲಿತ |
ಸುಧೆಯ ಬಿಲಗಳ ಸಿದ್ಧರಸ ಪಾದುಕೆಯನಂಜನವ ||
ನಿ¹ಧಿ ನಿ¹ಧಾನದ ವಸ್ತುಗಳ ತ |
ವ್ಮಿದಿರಲಬಸುವ ಸಾಧಕರ ತವ |
ನಿಧಿಯೆನಿಪ ಶ್ರೀಗಿರಿಯ ಕಂಡನು ಬರುತ ಪ್ರಭುರಾಯ || ೧೦ ||

ನಡೆವ ಲತೆಗಳು ನಗುವ ಗಿಡುಗಳು |
ನುಡಿವ ಶಿಲೆಗಳು ತೇಜದಿಂದುರಿ |
ಯಿಡುವ ತರುಗಳು ದಿವ್ಯರುಚಿಗಳನೀವ ಗುಲ್ಮಗಳು ||
ಕುಡಿದೊಡಂತಃಕರಣಶು²ದ್ಧಿಯು |
ಕೊಡುವ ಮಡುಗಳು ಜಾತಿವೈರವ |
ತೊಡದ ಖಗ ಮೃಗ ಮೆಱೆದುದಾ ಶ್ರೀಗಿರಿಯ ಶಿಖರದಲಿ || ೧೧ ||

ಏಱಿ ನೋಡಲು ಸತ್ಯಲೋಕಕೆ |
ಹಾಱುಸುವ ಗಿರಿಶಿಖರಗಳು ಮಿಗೆ |
ಮಿಾಱಿ ಹೊಕ್ಕೊಡೆ ಸಪ್ತ ಪಾತಾಳದ ಸಘಾಟಿಕೆಯ ||
ತೋಱಸುವ ಬಿಂಕದ ಬಿಲಂಗಳು |
ಸಾಱಿ ಸಾಧಕರೀನ ಬಗೆದುದ |
ಹೇಱಿ ಕೊಡುವ ಸುವಸ್ತುವಿರ್ದುವು ಪರ್ವತಾಗ್ರದಲಿ || ೧೨ ||

ಆ ಮಹಾ ಶ್ರೀಗಿರಿಯ ಶಿಖರದೆ |
ಕಾಮಿತಾರ್ಥವ ಹಡೆವೆನೆಂದು |
ದ್ದಾಮತೆಯ ಗೋರಕ್ಷನೆಂಬ ಸಮಸ್ತಸಾಧಕನು ||
ಪ್ರೇಮದಿಂದಿರುತಿರಲಿಕಾ ದಿನ |
ವೀ ಮನೋಹರಮೂರ್ತಿಮಯು ನಿ |
ಸ್ಸೀಮನಲ್ಲಮನಲ್ಲಿಗೆಯ್ತಂದನು ವಿನೋದದಲಿ || ೧೩ ||

---

೧ ವಿ ( ಕ, ಮು. ) ೨ ಸಿ ( ಅ, ಕ, ಜ. )

ರೋಗಿಯಲ್ಲಿಗೆಯಮೃತವೇ ಮೆ |
ಯ್ಯಾಗಿ ನಡೆತಂದಂತೆ ಜೀವವಿ |
ರೋಗತನುವಿಗೆ ಮುಟ್ಟೆ ಮರುಜೀವಣಿಗೆ ಬಂದಂತೆ ||
ಮೂಗಗಮಲ ವಚೋವಿಳಾಸತೆ |
ಯಾಗುದೋಱಿಸಿದಂತೆ ಕೃಪೆಯಿಂ |
ದಾಗಳಾ ಗೋರಕ್ಷನಲ್ಲಿಗೆ ಬಂದ ಪ್ರಭುರಾಯ || ೧೪ ||

ಬರಲಿಕಾ ಪ್ರಭುರಾಯನಡಿಗಳಿ |
ಗೆಱಗಲೊಲ್ಲದೆ ಹಮ್ಮಿನಿಂದಲಿ |
ಬೆಱೆತು ಬಿಂಕದ ಬಿಮ್ಮಿನಲಿ ಕೈ ಮುಗಿದು ಶರಣೆಂದು ||
ಗುರುತರಾಸನದಲ್ಲಿ ಮಿಗೆ ಕು |
ಳ್ಳಿರಿಸಿ ಕೂರ್ಮೆಯಲೊಯ್ಯನೊಯ್ಯನೆ |
ಪರಿವಿಡಿ[1]ಯಲಲ್ಲಮಗೆ ಬಿನ್ನೈಸಿದನು ಗೋರಕ್ಷ || ೧೫ ||

ಆವ ಕಡೆಯಿಂ ಬಿಜಯ ಮಾಡಿದಿ |
ರಾವ ಕಾರಣ ಬಂದ ಬರವೆಮ |
ಗಾವುದೈ ಬೆಸನೇನು ಹದನ ನಿರೂಪಿಸಾ ಪ್ರಭುವೆ ||
ನೀವು ಬಹುದೆಮಗತುಳ ಭಾಗ್ಯಫ |
ಲಾವಳಿಗೆ ಕಾರಣವಲಾ ಮಹ |
ದೇವ ಎನುತಲಿಯು[2]ಚಿತ ವಚನವ ನುಡಿದ ಗೋರಕ್ಷ || ೧೬ ||

ನುಡಿಯನಾಲಿಸಿ ಕೇಳು ಭಕ್ತಿಯ
ಕಡೆಯಲಾವೆಯ್ತಂದೆವೆಮಗೀ |
ಕಡೆಯ ಮನುಜರ ಮನಕೆ ಕಡೆಯನು ಮಾಡಬೇಕಾಗಿ ||
ಒಡಲಿನಾಸೆಗೆ ಕುದಿದು ಕೋಟಲೆ |
ಬಡುವವರ ಕಳವಳವ ಕಳಚಲು |
ನಡೆದು ಬಂದವರಾವೆಲೈ ಗೋರಕ್ಷ ಕೇಳೆಂದ || ೧೭ ||

೧ ಪರಿ ( ಅ, ಉ, ಒ, ಜ ) ೨ ಎಂದೆನುತು ( ಗ. )

ಹೊಸತಲಾ ಲೌಕಿಕದುಚಿತವ |
ಪಸರಿಸಲು ಪರಮಾರ್ಥವನು ಸೂ |
ಚಿಸುತಲಿಹನೆಯದಲ್ಲದೆನ್ನನು ಮುನ್ನ ಪರಿಕಿಸದೆ ||
ಹೆಸರುಗೊಳುತಲಿದಾನೆಯಿಾತನ |
ಗಸಣೆ ತಾನೇಯಾದಿನಾಥನ |
ಬೆಸುಗೆಯಾಗಲು ಬೇಕೆನುತ ಗೋರಕ್ಷನಿಂತೆಂದ || ೧೮ ||

ಎಲೆ ಮಹಾಪುರುಷಾ ನಿಧಾನಿಸಿ |
ತಿಳಿಯೆ ನಿನ್ನಂತಸ್ಥವೆಂಬುದು |
ನಿಲುಕದೆಮ್ಮಯ ಮತಿಗೆ ನಿನ್ನಯ ರೀತಿ ಹೊಸತಾಗಿ ||
ಹೊಲಬು ಹುಗದೆಮ್ಮಱಿವುಗಿಱಿವಿನ |
ಸಲುಗೆ ಸಲ್ಲದು ನಾಕು ನಿನ್ನಯ |
ನೆಲೆಯ ನೀನೇ ಬಲ್ಲೆಯೆಂದನು ಬಳಿಕ ಗೋರಕ್ಷ || ೧೯ ||

ತನ್ನನಱಿಯದ ಮಂದಮತಿಗಳಿ |
ಗಿನ್ನು ಪೆಱರಂತಸ್ಥವೆಂಬುದು |
ಕಣ್ಣು ಕಾಣದ ಕುರುಡ ಕನ್ನಡಿವಿಡಿದ ತೆಱನಂತೆ ||
ನನ್ನ ನಿಜದ ನಿಧಾನವನು ಬಳಿ |
ಕಿನ್ನು ಕಾಬವರಾರು ಮಾತಿನ |
ಬಿನ್ನಣಿಗರಿಗೆ ಸಾಧ್ಯವೇ ಗೋರಕ್ಷ ಕೇಳೆಂದ || ೨೦ ||

ಕಾಯವೆಂಬುದು ತಾನು ತಾನೇ |
ಕಾ[1]ಯವಾಗಿಹನಿಂತು ತನ್ನೊಂ |
ದಾಯತದ ತಿಳಿವೆಂಬುದಿದು ಕಾಪಾಲಮಾರ್ಗದಲಿ ||
ನ್ಯಾಯಧರ್ಮವು ನನ್ನನಱಿವ ವಿ |
ಡಾಯವೆನಗೇನರಿದು ಪ್ರಭುವೇ |
ಬಾಯನುಡಿಗಳ ಬಲ್ಲಿದರು ನಾವಲ್ಲ ಕೇಳೆಂದ || ೨೧ ||

---

೧ ಪರಿಯಂ ( ಇ. ) ೨ ಮಾ ( ಅ, ಇ, ಉ, ಗ. )

ಎಲು ತೊಗಲು ಮಲ ಮೂತ್ರ ನೆತ್ತರ |
ಕೊಳಚೆಯಾಗಿಹ ಹೇಸಿಕೆಯ ತನಿ |
ಗೊಳಿಯೊಡಲು ತಾನೆಂಬ ಮೂರ್ಖನು ತನ್ನನಱಿದಪನೆ ||
ಸಲುವುದೇ ಕಾಪಾಲಮಾರ್ಗಕೆ |
ಹಳಿವ ತಹರೇ ಸಾಂಪ್ರದಾಯದ |
ನೆಲೆಯನಱಿವುದು ಸೂಱೆ³ಯೋ ಗೋರಕ್ಷ ಕೇಳೆಂದ || ೨೨ ||

ಮಾಡಲಱಿಯದವಂಗೆ ಕೊಳಚೆಯ |
ಮಾಡವೀ¹ ತನು ತಪ್ಪದೈ ದಿಟ |
ಮಾಡಬಲ್ಲೊಡೆಯಿಾ ಶರೀರವೆ ರತ್ನವಾಗಿಹುದು ||
ಖೋಡಿಗಳೆವುದು ಮಾಯೆಗೀಯೆಯ |
ನೇ²ಡಿಸುವುದಾ ಮಿತ್ತುಗಿತ್ತುವ |
ರೂಢಿಯಲಿ ತನು ಸಿದ್ಧರಾವೈ ಪ್ರಭುವೆ ಕೇಳೆಂದ || ೨೩ ||

ಎಲೆ ಮರುಳೆ ಮೃದುವಾದ ಮಾಯೆಯ |
ಬಲೆಯ ಬಲ್ಲಿತ ಮಾಡಿ ಸಾವನು |
ಗೆಲಿದೆನೆಂದು ನಿರರ್ಥದಲಿ ಹಾರೈಸದಿರು ಬಱಿದೆ ||
ತಿಳಿವೊಡೀ ತನು ತಾನೆ ಕಾಲನ |
ನಿಳಯ ನೀನಿದ ನಂಬಿಸಿ ನುಡಿದರೆ |
ಪ್ರಳಯ ನಿನ್ನನು ಬಿಡುವುದೇ ಗೋರಕ್ಷ ಕೇಳೆಂದ || ೨೪ ||

ಆದೊಡಿನ್ನೇಳೇಳು ಹಿಡಿ ಹಿಡಿ |
ಕೈದುವಿದೆ ಕೋ ತನ್ನ ತನುವನು |
ಹೊಯ್ದು ನೋಡಾ ನೀನು ನಿನ್ನಾಪನಿತು ಸತ್ವದಲಿ ||
ಕೂದಲೊಳಗೊಂದಿನಿತು ಹಱಿಮುಱಿ |
ಯಾದರಕಟಾ ನಾನು ಸಿದ್ಧನೆ |
ವಾದವೇತಕೆ ದೃಷ್ಟವಿದಲಾ ಪ್ರಭುವೆ ನೋಡೆಂದ || ೨೫ ||

---

೧ ಬೀಡಲ್ಕೆ ( ಇ. ) ೨ ನೋ ( ಇ. ) ೩ ನಚ್ಚಿ ( ಚ. )

ಕೊಂದು ನೋಡುವುದಿದು ಪರೀಕ್ಷಿಸು |
ವಂದವೇ ನಾವಱಿಯೆವಾಸುರ |
ಬಂಧಕರ್ಮವನಿದು ಗುಹೇಶ್ವರಲಿಂಗಮತವಲ್ಲ ||
ಇಂದು ನಿನ್ನ ಶರೀರವಳಿದೊಡೆ |
ಮುಂದೆ ಸಿದ್ಧಿಯ ಹಡೆವರಾರೈ |
ಮಂದಮತಿಗಾನಂಜುವೆನು ಗೋರಕ್ಷ ಕೇಳೆಂದ || ೨೬ ||

ಸಾವು ಬಂದೊಡೆ ನಾವು ಸಿದ್ಧಿಸಿ |
ತಾವುದೈ ತನುವಳಿವುದೇ ಶ |
ಸ್ತ್ರಾವಳಿಗೆ ದಿಟವಣಿಯಬಾರದ ಮಡಕೆಯಡಬಹುದೆ ||
ಈ ವಿಕಲ್ಪವ ಬಿಟ್ಟು ನಿರ್ಭಯ |
ಭಾವಭರದಲಿ ಹೊಡೆದು[೧] ನೋಡಿ |
ನ್ನಾವ ಸಂಶಯವೇತಕೆಲೆ ಪ್ರಭುರಾಯ ಹೇಳೆಂದ || ೨೭ ||

ಒಲ್ಲಿವೆಂದೆನಲೇಕೆ ಹುಟ್ಟಿಸ |
ಬಲ್ಲವನು ಹೊಂದಿಸಿದೊಡಾತಗೆ |
ಹೊಲ್ಲವಾವುದು ನಾವು ಸಲಿಸುವೆವೀತನರ್ತಿಯನು ||
ನಿಲ್ಲದೆಱಗಲು ಸತ್ತನಾದೊಡೆ |
ಬಲ್ಲಿತಹ ಗೋರಕ್ಷನನು ನಾ |
ವಿಲ್ಲಿ ಸೃಜಿಸುವೆವೆನುತಲಾ ಪ್ರಭುರಾಯನನುವಾದ || ೨೮ ||

ಹಿಡಿದು ಹಿಂಗದೆ ಬಲಿದು ಝಳಪಿಸಿ |
ಜಡಿ[೨]ದು ಹೊಱಕೈಯಿಂದೆ ಖಣಿಖಟಿ |
ಲಿಡಲಿಕಾ ಪ್ರಭುವಬ್ಬರಿಸಿ ಬಿಱು ಹೊಯಿಲನೆಱಗಿದರೆ ||
ನಡುಗಿದುದು ನೆಲ ಶಿಲೆಗಳನು ವೈ |
ಗೊಡಹಿದುದು ಗಿರಿಯೊಂದು ಕೂದಲು |
ಕಡಿಯದಾ ಗೋರಕ್ಷನಲಿಯೇನೆಂಬೆನಚ್ಚರಿಯ || ೨೯ ||

---

೧ ಯ್ದು ( ಒ, ಖ. ) ೨ ಹೊಡೆ ( ಅ. )

ಮೋಹದಲಿ ಮಾಯಾ[೧] ಪ್ರಪಂಚಿನ |
ದೇಹಸಿದ್ಧಿಯ ಪಡೆದೆನೆಂಬೀ |
ಗಾಹಿನಿಂದಲಿ ವಜ್ರಪಿಂಡಶರೀರ ಫಲಿಸಿದೊಡೆ ||
ಊಹಿಸುವೊಡಾ ಪ್ರಳಯವನು ಸಂ |
ದೇಹವಿಲ್ಲದೆ ಗೆಲುವೆಯೋ ಸುಡು |
ದೇಹಸಿದ್ಧಿಯನೆನುತಲಾ ಪ್ರಭು ಖಂಡೆಯವ ಬಿಸುಟ || ೩೦ ||

ಸಿದ್ಧಿಯುಳ್ಳವನಂಗದಲಿ ಖಣಿ |
ಲೆದ್ದು ಧ್ವನಿ ಹುಟ್ಟುವುದೆ ಹೊಯಿದೊಡೆ |
ಸಿದ್ಧಿಯೆಂಬುದು ತಿಳಿವೊಡೀ ತೆಱನಲ್ಲ ನಂಬದಿರು ||
ಹೊದ್ದಿತಲ್ಲಾ ಪ್ರಳಯವೀ ಪರಿ |
ಬದ್ಧದೇಹಿಗೆಯಕ್ಕಟಕ್ಕಟ |
ಸಿದ್ಧತನ ಸಾಮಾನ್ಯವೇ ಗೋರಕ್ಷ ಕೇಳೆಂದ || ೩೧ ||

ಬಱಸಿಡಿಲು ಶೀತೋಷ್ಣ ಖಡುಗದ |
ಬಿಱುಬುಹೊಯಿಲಿಗೆ ಕೆಡದೆ ವಜ್ರದ |
ಬಿಱಿಸಿನಂತೆನಿಸಿದ ಶರೀರವು ಸಿದ್ಧಿಯಲ್ಲದೊಡೆ ||
ಪೆಱತದಾವುದು ಸಿದ್ಧನಾದೊಡೆ |
ಕುಱುಹದಾವುದು ನೀನು ಬಲ್ಲೊಡೆ |
ಬಱಿಯ ಮಾತನು ಬಿಟ್ಟು ದಿಟವನು ಪ್ರಭುವೆ ತೋಱೆಂದ || ೩೨ ||

ಹಿಡಿದುಕೋ ಖಂಡೆಯವನಾದೊಡೆ |
ಹೊಡೆದು ನೋಡೆಮ್ಮವನು ಮುನ್ನವು[೨] |
ಮುಡುಹಿಗೆನಿತುಳ್ಳನಿತು ನಿನ್ನಯ ಸರ್ವ ಸತ್ವದಲಿ ||
ಖಡುಗ ಮುಖದಲಿ ಕಾಬುದಲ್ಲದೆ |
ನುಡಿಯ ನುಣ್ಣಿಸಲೇನುಕಾರಣ |
ತಡವಿದೇತಕೆ ತಥ್ಯವನು ಗೋರಕ್ಷ ನೋಡೆಂದ || ೩೩ ||

---

೧ ನಾನಾ ( ಉ. ) ೨ ಮುಂಗೈ ( ಅ, ಇ, ಗ. )

ನೋಡಬೇಕಿನ್ನಾದೊಡೀತನ |
ಗಾಡಿಯನು ಸಲೆ ಸಿದ್ಧತನದಾ |
ರೂಢವನು ಸಾಧಕಗಿದೆ ಮಹನವಮಿಯೆಂದೆನುತ ||
ನೀಡಿ ನಿಜ [1]ಸವ್ಯಾಪಸವ್ಯದ[1] |
ಮೋಡಿಯಲಿ ಬಿಡದೆಱಗುತಿರ[2]ಲೀ |
ಸಾಡಿಶವನಸಿಯ[3]ಮುಮ ಪ್ರಭುವಿನ[2] ಬ[3]ಯಲ ದೇಹದಲಿ || ೩೪ ||

ಸೊಪ್ಪುೞಾಗದು ಕೈದುವಾನದು |
ಒಪ್ಪವಳಿಯದು ಜಂತ್ರಜೋಕೆಗೆ |
ತಪ್ಪದೋಱದು ಹೊಡೆಯೆ ಹಾಱುವ[4] ಹದ್ದಿ[5]ನಂದದಲಿ ||
ನಿಪ್ಪಸರಪಸಿ[6] ಬಯಲ ದೇಹಿಯ |
ನಪ್ಪಲಱಿಯದಿದೇನು ಚೋದ್ಯವೊ |
ತಪ್ಪದೀತನೆ ಗುರುವೆನುತ ಗೋರಕ್ಷಸಿಂತೆಂದ || ೩೫ ||

ಅಣಕವಲ್ಲಿದು ತನ್ನ ಹೊಯಿದರೆ |
ಖಣಿಲೆನುತ ಖಂಡೆಯಕೆ ಮಾಱಾಂ |
ತಣೆದುದೆನ್ನಸು ನಿನ್ನ ಹೊಯಿದೊಡೆ ಬಯಲ ಹೊಯಿದಂತೆ ||
ನುಣುಚಿ ನುಣ್ಣನೆ ಕಡೆಗೆ ಖಂಡೆಯ |
ಜುಣುಗಿ ಹೋಯಿತಿದಾವ ಮಹಿಮೆಯ |
ಗುಣವೊ ನಮಗಿದನಱಿಯಬಾರದು ಪ್ರಭುವೆ ಹೇಳೆಂದ || ೩೬ ||

ಕಾಯ ಬಲಿದರೆ ಮಾಯೆ ಬಲಿವುದು |
ಮಾಯೆ ಬಲಿದರೆ ಛಾಯೆ ಬಲಿವುದು |
ಕಾಯ ಮಾಯಾ ಛಾಯೆ ಬಲಿದರೆ ಸಿದ್ಧತನವ[7]ಲ್ಲ ||
ಕಾಯ ಮಾಯಾ ಛಾಯದಾಗಿ[8]ನ |
ದಾಯವನು ಕಳೆದುಳಿದನಾದೊಡೆ |
ರಾಯನಾತನು ಸಿದ್ಧರಲಿ ಗೋರಕ್ಷ ಕೇಳೆಂದ || ೩೭ ||

೧-೧ ಸರ್ವಾಂಗಸತ್ವದ ( ಜ. ) ೨-೨ ಲುಸ | ಘಾಡಿ ಮಸಗಿದುದಲ್ಲಮುಪ್ರಭು ( ಜ. ) ೩-೩ ಲ್ಲಮನ ನಿರ್ವ ( ಗ. ) ೪ ರದು ( ಚ. ) ೫ ಹೊಟ್ಟ ( ಗ, ಚ. ) ೬ ಲಿ ( ಇ, ಉ, ಒ, ಜ. ) ೭ ನವನ ( ಒ, ಕ, ಚ, ಜ. ) ೮ ದನುವಿ ( ಜ. )




ಗೋರಕ್ಷನು ಪ್ರಭುದೇವರನ್ನು ಕತ್ತಿಯಿಂದ ಇರಿದದ್ದು

( ಪದ್ಯ ೩೪-೩೫ )

ಆದಿನಾಥನೆ ತಾನಿದೊಂದು ವಿ |
ನೋದವೇಷವ ಧರಿಸಿ ತನ್ನಯ |
ಸಾಧಕರ ಸಂಕಲ್ಪಸಿದ್ಧಿಯನೀಯಬೇಕೆಂದು ||
ಮೇದಿನಿಗೆ ಮೆಯ್ಗಾಣಿಸಿದ[1]ನಿ |
ನ್ನಾದುದಾನಱಸುವ[1] ಮನೋರಥ |
ವೆಯ್ದೆ ಫಲಸಿದುದೆನುತಲಾ ಗೋರಕ್ಷನಿಂತೆಂದ || ೩೮ ||

ಅಱಿ[2]ಯೆ ನಾನಿನ್ನೆಬರ ನಿನ್ನಯ |
ತೆಱನನೆನ್ನಯ ಮತ್ತತನದಲಿ |
ಬೆಱ[3]ತುಕೊಂಡಾನಿರ್ದನೆನ್ನದು ಸರ್ವ ತಪ್ಪೆನುತ ||
ನೆಱ[3] ಶರೀರವ ನೀಡಿ ಕೈಮುಗಿ |
ದೆಱಗಿದನು ಭಯಭಕ್ತಿಭಾರದ |
ಲೊಱಗುವಂತಾ ಪ್ರಭುವಿನಡಿಯೊಳು ಬಳಿಕ ಗೋರಕ್ಷ || ೩೯ ||

ಬಿಸಿಯ ಹದನನು ತಿಳಿದು ಲೋಹವ |
ಬೆಸುವವೊಲು ಪರಿಪಾಕಭಾವದ |
ಹಸನನಱಿದಿನ್ನೀತಗು[4]ಪದೇಶಿಸುವೆನೆಂದೆನುತ[4] ||
ಒಸೆದು ಹಣೆವಿಡಿದೆತ್ತಿ ಕರುಣವ |
ಪಸರಿಸುತ ಗೋರಕ್ಷನನು ಮ |
ನ್ನಿಸಿದನೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ || ೪೦ ||

ನೋಡಿದರೆ ಮದಮತ್ಸರಗಳೆ |
ದ್ದೋಡಿದುವು ಕರುಣದಲಿ ಗುರು ಮಾ |
ತಾಡಿದೊಡೆ ಮುಗ್ಗಿದುದು ಮನಸಿನ ಮಱವೆ ನಿಮಿಷದಲಿ ||
ನೀಡಿ ಕೈಮುಟ್ಟಿದೊಡೆ ಕಾಯದ |
ಖೋಡಿ ಹೋಯಿತು ವಿಮಲ ತನು ಮನ |
ಮೂಡಿತಾ ಗೋರಕ್ಷನಲಿ[5] ಪ್ರಭುಲಿಂಗಲೀಲೆ[6]ಯಲಿ || ೪೧ ||

---

೧-೧ ನಿಂ | ದಾದಿಶಿವ ಶಿವಕೃತ ( ಇ. ) ೨ ತಂ ( ಕ, ಜ. ) ೩-೩ ದಿಂಗಿತದಲು ( ಇ. ) ೪-೪ ಶವನುಸುರೆಲೆಂದು ( ಗ. ) ೫ ಗೀ ( ಅ, ಒ. ) ೬ ನೊಲುಮೆ ( ಇ. )

ಬಳಿಕಲಾ ಗೋರಕ್ಷನತಿ ಕಿಂ |
ಕಲವನಂಗೀಕರಿಸಿ ಮನದೊಳು |
ನಲಿದು ನೋಡುತ ರೋಮಪುಳಕದ ಗುಡಿಯು ನೆಗಹುತಲಿ ||
ಎಲೆ ಮಹಾಘನ ಮಹಿಮ ಕರುಣಾ |
ಜಲಧಿಯೋ ನಾನಾವ ಗತಿ[೧]ಯಲಿ |
ನಿಲುವೆನೆನುತಾ ಪ್ರಭುವಿಗೆಂದನು ಭಕ್ತಿಯುಕ್ತಿಯ[೨]ಲಿ || ೪೨ ||

ಆದೊಡಾಲಿಸಿ ಕೇಳು ಕರಿಣತೆ |
ಯಾದ ತನುವಿದು ಕಾಯಸಿದ್ಧಿಯ |
ಭೇದವಲ್ಲದೆ ನಿತ್ಯಮುಕ್ತಿಯ ಸಿದ್ಧಿಯಿಂತ[೩]ಲ್ಲ ||
ಈ ದುರಾಶೆಯ ಹೋದ[೪] ಹೊಲಬಿನ |
ಹಾದಿಯನು ಹುಗದಾ[೫] ಗುಹೇಶ್ವರ |
ಪಾದಕೆಱಗಲು ಸಿದ್ಧನಹಸೈ ಕಂದ ಕೇಳೆಂದ || ೪೩ ||

ನಂಬುವೊಡೆ ಹೇಳಾ ಗುಹೇಶ್ವರ |
ನೆಂಬನಾವನು ವಾಸಿಸಲು ತನ |
ಗಿಂಬದಾವುದು ಭಜಿಸಲೆಂತಾತನನು ಹೇಳೆನಲು ||
ಹಂಬಲಿಸಲೇಕಾ ಗುಹೇಶ್ವರ |
ನೆಂಬವನೆ ನಾನಿದಕೆ ಸಂಶಯ |
ವೆಂಬುದಿಲ್ಲೈ ಸತ್ಯ[೬]ವಿದು ಗೋರಕ್ಷ ಕೇಳೆಂದ || ೪೪ ||

ಗುಹೆಯೆಲ್ಲೈ ಕೇಳಾತ್ಮನಂತಾ[೭] |
ಗುಹೆಗೆ ಪತಿಯಾನೆನ್ನ ನಾಮದ |
ಮಹಿಮೆ [೮]ತಾನು ಗುಹೇಶ್ವರಾಂಕಿತವಾ[೮]ದ ಕತದಿಂದೆ ||
ಮಹಿಯ ಲೌಕಿಕರಲ್ಲ ಮಱಹಿಸಿ |
ವಿಹಿತವೆಂಬಂತಿರೆ ಗುಹೇಶ್ವರ |
ಸಹಜನಾಮವೆ ನಟಿಸಿದೆನು ನಾ[೯]ನೆನ್ನ[೧೦] ಲೀಲೆಯಲಿ[೯] || ೪೫ ||

---

೧ ಪರಿ ( ಅ, ಕ. ) ೨ ಭಾವದ ( ಜ. ) ೩ ನರಿವ ತೆರನ ( ಇ. ) ೪ ಹೊದ್ದ ( ಇ. ) ೫ ಬಿಡುವುದು ( ಗ. ) ೬ ತಥ್ಯ ( ಉ, ಜ. ) ೭ ತಹ ( ಕ, ಜ. ) ೮-೮ ಯದು ತಾನಾ ಗುಹೇಶ್ವರನಾ ( ಉ. ) ೯-೯ ನೆಂದ ಪ್ರಭುರಾಯ ( ಇ. ) ೧೦ ಲಿಂಗ ( ಗ. )

ಅದು ನಿಮಿತ್ತದಲಖಿಳ ಜೀವರ |
ಹೃದಯವಲ್ಲಭನೈ ಗುಹೇಶ್ವರ |
ನದಬ ಭೇದವ ತಿಳಿದು ಸೋಹಂಭಾವ ಬುದ್ಧಿಯಲಿ ||
ಸದಮಲಜ್ಞಾನೈಕನಾದರೆ |
ನಿಧಿಯ ಕಾಬನು ನಿತ್ಯಮುಕ್ತಿಯ |
ಪದಕೆ ಪತಿಯಹನಾತನೈ ಗೋರಕ್ಷ ಕೇಳೆಂದ || ೪೬ ||

ಜಾಣ ನುಡಿಗಳ ಬಿಡು ಗುಹೇಶ್ವರ |
ನೀನೆಯಾದೊಡೆ ನಿನ್ನ ಕೈಯಲಿ |
ದೇನು ಕುಱುಹಿನ ಲಿಂಗವಿದೆಯಿದಿರಿಟ್ಟು ಬೇಱೆ[1]ನಿಸಿ[2] ||
ನೀನು ತಾ[3]ನಾಗಿದ್ದ ಬಳಿಕಲಿ |
ದೇನು ಕಾರಣ ಕರ್ಮಭಕ್ತಿ |
ಜ್ಞಾನಸದಾಯತದಿಂಗಿ[4]ತಂಗಳು ಗುರುವೆ ಹೇಳೆಂದ || ೪೭ ||

ಅಂಗವಿಸಿ ತಾನೀ ಪ್ರಕಾರದ |
ಲಿಂಗನಿಷ್ಠೆಯನ[5]ಖಿಳರಿಗೆ ಮು |
ಕ್ತ್ಯಂಗನೆಯ ಮದುವೆಯನು ಮಾಡುವೆನೆಂದು ಕರುಣದಲಿ ||
ಹಿಂಗದೀ ಪರಿ ನಟಿಸಿದರೆಯೆನ |
ಗಂಗಲಿಂಗಕೆ ಭೇದ ಭಾವದ |
ಸಂಗವುಂಟೆಂದೆಂಬರೇ ಗೋರಕ್ಷ ಕೇಳೆಂದ || ೪೮ ||

ತೆತ್ತಿಸಿದ ಶಿವಲಿಂಗ ಭಕ್ತಿಯ |
ಹೇ[6]ತ್ತವೊಲು ವಚನಗಳ ನಾನೆಂ |
ಬತ್ತು ಕೋಟಿಯ ಹಾ[7]ಡಿದೆನು ಹಲವಂದ ಛಂದದಲಿ ||
ತಥ್ಯವನು ಹೇಳುವೊಡೆ ಭಕ್ತರ |
ಚಿತ್ತದಲಿ ಸುಜ್ಞಾನ ಬೀಜವ |
ಬಿತ್ತಲೀ ಪರಿ ನಟಿಸಿದೆನು ಗೋರಕ್ಷ ಕೇಳೆಂದ || ೪೯ ||

೧ ಪು ( ಒ, ಖ, ಚ, ಜ. ) ; ಸಿ ( ಅ. ) ೨ ತೋರಿಸುತ ( ಉ. ) ೩ ನೀ ( ಗ, ಚ, ಮು. ) ೪ ಸದಾಯ ( ಗ. ) ೫ ಲ ( ಒ, ಗ. ) ; ಯೊಳ ( ಉ. ) ೬ ಹೊ ( ಇ, ಐ, ಗ. ) ೭ ನಾ ( ಅ, ಮು. )

ನಾನು ಮಾಡಿದೆನೆಂಬುದೊಂದನು |
ಮಾನವನು ನಾ ನಟಿಸದಿದ್ದರೆ |
ತಾನದೆಲ್ಲಿಯದೈ ಧರಿತ್ರಿಯ ಮೇಲೆ ಶಿವಭಕ್ತಿ ||
ಮಾನವರಿಗುಪಕಾರಿಯಾಗಿರ |
ಲಾನು ತೋರ್ದೆನೀ ಪ್ರಕಾರವ |
ನಾನು ನಿರ್ಲೇಪನು ಕಣಾ ಗೋರಕ್ಷ ಕೇಳೆಂದ || ೫೦ ||

ಆವ ಪರಿಗಳಲಾರ ಬುದ್ಧಿಯ |
ಭಾವವಿಹುದವರವರಿಗಾ ಪರಿ |
ಭಾವವನು ಶುದ್ಧೈಸಿ ಸಮ್ಯಗ್ಜ್ಞಾನ ಜ್ಯೋತಿಯನು ||
ತೀವಿ ಸುಖಿಗಳ ಮಾಡಲೋಸುಗ |
ನೀ ವಿನೋದದಲಿದ್ದೆ ನಿಂತು ನಿ |
ರಾವಲಂಬನು ನಾನೆಲೈ ಗೋರಕ್ಷ ಕೇಳೆಂದ || ೫೧ ||

ಅಱಿಯದವರಿಗೆ ಅಂಗಲಿಂಗದ |
ತೆಱವಲಿಹೆ ನಾನೆನ್ನ ನೆಟ್ಟನೆ |
ಯಱಿದ ಮಹಿಮಗೆ ಸಚ್ಚಿದಾನಂದಸ್ವರೂಪನು ||
ಬಱಿಯ ಮಾತಲ್ಲಾದೊಡಿದ ಕೋ |
ಕುಱುಹು ತೆಱಹಿಲ್ಲೆಂಬ ಪರಿಯನು |
ನೆಱೆ ಪರೀಕ್ಷೆಯ ಕೊಂಬುದೆಲೆ ಗೋರಕ್ಷ ಕೇಳೆಂದ || ೫೨ ||

ತೊಳಪ ತೇಜದ ಮುಗಿಲು ಮಿಂಚನು |
ಝಳಪಿಸುವವೊ[1]ಲು ಕೈಯ ಕುಱುಹಿನ[2] |
ಬೆಳಗ [3]ಬಿದಿರಿಸಲುದರದಂ[3]ಗದಲೈಕ್ಯವಾಗಿರಲು ||
ಸೆಳೆದು ತುಡುಕಲು ಕೈಗೆ ಬಯಲಿ[4]ನ |
ಹೊಳಹದಾಗಿರೆ ಕಂಡು ಗುರುವಿನ |
ಸಿಲುಕಡೆಗೆ ಬೆಱಗಾಗುತಿರ್ದನು ಬಳಿಕ ಗೋರಕ್ಷ || ೫೩ ||

೧-೧ ನಿನ್ನುಯೆನ್ನನು | ನೆರೆದ ( ಇ. ) ೨-೨ ಲ್ ಕುರುಹಿನಿಂದಲಿ ( ಇ. ) ೩-೩ ಬೀರುತಲಂತರಂ ( ಇ ) ೪ ಲಂತರಂ ( ಉ. ) ೫ ಬೆಳಗಿ ( ಇ. )

ಸಾಕು ಸಾಕಿನ್ನೆಲ್ಲಿತನಕ ವಿ |
ವೇಕತನದಾಳಾಪವೆನಗಿ |
ನ್ನೇಕೆ ನಿಮ್ಮಯ ಮಹಿಮೆಯನು ನೋಡುವೊಡೆಯೆನ್ನಳವೆ ||
ಕಾಕುತನಗಳು ಹೋಗಲೆನಗೆ ನಿ |
ರಾಕುಳ ಶ್ರೀಸಂಗದಂಗ[೧]ದ |
ಜೋಕೆಯನು ಕೃಪೆ ಮಾಡಬೇಹುದು ಪ್ರಭುವೆ ಕೇಳೆಂದ || ೫೪ ||

ಗುರುವೆ ತಾನೆಂಬಂತೆ ಶಿಷ್ಯನು |
ಗುರುವೆ ಚೆನ್ನಾಗಿರೆ ಪರೀಕ್ಷಿಸಿ |
ಗುರುಪದವ ಬಳಿಕಿತ್ತು ಶಿಷ್ಯತ್ವವನು ತಾ ಹಿಡಿದು ||
ಗುರುಕುಮಾರಕನಹನು ದಿಟವಾ |
ಪರಿಯಲೆನ್ನನು ಪರಿಕಿಸದೆ ಸ |
ತ್ಪುರುಷನಹುದೋ ನೀನೆ ದಿಟ ಗೋರಕ್ಷ ಕೇಳೆಂದ || ೫೫ ||

ಲಕ್ಷಿಸಿದನೀ ಪರಿಯಲಾ ಗೋ |
ರಕ್ಷನಲಿ ಸಾಧಕತನಂಗಳ |
ಲಕ್ಷಪರಿಯಲಿ ಬಳಿಕಲಾತನ ನೋಡಿ[೨] ಕರುಣದಲಿ ||
ರಕ್ಷಿಸುವೆನೆಂದೆನುತ ಶೂನ್ಯದ |
ಲಕ್ಷವನು ದೀಕ್ಷೆಯನು ಮಾಡಿದ |
ಮೋಕ್ಷಮಾರ್ಗದಲಿಂದು ಗೋರಕ್ಷಂಗೆ ಪ್ರಭುರಾಯ || ೫೬ ||

ಪೊಂಗೆ ಪರಿಮಳವಿನಿದೆನಿಪ ಕ |
ಬ್ಬಿಂಗೆ ತನಿವಣ್ಣಾದ ತೆಱದಲಿ |
ಹಿಂಗದಾ ಗೋರಕ್ಷಗೀ ಪ್ರಭುಲಿಂಗನೊಲವಾಗೆ ||
ಮಂಗಳವೆ ನೆಲೆಯಾಯ್ತು ಮಾಯೆಯ |
ಹಂಗು ಹಿಂಗಿತು ರಾಜಯೋಗದ |
ಸಂಗ ಸಾಱಿತು ಬಳಿಕಲಾ ಗೋರಕ್ಷನಾಥಂಗೆ || ೫೭ ||

೧ ವಡಗ ( ಗ. )   ೨ ನೊಲಿದು ( ಅ, ಇ, ಕ. )

ಬಿದ್ದು ಹೋಯಿತು ಮನದ ಮಾಯಾ |
ಬದ್ಧ ಭವಿತನ ನಿಮಿಷಮಾತ್ರಕೆ |
ಹೊದ್ದಿ ಹೊಱೆಯೇಱಿದುದು ಸಮ್ಯಗ್ಜ್ಞಾನಸಾರಾಯ ||
ಶುದ್ಧ ಸೂಕ್ಷ್ಮಸ್ಥೂಲಕಾಯವ |
ಮೆ[1]ದ್ದು ಕಾರಣಕಾಯದಲಿ ತಾ |
ನಿದ್ದ ನಿಜದ[2] ವಿಳಾಸ[3]ದಲಿ ಗೋರಕ್ಷ ಜಗವಱಿಯೆ || ೫೮ ||

ಕೇಡಿ ತುಂಬಿಯ ಬಿಡದೆ ನೆನೆದೊಡೆ |
ನೋಡಲಾಕ್ಷಣ[4] ತುಂಬಿಯಾಗದೆ |
ಊಢಿಯಱಿಯಲು ವಜ್ರತನುಗೋರಕ್ಷ ನಿಮಿಷದಲಿ ||
ಮಾಡಿಕೊಂಡನು ಭಕ್ತಿಯಲಿ ಕೈ |
ಗೂಡಿ ವಿಮಲಾಕಾಶಕಾಯದ |
ಜೋಡಣೆಯನೆಮ್ಮಲ್ಲಮಪ್ರಭುಲಿಂಗಲೀಲೆಯಲಿ || ೫೯ ||

**ಅಂತು ಗತಿ ೧೯ಕ್ಕಂ ಪದ ೮೪೯ಕ್ಕಂ ಮಂಗಳಂ**

೧ ಗೆ ( ಉ. ) ೨ ನಿದ್ಧನಿರದೆ ( ಅ, ಒ, ಕ, ಗ, ಚ. ) ೩ ನಿರಾಳ ( ಉ. ) ; ನಿವಾಸ ( ಇ. )
೪ ಗಳೆ ( ಕ. )

# ಮುನಿಗಳಿಗೆ ಬೋಧಿಸಿದ ಗತಿ

**ವಚನ**

ಸಾಸುವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ । ಗಳಿಗೆಯ ಬೇಟವ ಮಾಡಿಹೆನೆಂಬ ಪರಿಯ ನೋಡಾ । ತನ್ನನಿಕ್ಕಿ ನಿಧಾನವ ಸಾಧಿಸಿಹೆನೆಂಬ ಬಿನ್ನಾಣ ತಪ್ಪಿತು ಗುಹೇಶ್ವರಾ ॥ ೧ ॥

ಜಗವ (ಜವನ) ಕದ್ದ ಕಳ್ಳನು ಅಗಲಿ ಮಿಕ್ಕು ಹೋದರೆ ಗಗನ ಅಗಲಕ್ಕೆ ಹಬ್ಬಿತ್ತು । ಅಲ್ಲಲ್ಲಿಗೆ ನೋಡಲು ಶರಣರ ಸಂಗವನರಸುವರೆಲ್ಲರು ಅಲ್ಲಲ್ಲಿಗೆ ನೋಡಲು ಸಾಧಕರೆಲ್ಲರು ಸಾಧಿಸ ಹೋಗಿ ಆ ಭೇದವನರಿಯದೆ ಕೆಟ್ಟರು ಗುಹೇಶ್ವರಾ ॥ ೨ ॥

ದೇಶ ಗುರಿಯಾಗಿ ಲಯವಾಗಿ ಹೋದವರ ಕಂಡೆ । ತಮಂಧ ಗುರಿಯಾಗಿ ಲಯವಾಗಿ ಹೋದವರ ಕಂಡೆ । ಕಾಮ ಗುರಿಯಾಗಿ ಬೆಂದು ಹೋದವರ ಕಂಡೆ । ನೀ ಗುರಿಯಾಗಿ ಹೋದವರನಾರನು ಕಾಣೆ ಗುಹೇಶ್ವರಾ ॥ ೩ ॥

**ಸೂಚನೆ**

ಸಾಧಕರು ಮೊದಲಾದ ವಿಷಯ ।
ವ್ಯಾಧಿಗತರಿಗೆ ತನ್ನ ಕರುಣಾ ।
ಮೋದಸುಧೆಯನು ಸುರಿದನೆಮ್ಮಯ ಗುರು ಗುಹೇಶ್ವರನು ॥

ಜ್ಞಾನವನು ಗೋರಕ್ಷಗನುಸಂ ।
ಧಾನವೆಸಿಸಿದ ಬಳಿಕ ತನ್ನ ಮ ।
ನೋನುರಾಗದಲಲ್ಲಮಪ್ರಭುಲಿಂಗ ಲೀಲೆಯಲಿ ॥
ಏನ ಮಾಡಿದ^೧^ನೆಂಬ ಹದನ^೧^ ನಿ ।
ಧಾನಿಸುವುದು ಶಿವೈಕ್ಯಭಕ್ತಿಯ ।
ಮಾನನಿಧಿಗಳು ಮುದದಲೀ ಪ್ರಭುಲಿಂಗ ಲೀಲೆಯಲಿ ॥ ೧ ॥

---

೧–೧ ಹದನನೊಲಿದು ( ಗ. )

ಪ್ರೀತಿಯಲಿ ಗೋರಕ್ಷಗನುಪಮ |
ನಾಥ ಪದವಿಯನಿತ್ತು ಬಳಿಕೊಲಿ |
ದಾತನಲಿ ಗುರುಪೂಜೆಯನು ಕೈಕೊಂಡು ಕರುಣದಲಿ ||
ಭೂತಳದಲಜ್ಞಾನಿಗಳನಾ |
ನೋ[೧]ತು ಸುಜ್ಞಾನಿಗಳ ಮಾಡುವೆ |
ನಾತಗಳನೆಂದೆನುತಲಾ ಪ್ರಭುರಾಯ ಬರುತಿರ್ದ || ೨ ||

ಬರುತ ಬರುತಲಿ ತನ್ನ ಸಾಧಿಸಿ |
ಕರುಣವನೆ ಸಲೆ ಪಡೆಯಬೇಕೆಂ |
ದಿರುತಲಿಹ ಸಾಧಕತಪೋಧನರಾಶ್ರಮವ ಕಂಡು ||
ಹರುಷದಲಿ ಸುಜ್ಞಾನಧರ್ಮವ |
ನೊರೆವೆನಿನ್ನೀತಗಳಿಗೆನುತಲಿ |
ಗುರು ಗುಹೇಶ್ವರಲಿಂಗ ಬಂದನು ತನ್ನ ಲೀಲೆಯಲಿ || ೩ ||

ಸಾಧನೆಗೆ ನಾನಾಪ್ರಕಾರಗ |
ಳಾದ ಬಗೆಗಳನೆಡೆವಿಡದೆ ಬೆಸ |
ಲಾದ ಮನಮಾಣಿಕವ ತಮ್ಮ ಶರೀರಶರಧಿಯಲಿ ||
ಸಾಧಿಸಿಯೆ ಶಿವಸಾಣೆಯಲಿ ಸಲೆ |
ತೀದು ಮಿಗೆ ಸುಜ್ಞಾನಕಾಂತಿಯ |
ನೆಯ್ದಿಸುವುದನು ಪೇಳ್ದನಾ ಪ್ರಭು ತನ್ನ ಭಕ್ತರಿಗೆ || ೪ ||

ಮಿಱುಪ ಮನವೆಂದೆಂಬ ಮಣಿಯನು |
ಕೊಱೆದು ನಿಷ್ಠಾವಜ್ರಸೂಚಿಯ |
ಲುಱುವ ಜೀವಾನಿಲನ ದಾರವ ಹಿಡಿದು ಬೆಂಬಿಡದೆ ||
ನೆಱೆ ಶಿಖಾರತ್ನವನು ಮಾಡಿಯೆ |
ಮೆಱೆವ ನಿತ್ಯಾನಂದಪದವಿಯ |
[೨]ನಿಱಿಗೆಯನು ನಿಯಮಿಸಿದನಾ ಪ್ರಭುಲಿಂಗ ಭಕ್ತರಿಗೆ[೨] || ೫ ||

---

೧ ನಿಂ | ತೋ ( ಉ. ) ; ನಿ | ನ್ನೋ ( ಗ, ಚ. ) ೨-೨ ಲಿರಿಸುವುದ ಬೋಧಿಸಿದನೆಮ್ಮಯ ಗುರು ಗುಹೇಶ್ವರನು ( ಇ. )

ಲೆ¹ಪ್ಪವಿಲ್ಲದೆಯೂರ್ಧ್ವಬಿಂದುವೆ |
ನಿಪ್ಪ ಪಶ್ಚಿಮವಾಹಿನಿಯಲಿಂ |
ತೊಪ್ಪದಿಂದಲಿ ಮಿಂದು ಮೀಱಿದ ಮೂಲನಾದವನು ||
ಅರ್ಪಿತಾ ಪ್ರಾಣ²ಸ್ವರೂಪದ |
ಸುಪ್ರಭೆಯಲಿಹ ಸುಖವನಿತ್ತನು |
ತಪ್ಪದಾ ಸಾಧಕತಪೋನಿಧಿಗಳಿಗೆ ಪ್ರಭುರಾಯ || ೬ ||

ಬಳಿಕಲಾ ಸಾಧಕತಪೋನಿಧಿ |
ಗಳಿಗೆ ನಿರುಪಮ ನಿಃಪ್ರಪಂಚಿನ |
ನೆಲೆಯ ನೆಟ್ಟನೆ ಕೊಟ್ಟು ತಾನಲ್ಲಿಂದ ನಡೆಗೊಂಡು ||
ತಳಿತ ತರುಲತೆ ಗುಲ್ಮತೃಣಸಂ |
ಕುಲವ³ ಚರಿಸುವ ಖಗಮೃಗದ ಕಳ |
ಕಳದ ಕಾನನಮಧ್ಯದಲಿ ಬರುತಿರ್ದ ಪ್ರಭುರಾಯ || ೭ ||

ಕೊಲುವುದನೆ ಸಲೆ ಕೊಂದು ಹಸಿವಿನ |
ಹೊಲೆಯನಳಿಯದೆ ನಾಡನಾಯ್ಗಳ |
ಬಳಿವಿಡಿದು ನಾನಾ ಪ್ರಕಾರದ ಜೀವಜಾಲವನು ||
ಅಳಿದು ಹೊಟ್ಟೆಯ ಹೊರೆದು ದುರ್ಗತಿ |
ಗಿಳಿವ ಲುಬ್ಧನನಂದು ಕಾನನ |
ದೊಳಗೆ ಕಂಡನು ಕರುಣದಿಂದಾ ಪ್ರಭು ಸಮೀಪದಲಿ || ೮ ||

ತನ್ನ ಕಣ್ಗೆದಿರಾದ ಮೂಢನ |
ನಿನ್ನು ತಿಳುಹದೆ ನಾನು ಹೋಹುದು |
ನನ್ನ ಹೆಮ್ಮೆಗೆ ಕೊಱತೆಯೆನುತ ಕಿರಾತಗೊಲವಿನಲಿ ||
ತನ್ನ ಕರುಣದ ಸಿದ್ಧರಸ ಕಾ |
ಬೊರ್ನ್ನಿನಂದದ ಖಳನನೊಳ್ಳಿಹ |
ಹೊನ್ನ ಮಾಡಲೆ ಬೇಹುದೆನುತಾ ಪ್ರಭು ನಿರೀಕ್ಷಿಸಿದ || ೯ ||

---

೧ ಒ ( ಅ. ); ಹೆ ( ಇ. ) ೨ ಪ್ರಣವ ( ಒ, ಕ ) ೩ ದಿ ( ಇ, ಉ, ಋ, ಗ. )

ನೆಲಸಿದಾಹಂಕಾರಮೃಗವನು |
ಸುಲಲಿತಾಂತಃಕರಣಶುನಕನ |
ಬಳಿಸಲಿಸಿ[೧] ಮಾರುತಶರಾಸನವನು ದೃಢೀಕರಿಸಿ ||
ಚಲಿಸದೇಕೋಭಾವಶರದಲಿ |
ಕೊಲುವ ಭೇದವನಾತ್ಮ ತೃಪ್ತಿ[೨]ಗೆ |
ನಿಲುವ ನಿಜಗೆಯ ಪೇಳ್ದನಾ ಪ್ರಭು ಬೇಂಟೆಕಾಱಂಗೆ || ೧೦ ||

ಉಸುರುವಲೆ ಮೃಗಾಡು ಬುದ್ಧಿಯು |
ಬೆಸುಗೆ ಕೈ ನಿಶ್ಚಲದ ಮನವೇ |
ಮಿಸುಪ ಕಂಗಳು ತಿಳಿವೆ ಲುಬ್ಧಕನಾಗಿ ಹಮ್ಮೆಂಬ ||
ಅಸಮ ಖಗಮೃಗಜಲಚರವನೊಂ |
ದಿಸುತ ಸುಜ್ಞಾನಾಗ್ನಿಯಲಿ ಪಚ |
ನಿಸಿಯೆ ದಣಿಯುಣಕಲಿಸಿದನು ಪ್ರಭು ಬೇಂಟೆಕಾಱಂಗೆ || ೧೧ ||

ಈ ಪರಿಯಲಾ ಸರ್ವಜೀವದ |
ಯಾಪರವನುಪದೇಶಿಸಿಯೆ ನಿ |
ರ್ಲೇಪದಲಿ ನಿಲಿಸಿದ ಪುರಾತನನಾ ಕಿರಾತಂಗೆ ||
ಆ ಪರವ ನೆಱೆಯಱಿಪಿ ನಿತ್ಯ |
ಶ್ರೀಪದವನೊಲಿದಿತ್ತು ತೆರಳಿದ |
ನಾ ಪರಬ್ರಹ್ಮಸ್ವರೂಪ ಪ್ರಭು ವಿನೋದದಲಿ || ೧೨ ||

ಕಾಮಿನಿಯರಿಗೆ ಸೋತು ಕಾಮನ |
ಸೀಮೆಯಲಿ ಸಲೆ ಸತ್ತು ಹುಟ್ಟುವ |
ಕಾಮಿಗಳಿಗಾ ಕುಂಡಲೀಶಕ್ತಿಯು[೩] ಮಹಾರತಿಯ ||
ನೇಮಿಸಿಯೆ ನಿರ್ಮಾಯದಲಿ ನಿ |
ಸ್ಸೀಮನಿತ್ಯಾನಂದಸುಖದು |
ದ್ದಾಮತೆಯನೊಲಿದಿತ್ತನಾ ಪ್ರಭುಲಿಂಗ ಕೆಲಬರಿಗೆ || ೧೩ ||

---

೧ ವಿಡಿದು ( ಒ, ಕ. ) ೨ ತುಷ್ಟಿ ( ಇ. ) ೩ ಸ್ಥಾನದ ( ಅ, ಕ. )

ರಸದ ಸಿದ್ಧಿಯ ¹ಸಸಿನೆಯುಱಿಯದೆ |
ವ್ಯಸನ¹ವಿಧಿಯಲಿ ಸತ್ತುಹುಟ್ಟುವ |
ಪಶುಗಳಿಗೆ ಬಳಿಕಂತರಂಗದ ಬಿಂದುವೆಂದೆಂಬ ||
ರಸವ ಕಟ್ಟಿ ಭಯಂಗಳನು ವ |
ರ್ಜಿಸುವ ಪರಿಯನು ಕೆಲಬರಿಗೆ ಬೋ |
ಧಿಸಿದನೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ || ೧೪ ||

ಬಿಂದುವೇ ರಸವೌಷಧಿಯೆ ನಿ |
ಸ್ಪಂದವಾಯು ಮನಸ್ಸು ಮೂಷಿಕೆ |
ಸಂದ ಮಣಿಪೂರಕವೆ ಕಿಚ್ಚುನ್ಮನಿಯೆ ರಸಘುಟಿಕೆ ||
ಮುಂದೆ ರುದ್ರೇಶ್ವರ ಸದಾಶಿವ |
ರಿಂದ ಮೀಱಿದ ಸುಖವೆ ಸಿದ್ಧಿಗ |
ಳೆಂದು ನಿಯಮಿಸಿ ಕೆಲರನಾ ಪ್ರಭು ಸಿದ್ಧರೆನಿಸಿದನು || ೧೫ ||

ಏನ ಹೇಳುವೆನೀ ಪರಿಯಲ |
ಜ್ಞಾನಿಗಳು ಹಲಬರಿಗೆ ಸಲೆ ಸು |
ಜ್ಞಾನಮಾರ್ಗವ ತೋಱಿ ಸದ್ಯೋನ್ಮುಕ್ತರೆನಿಸುತಲಿ ||
ತಾನೆ ತನ್ನಯ ಕರುಣದಿಂದಲಿ |
ಮಾನವರ ಮನದಂಧಕಾರಕೆ |
ಭಾನುವಾದನು ಗುರು ಗುಹೇಶ್ವರಲಿಂಗ ಲೀಲೆಯಲಿ || ೧೬ ||

ಬರುತ ಬರುತೀ ಪರಿಯಲುತ್ತರ |
ಧರಣಿತಳದಲಿ² ಋಷಿಗಳಾಶ್ರಮ |
ವಿರಚಿಸುವ ತನಿರಸದ ಪರಿಪಾಕ³ದ ಫಲಾವಳಿಯ ||
ತರುಲತಾಳಿಯ ತಿಳಿಗೊಳಂಗಳ |
ವರ ನಿನಾದದ ವಿಹಗವಿತತಿಯ |
ನೆರವಿಗಳಲೊಪ್ಪುವ ಮಹಾಕಾನನವ ಪ್ರಭು ಕಂಡ || ೧೭ ||

---

೧-೧ ನರಿಯದುದ್ಯೋ | ಗಿಸಿದ ( ಒ, ಖ, ಗ. ) ; ಸೇವೆಯರಿದು | ದ್ವೇಶ ( ಉ. ) ೨ ಯಲ್ಲಿಯ ( ಉ. ) ೩ ಲಪರಿಮಿತ ( ಚ. )

ಕಾಲಕಾಲದ ನಿತ್ಯಕರ್ಮವ |
ಮೋಳವಿಸಿ ಬಳಿಕಾ ಕ್ಷುಧಾಗ್ನಿ |
ಜ್ವಾಲೆಯಾಹುತಿಗಾಗಿ ಬಹ ಭಿಕ್ಷುಕಮುನೀಶ್ವರರ ||
ವೇಳೆಯಱಿದುಚಿತದಲಿ ಸಂಘ[1]ಲ |
ವಾಳಿಗಳನೊಲಿದೀವ ತರುಲತೆ |
ಯೋಳಿ ವನದಲಿ ಮೆಱೆವುತಿರ್ದುವು ಕೂಡೆ ಕತ್ತಲಿಸಿ || ೧೮ ||

ತೃಷೆಯು ಕಳೆವರು ಬನ್ನಿ ಹೊಟ್ಟೆಯು |
ಹಸಿವನಳಿವರು ಬನ್ನಿ ಬಟ್ಟೆಯು |
ಬಿಸಿಲಿನಲಿ ಧೂಪಿಸಿದ ಪಥಿಕರು ಬನ್ನಿಯೆಂದೆ[2]ನುತ ||
ಹೊಸತೆನಿಪ ತನಿವಣ್ಣ ತರುಗಳ |
ಪಸರಿಸಿದ ಕೊಂಬಿನಲಿ ಕುಳ್ಳಿತು |
ವುಸುರಿಕೊಡುವಂತುಲಿದುವಲ್ಲಿಯ ಶುಕಪಿಕಾಳಿಗಳು || ೧೯ ||

ಆರು ಬೇಡಿದವರಿಗೆ ಬೇಡಿದ |
ಭೂರುಹಂಗಳ ಫಲಗಳಿವೆಯೆಂ |
ದೋರಣಿಸಿ ಕರೆಕರೆವವೊಲು ನಾನಾ ಪ್ರಕಾರದಲಿ ||
ನಾರವೆನಿಪ ನಿನಾದಗಳು ಸಲೆ |
ಪೂರವಿಸಲಾ ವನದೊಳಗೆ ಗಂ |
ಭೀರಸ್ವರ[3]ದಲಿ[4] ಕೂಗುತಿರ್ದುವು ಕೂಡೆ ಖಗನಿಕರ || ೨೦ ||

ನಡೆವ ವೃದ್ಧ ಮುನೀಂದ್ರರಿಗೆ ಕೈ |
ಗುಡುವ ಕಪಿಗಳು ಕಾಲಕರ್ಮವ |
ನಡೆಸಲೆಂದು ನದೀತಟಾಕದ ಬಿಸಿಯು ಬಿಸಿಲೊಳಗೆ ||
ಬಿಡದೆ ಬಿದ್ದಿಹವರಿಗೆ ಪಚ್ಚೆಯು |
ಕೊಡೆಯುವೊಲು ನೆಳಲಾಗಿ ಗಿಳಿಗಳ |
ಗಡಣ ಮಂಡಳಿಸಿಹವು ಗಗನದೊಳಾ ವನಾಂತರದೆ || ೨೧ ||

---

೧ ಶ್ಚ ( ಆ, ಜ. ) ೨ ಸೀವೆ ( ಗ, ಚ. ) ೩ ರವ ( ಖ. ) ೪ ತನದೊಳು ( ಉ. )

ಬಡ ತಪಸ್ವಿಯ ಬಹಳ ಜಡೆಗಳ |
ಮುಡಿಯ ತಾನೇ ಮಾಡಿ ಬಂಧಿಸಿ |
ಬಿಡದೆ ಬಿಗಿದಿಹವುತ್ತಮಾಂಗದ ಬಾಲಸರ್ಪಗಳು ||
ಬಿಡದೆ ಪವನನಿರೋಧಿಗಳ ಜೆವ |
ರೊಡಲನಾಱಿಸಲೆಂದು ಕಿವಿಗಳ |
ಕೊಡವುತಿಹ ಮಱಿಯಾನೆ ಮೆಱಿದುವು ತದ್ವನಾಂತರದೆ || ೨೨ ||

ಆಸನಸ್ಥಿರರಾಗಿ ತಪದುಪ |
ವಾಸದಿಂದಿಹವರಿಗೆ ನೆಮ್ಮುವ |
ದಾಸಿಯಾಗಿಯೆ ಮಂಡಲಿಸಿ ಮಲಗಾದ ಹೆಬ್ಬುಲಿಯು ||
ಬೇಸಱದೆ ಸೊಂಡಿಲಲಿ ಮೊಗೆತಂ |
ದಾಶ್ರಮಕೆ ತಣ್ಣೀರ ಚಳೆಯುವ |
ಸೂಸುತಿರುತಿಹ ಭದ್ರಹಸ್ತಿಯಲೊಪ್ಪಿತಾ ವನವು || ೨೩ ||

ಮೇಳವಿಸಿ ಮುಂಜಿಗಳ ಮಾಡುವ |
ಬಾಲಕರಿಗಾ ಮೆದೆಯ ಹುಲ್ಲನು |
ಸೀಳಿ ಸೀಳಿ ಸಮೀಪದಲಿ ಕೈಗೈವ ಕರಡಿಗಳ ||
ಲೀಲೆಯಲಿ ಯಜ್ಞೋಪವೀತದ |
ನೂಲಿಗೆಂದಂಬುಜದ ನಾಳವ |
ನೋಳಿಯಿಂ ತಂದಿಡುವ[೧] ಹಂಸೆಯಲೊಪ್ಪಿತಾ ವನವು || ೨೪ ||

ನಂದಬಾರದ ಹೋಮದಗ್ನಿಯ |
ನಂದಲೀಯದೆ ಶುಷ್ಕಸಮಿಧೆಯ |
ತಂದು ನೆಱಿ ಹೊತ್ತಿಕ್ಕಿ ಹೊಗೆಸುವ ವೃದ್ಧಕಪಿಗಳಲಿ ||
ಬಂದು ಪಕ್ಕವ ಬೀಸಿ ಮಾರುತ |
ನಿಂದಲಗ್ನಿಯ ಪಟುವ ಮಾಡುತ |
ನಿಂದು ನರ್ತಿಸಿ ನಲಿವ ನವಿಲಿನಲೊಪ್ಪಿತಾ ವನವು || ೨೫ ||

---

೧ ದೀವ ( ಉ, ಖ, ಚ, ಜ. )

ಸಾವಧಾನದಲೊಱಗಿ ಸಲೆ ಸಂ |
ಭಾವಿತದಲಿಹ ಮುನಿಗಳಿಗೆ ನಿ |
ದ್ರಾವಿಳಾಸತೆ ಲೋಗರಿಂದಳಿಯದ ಉಪಾಯವಲಿ ||
ತಾವೆ ಬಂದಾ ಪರ್ಣಶಾಲೆಯ |
ನೋವಿ ಬಾಗಿಲ ಕಾಯ್ದುಕೊಂಡಿಹ |
ವಾ ವನಾಂತದೊಳಲ್ಲಿಗಲ್ಲಿಗೆ ಪಂಚಮುಖನಿಕರ || ೨೬ ||

ಕೆಲರು ವೇದವನೋದುವರು ಕೆಲ |
ಕೆಲರು ಶಾಸ್ತ್ರವ ಕೇಳುವರು ಕೆಲ |
ಕೆಲರು ವೇದಾರ್ಥವನುಪನ್ಯಾಸವನು[೧] ಮಾಡುವರು ||
ಕೆಲರು ದರ್ಶನತರ್ಕಭೇದಂ |
ಗಳನು ತಿಳಿವರದೆಲ್ಲಿ ನೋಡಲು |
ತುಳುಕುತಿರ್ದುದು ಶಬ್ದಸಂಭ್ರಮವಾ ವನಾಂತದಲಿ || ೨೭ ||

ಸಾರಣೆಯ ಮಾಡೆಂಬುವರು ದೇ |
ಹಾರಕೆಡೆ ಮಾಡೆಂಬುವರುವುಪ |
ಹಾರಕೊಳ್ಳಿಹ ಕಂದಮೂಲವ ತನ್ನಿಯೆಂಬುವರು ||
ಸಾರ ಮಂತ್ರಾ[೨]ಗಮಗಳಲಿ ಕೆ |
ಯ್ಯಾರೆ ಭೂತಿಯು[೩] ಮಾಡುವರುಗಳು |
ನಾರಸೀರೆಯ ನೆಯ್ವುವರು [೪]ಮೆಱ[೩]ದರು ವನಾಂತದಲಿ[೪] || ೨೮ ||

ಬೇ[೫]ಹ ಧರ್ಮದ ಬೀಡು ಕರ್ಮಸ |
ಮೂಹದಾಗರ ಸಗುಣಯೋಗ |
ವ್ಯೂಹದೊಡ್ಡಣೆ ಜಾತಿವರ್ಣಾಶ್ರಮದ ನೆಲೆಗಾ[೬]ಡು ||
ಸ್ನೇಹದಂಬುಧಿ ಯಜ್ಞವಿಧಿಯ ವಿ |
ವಾಹಶಾಲೆಯಿದೆಂಬ ಋಷಿಸಂ |
ದೋಹದಾಶ್ರಮವಿದ್ದುವಾ ಕಾನನದ ಮಧ್ಯದಲಿ || ೨೯ ||

---

೧ ಮಂತ್ರವ ಜಪವ ( ಉ. ) ೨ ಧಿವ್ಯಾ ( ಕ. ) ೩ ಹೋಮವ ( ಜ. ) ೪-೪ ಗಳಲೊಪ್ಪಿತಾನವವು ( ಚ. ) ೫ ದೇ ( ಇ, ಉ, ಗ. ) ೬ ವೀ ( ಇ. ) ; ನಾ ( ಖ. )

ಉಡುವುದಾದೊಡೆ ನಾರು ಹಸಿದುಂ ।
ಬೊಡೆ ಸದಾ ವನತರುಫಲಂಗಳು ।
ತೊಡುವುದಾದೊಡೆ ಭೂತಿ ಹಕ್ಕೆಯ[1] ಹಾಸ ನೋಡಿದೊಡೆ ॥
ಕಡವಸಗಳಿಹ ವಾಸವಾದೊಡೆ ।
ಯಡವಿ[2]ಯೀ ಸಂಸಾರ ಮುನಿಗಳ ।
ಬಿಡದಲಾ ಎಂದೆನುತಲ[2]ಲ್ಲಮ ನೋಡಿ ಬೆಱಗಾದ ॥ ೩೦ ॥

ನಾರುಚೀರೆಗೆ ಮರನುಗಳನಾ[3] ।
ಹಾರದಾಸೆಗೆ ಕಂದಮೂಲವ ।
ನೀರತೃಷೆಗನವರತ ನಾನಾ ನದಿ ಸರೋವರವ ॥
ಹಾರಿಕೊಂಡಿಹ ಘೋರತರ ಸಂ ।
ಸಾರ ಮುನಿಗಳ ಬಿಡದುವುಳಿದರ ।
ನಾರು ಬಲ್ಲರು ಸುಡಲೆನುತಲಲ್ಲಮನು ಬೆಱಗಾದ ॥ ೩೧ ॥

ಸ್ನಾನ ಜಪ ತಪ ನಿತ್ಯ ನಿಯಮ ।
ಧ್ಯಾನ ವೇದಾಧ್ಯಯನ ಯಜ್ಞ ವಿ ।
ಧಾನ ಮೊದಲಾಗಿರ್ದ ನಾನಾ ವಿಧದ ಗೊಡವೆಗಳ ॥
ಏನ ಮಾಡಿದರೇನು ಜೀವದ ।
ಹಾನಿ ಹರಿಬವನ[4]ಱಿಯಲಱಿಯರು ।
ಕಾನನವ ಹೊಕ್ಕೇನು ಫಲವೆನುತಿರ್ದನಲ್ಲಮನು ॥ ೩೨ ॥

ಎಲ್ಲಿತನಕಲಿ ಮಾಯೆ ತನಗು ।
ಳ್ಳಲ್ಲಿ ಮುಟ್ಟಲಿ ಕಲಿತು ಜೀವವ ।
ಕೊಲ್ಲದಿರಲಿಕೆ ಬಾರದವ ಕೊಂದವಗೆ ಕೊಲೆ ಬಿಡದು ॥
ಎಲ್ಲಿ ಹೊಕ್ಕೊಡೆ ಮಾರಿ ತನ್ನಯ ।
ಹಲ್ಲ ಬಾಯಲಿ ತಿಂದು ತೇಗದೆ ।
ನಿಲ್ಲದವರನು ಸುಡಲಿ ಮಾಟವನೆಂದನಲ್ಲಮನು ॥ ೩೩ ॥

೧ ಮಲಗುವ ( ಜ. ) ೨–೨ ಮುನಿಗಳ ಬಿಡದಲಾ ಎನು । ತೊಡನೊಡನೆ ಕರುಣದಲಿಯ ( ಇ. )
೩ ಗಳನು ಅ ( ಇ. ) ೪ ಹ ( ಉ, ಋ, ಚ. )

ಮಾಟದಲಿ ಗತವಾಗಿ ಭವಭವ |
ಕೋ[1]ಟಿಯಲಿ ಸಂಸಾರದುಃಖದ |
ಕೂಟವನೆ ಕೈಗೈವ ಮುಖ್ಯಮುನೀಂದ್ರರೆಲ್ಲರನು ||
ದಾಟಿಸುವೆನಾ ಭವಭವಾಬ್ಧಿಯ |
ನಾಟಿಸುವೆನವರಱಿವಿಗಱಿವನು |
ಮಾಟವೆಲ್ಲವ ಮಾಣಿಸುವೆನೆನುತಿರ್ದ ಪ್ರಭುರಾಯ || ೩೪ ||

ಮುಂದೆ ಮಾಡುವ ಮಾಟಕೂಟದ |
ದಂದುಗಂಗಳ ತನುಮನಂಗಳ |
ಹೊಂದದೋಜೆಯು ಮಾಟದಿಂದಿವರುಗಳ ಬಗೆಬಗೆಯ ||
ಸಂದ ಮಾಯಾಪಾಶದಾಶಾ |
ಬಂಧನಂಗಳ ಬಿಡಿಸಿ ಪರಮಾ |
ನಂದ ಸುಖಿಗಳ ಮಾಡುವೆನು ನಾನೆನುತ ಗುರು ಬಂದ || ೩೫ ||

ಅದಱೊಳಗೆ ಕೆಲಕೆಲರು ಯಜ್ಞದ
ವಿಧಿಯ ವಿರಚಿಸುತಿರಲು ಕಾಣುತ |
ಅದಱಲೇನುಂಟಕಟ ಬಂಧನಮೋಕ್ಷವಾದಪುದೆ ||
ಇದಿರಲಿದಿರಿಟ್ಟಾವ ಕರ್ಮವ |
ನೊದಗಿ ಮಾಡಲು ದುಃಖವಲ್ಲದೆ |
ಸದಮಲ ಸ್ವಾತಂತ್ರಸುಖವಿಲ್ಲೆಂದ ಗುರುರಾಯ || ೩೬ ||

ಜನನಮರಣಭ್ರಮೆಯ ಭವಬಂ |
ಧನಕೆ ತಾಱದ ಕರ್ಮವೇ ಕಾ |
ರಣವಲಾ ಕೈವಲ್ಯಪದವಿಯನೊಲಿವ ಜೀವರಿಗೆ ||
ಇನಿತನೇನು[2]ವನಱಿಯಲಱಿಯದೆ |
ಮನಸಿನಿಚ್ಛೆಗೆ ಹರಿವುದನುಚಿತ |
ವೆನುತಲುಪದೇಶಿಸಿದನಾ ಪ್ರಭು ಮುನಿಜನಂಗಳಿಗೆ || ೩೭ ||

---

೧ ತೋ ( ಉ. ) ೨ ಅನುವ ಸೇಮ ( ಉ. )

ಲೇಪಿಸಿದಹಂಕಾರವೇ ಪಶು |
ಯೂಪಕಂಭವೆ ಮನಸು ಪವನ |
ಸ್ಥಾಪಿತವೆ ಬಂಧಿಸುವ ಪಾಶ ವಿವೇಕವೇ ಶಸ್ತ್ರ ||
ವ್ಯಾಪಿಸಿದ ಸುಜ್ಞಾನವಹ್ನಿ ಸ |
ದಾ ಪುನೀತಮಯಾತ್ಮನಧ್ವರಿ |
ಯಿಾ ಪರಿಯ[1]ನರುಹಿಸಿದನಾ ಪ್ರಭು ಪರಮ ಮುನಿ[1]ಗಳಿಗೆ || ೩೮ ||

ಮಿಥ್ಯವೆಲ್ಲವು ಹೋಮದಾಹುತಿ |
ತಥ್ಯವೇ ಶೇಷಪ್ರಸಾದವು |
ನಿತ್ಯನಿರ್ಮಲ ನಿಜದ ಪರಮಾನಂದವೇ ತೃಪ್ತಿ ||
ಸತ್ಯ ಶಾಶ್ವತ ಸ್ವಸ್ವರೂಪದ |
ತತ್ವ ತಾನೆಂದರಿವುದೇ ಫಲ |
ವೃತ್ತಿಯೆಂದುಪದೇಶಿಸಿದನಾ ಪ್ರಭು ಮುನಿವ್ರಜಕೆ || ೩೯ ||

ಜಪವ ಮಾಡಿದೊಡೇನಹುದು ಮೇಣ್ |
ತಪವ ಮಾಡಿದೊಡೇನಹುದು ಮೇ |
ಣಪರಿಮಿತದುದ್ದೇಶಖಂಡಜ್ಞಾನಮಾರ್ಗದಲಿ ||
ಉಪನಯನ ಮೊದಲಾದ ನಾನಾ |
ಚಪಳತರವಹ ಬಾಹ್ಯಭಾವನೆ |
ಯುಪಚರಣೆ ಮುನಿಗಳಿಗೆಯನುಚಿತವೆಂದನಲ್ಲಮನು || ೪೦ ||

ಎನುತ ಯಾಗಕೆಯಾತ್ಮಯಾಗವ |
ನನುರತಿಗೆ ನಿಜರತಿಯ ದೇವಾ |
ರ್ಚನೆಗೆ ಹೃದಯವನುಪನಯನಕಾ ನಿಜ ನಿರೀಕ್ಷಣೆಯ ||
ಎನಿತು ಬಾಹ್ಯದ ಕರ್ಮಭಕ್ತಿಗ |
ಳನಿತನಂತಮಾರ್ಗದಲಿ ಸೂ |
ಚನೆಯ ಮಾಡಿದನಲ್ಲಮಪ್ರಭು ಪರಮ ಮುನಿಗಳಿಗೆ[2] || ೪೧ ||

---

೧-೧ ಲರುಹಿದನು ಪ್ರಭು ತಾ ಮುನಿಜನಂ ( ಜ. ) ೨ ಲಿಂಗಲೀಲೆಯಲಿ ( ಕ. )

ಆವರು ತಿಳಿದರು ಮಾಯೆ ಹುಟ್ಟಿದ |
ದಿವಸದಲಿ ದೂರ್ವಾಸಮುನಿಪತಿ |
ವಿವರಿಸಿದ ಹದನಿಂದಲಾ ಪ್ರಭುವೀತನಹುದೆಂದು ||
ತವಕದಲಿ ತಮತಮ್ಮ ಮನದು |
ತ್ಸವವ ಹಡೆದು ಕೃತಾರ್ಥರಾದರು |
ಭುವನದೊಳಗೆಮ್ಮಲ್ಲಮಪ್ರಭು ಲಿಂಗಲೀಲೆಯಲಿ || ೪೨ ||

ಸಾವ ಹುಟ್ಟುವ ವಿಧಿಯ ಮಾನವ[೧] |
ಜೀವಜಾಳಕೆಯವರವರು ಮು |
ನ್ನಾವ ಕಾಯಕವಿಡಿದು ತಾವಿಹರಾ ಪ್ರಕಾರದಲಿ ||
ಶೀವಿಯಂತರ್ನಿಷ್ಠೆಯಲಿ ನಾ |
ನಾವಿಧೋಪಾಯವನು[೨] ಬೋಧಿ[೩]ಸಿ |
ಪಾವನವ ಮಾಡಿದನು ಸರ್ವರನೆಮ್ಮ ಗುರುರಾಯ || ೪೩ ||

ಭೂತನಾಥನ ನೇಮದಿಂದಲಿ |
ಭೂತಳದೊಳಿಹ ಕಾರಣೀಕರ |
ನೀತರದಲವರವರಿಗುಚಿತಜ್ಞಾನಮಾರ್ಗದಲಿ ||
ಓತು ಸದ್ಯೋನ್ಮುಕ್ತರೆನಿಸಿದ |
ನಾತಗಳನೆಲ್ಲರನು ಲೀಲಾ[೪] |
ಪ್ರೀತಿಯಿಂ[೫]ದೆಮ್ಮಲ್ಲಮಪ್ರಭುಲಿಂಗ ಲೀಲೆಯಲಿ[೫] || ೪೪ ||

**ಅಂತು ಗತಿ ೨೦ಕ್ಕಂ ಪದ ೮೯೩ ಕ್ಕಂ ಮಂಗಳಂ**

---

೧ ಬಂಧನ ( ಇ. ) ೨ ದಲಿ ( ಕ. ) ೩ ಜೋಡಿ ( ಉ. ) ೪ ಶ್ರೀಗುರು ( ಜ. ) ೫-೫ ದೆಲ್ಲರನು ನಮ್ಮಯ ಗುರು ಗುಹೇಶ್ವರನು ( ಇ. )

# ಬಸವೇಶ್ವರನು ಶೂನ್ಯಸಿಂಹಾಸನವನ್ನು ರಚಿಸಿದ ಗತಿ

**ವಚನ**

ಅಷ್ಟದಳಕಮಲದ ಹೂಗಲ್ಲ ವಿಡಿದು ಶೂನ್ಯಸಿಂಹಾಸನಕ್ಕೆ ಧವಳಾಲಯವೆತ್ತಿತ್ತು । ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮದ್ವಾರಮಂ ತೆಗೆದು ನೋಡುವರೆ ವಿಪರೀತ । ಏಕೋಭಾವವೆಂಬುದೊಂದು ಕಂಭ । ಅದಕ್ಕೆ ಅನೇಕ ಚಿತ್ರಂಗಳಡಗಿದ ಪ್ರಭೆಯೊಳಗೆ ಬ್ರಹ್ಮರಂಧ್ರವೆಂಬ ಮಸ್ತಕದ ಮೇಲೆ ಶವಳಹಾರದ ಪಂಜರಮಂ ಕಟ್ಟಿ ಪಂಚ ಮೌಕ್ತಿಕದ ಮಾಲೆಯನಿಳಿಯಬಿಟ್ಟು ಮಲಕು ಮಲಕಿನ ನಡುವೆ ಕಟ್ಟಿದುವು ನವರತ್ನದ ಗೊಂಡೆಯಂಗಳು । ಕಾಳಿಕೆಯ ಕಪ್ಪಡವದಕೆ ಮೇಲು ಹೊದಕೆ । ಉಲುಹಿನರಳೆಲೆಯ ಬಳಸುದೋರಣವ ಕಟ್ಟಿ ದಶವಾಯುಗಳನೊಂದುಮಾಡಿ ಲಿಂಗಸುಖವಾಯುವ ಸಂತೈಸಿ ಆಲವಟ್ಟವಂ ಮಾಡಿ ಲಂಬಿಸಿದ ಮಂದಾನಿಲನಂ ಮಲಗಂ ಮಾಡಿ ಹರುಷವನೀವ ವಸಂತನ ಚೌಕವಟ್ಟಿಗೆಯ ಆಸನವಂ ಮಾಡಿ ನವನಾಳಸುನಾಳದೊಳು ಮೊರೆವ ಶಬ್ದಮಂ ಶುಕಪಿಕಭ್ರಮರಾಮೋದಮಂ ಮಾಡಿ ಪರಮಶಾಂತಿಯೆಂಬ ಶೈತ್ಯಾಕಾರ ಸೋಂಕಿನ ಚೂತಫಲಂಗಳಂ ಹಾಸಿ ಉತ್ತರ ದ್ವಾರವೆಂಬ ನುಸುಳುಗಂಡಿಯಂ ರಚಿಸಿ ಪೂರ್ವಯೋಗಂಗಳೆಂಬ ಸೋಪಾನಮಂ ಮಾಡಿ ಪಶ್ಚಿಮದ್ವಾರವೆಂಬ ನಿಜದ್ವಾರಮಂ ಮಾಡಿ ಸಪ್ತವ್ಯಸನ ಪಂಚೇಂದ್ರಿಯಂಗಳೆಂಬ ಗವಾಕ್ಷಿಯನಿಕ್ಕಿ ಆಶೆಯಾಮಿಷಮಂ ಕೆಡಿಸಿ ಊರ್ಧ್ವ ಚಕ್ರವೆಂಬ ಮೇಲುಪ್ಪರಿಗೆಯಂ ಮಾಡಿ ಚಂದ್ರಸೂರ್ಯರೆಂಬ ದೀಪಗಳಂ ಬೆಳಗಿ ಶಿವೋಹಮೆಂಬ ಶಿಖರಿಯ ಮೇಲೆ ಮಹಾಜ್ಞಾನಪ್ರಕಾಶವೆಂಬ ಹೊನ್ನಕಳಶವ ಸಿಂಗಾರವಂ ಮಾಡಿ ನಿಃಶೂನ್ಯ ನಿರಾಳವೆಂಬ ಶೂನ್ಯಸಿಂಹಾಸನಮಂ ಮಾಡಿದ ಬಸವಪ್ರಿಯ ಕೂಡಲಚೆನ್ನಸಂಗನಲ್ಲಿ ಎನ್ನ ಪರಮಗುರು ಸಂಗನಬಸವಣ್ಣ ॥ ೧ ॥

ಅಂಗದ ಪ್ರಕೃತಿ ಲಿಂಗದಲ್ಲಿ ಅಳಿದು ಮನದ ಪ್ರಕೃತಿ ಅರಿವಿನಲ್ಲಿ ಅಳಿದು ಜೀವನ ಭ್ರಾಂತಿ ನಿಶ್ಚಿಂತದಲ್ಲಿ ಅಳಿದು ನಿಃಶೂನ್ಯ ನಿರಾಮಯವಾದ ನಿವಾಸಕ್ಕೆ ಸದಾಚಾರವೆಂಬ ಕೆಸರಗಲ್ಲನಿಕ್ಕಿ ಸರ್ವಾಚಾರ ಸಂಪತ್ತೆಂಬ ಹೂಗಲ್ಲ ಮುಟ್ಟಿ ಅಂತಃಕರಣಚತುಷ್ಟಯದ ನಾಲ್ಕು ಕಂಭವ ನಿಲಿಸಿ ಜ್ಞಾತೃವೆಂಬ ಭಿತ್ತಿಯ ಮೇಲೆ ಜ್ಞಾನವೆಂಬ ಶಿಖರಿಯನನುಗೊಳಿಸಿ ಜ್ಞೇಯಮೆಂಬ ಹೊನ್ನಕಳಶವಂ ಶೃಂಗಾರಮಂ ಮಾಡಿ ಬ್ರಹ್ಮರಂಧ್ರದ ಊರ್ಧ್ವದ್ವಾರವೆಂಬ ನಿಜದ್ವಾರಮಂ ಮಾಡಿ ನಿರ್ವಯಲಲಿ ನೆಲೆಗೊಳಿಸಿ ಬಸವಪ್ರಿಯ ಕೂಡಲಚೆನ್ನಸಂಗನ ಶರಣ ಪ್ರಭುದೇವರ ಬರವಿಂಗೆ ಶೂನ್ಯಸಿಂಹಾಸನವ ರಚಿಸಿ ಬರವ ಹಾರುತ್ತಿರ್ದ ನಮ್ಮ ಪರಮಗುರು ಸಂಗನಬಸವಣ್ಣನು ॥ ೨ ॥

**ಸೂಚನೆ**

ತನ್ನೊಳಗೆ ತಾ ಸಾಧಿಸಿದ ಸಂ ।
ಪನ್ನತೆಯನಿದಿರಿಟ್ಟು ರಚಿಸಿದ ।
ಶೂನ್ಯಸಿಂಹಾಸನವನೆಮ್ಮಯ ಬಸವದಂಡೇಶ ॥

ಗುರು ಗುಹೇಶ್ವರ ತಾನದಾರಿಗೆ |
ಕರುಣಿಸಿವನವರವರನಾಕ್ಷಣ |
ಪರಮ ಪದವಿಯಲಿರಿಸಿ ತಾನೊಲಿದಾಡುತಿರಲಿತ್ತ ||
ಗರುವ ಗುಣನಿಧಿ ಬಸವದಂಡೇ |
ಶ್ವರನು ಕಲ್ಯಾಣದಲಿ ರಚಿಸಿದ |
ಪರಿಯನೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ || ೧ ||

ಬೇಸಱದೆ ನೆಱೆ[1] ಪೂರ್ವಯೋಗಾ |
ಭ್ಯಾಸವಲಿ ಪಶ್ಚಿಮದ ಪವನಾ |
ವಾಸದಲಿ ಸರ್ವೇಂದ್ರಿಯಂಗಳ ನಿಗ್ರಹಂಗಳಲಿ ||
ಸೂಸದಂತಃಕರಣಶುದ್ಧಿಯ |
ಭಾಸುರತೆಯಲಿ ಬಸವದಂಡಾ |
ಧೀಶನೊಪ್ಪಿದನೇಕನಿಷ್ಠೆಯ ದಿವ್ಯತೇಜದಲಿ || ೨ ||

ಅರಿಗಳೆಂಬಭಿಧಾನವಡಗಿದ |
ವರರೆ ಅರಿಷಡ್ವರ್ಗನೃಪರಿಗೆ |
ನಿರುತ ನಿರ್ಮದ[2]ವಾದವಂಡಲೆ[3]ವಷ್ಟಮದಗಜಕೆ ||
ನೆರೆದ ತನುಗುಣರಾಜಿ ರಾಜಿಸಿ |
ಪರಿಚರಿಯಕರರಾದರಿಂತೀ |
ಪರಿಯಲೆಸೆದುವು ಬಸವರಾಜನ ರಾಜಯೋಗದಲಿ || ೩ ||

ಹೇಳಿದಂತಿರಕಲಿತವಿಂದ್ರಿಯ |
ಜಾಳವಾಜ್ಞಾಮಾತ್ರದಿಚ್ಛೆಗೆ |
ಮೇಳವಿಸಿ ನೆಲೆಗೊಂಡವಂತಃಕರಣ ಶರಣೆಂದು ||
ಕೀಲಿಸಿದ ಕುಂಡಲಿಯ ಸರ್ಪನ |
ಕಾಲುದೊಡಕದು ಸುಸರವಾಯಿತು |
ಹೇಳಲೇನಾ ಬಸವರಾಜನ ರಾಜಯೋಗದಲಿ || ೪ |

೧ ಳ ( ಇ, ಉ, ಕ. ) ೨ ವಾಕ್ಷಣ ( ಉ. )

ಹೋಗ ಹೊಗಲಿಕೆ ಕುಂಡಲಿಯ ಹೆ |
ಬ್ಬಾಗಿಲಲಿ ಕೆಡಹಿದನು ಕಾಮನ |
ವೇಗೆ ಹೃದಯಕವಾಟದಲಿ ಕಡಿದಿಕ್ಕಿದನು ಜವನ ||
ಲಾಗಿಸಿದನಖಿಳಾಧಿಪತ್ಯವ |
ಭೋಗಿಸುವ ಭ್ರೂಮಧ್ಯಭುವನಕೆ |
ರಾಗದಿಂದನುಭಾವಮುಖದಲಿ ಬಸವದಂಡೇಶ ||೫||

ಇಂತು ಸಲೆ ಸಂಧಾ[೧]ನುಭಾವದ |
ಲಂತರಂಗದ ರಾಜ್ಯವೆಲ್ಲವ |
ಸಂತವಿಟ್ಟು ಸಮಸ್ತದಲಿ ಸಂಪನ್ನನಾಗಿರುತ ||
ಮುಂತೆ ನಿರ್ಗುಣಯೋಗಮಾರ್ಗವ |
ನೆಂತು ಕಾಂಬೆನೆನುತ್ತ ಮನದಲಿ |
ಚಿಂತಿಸುತಲಾ ಬಸವದಂಡಾಧೀಶನಿಂತೆಂದ ||೬||

ಗುರು ಗುಹೇಶ್ವರ ಚಾರುಚರಣಾಂ |
ಬುರುಹಗಳ ನಾನಾವ ಪರಿಯಲಿ |
ವ[೨]ರಿಸಿಯೆನ್ನ ಮನಃಸಮಾಧಿಯನೆಂದು ಪಡೆದಪೆನೊ ||
ಪರಮ ಪುರುಷನದಾವ ವೇಷವ |
ಧರಿಸಿ ಬಹನೋ ಆ ಮಹಾತ್ಮನ |
ಹುರುಳನಾನೆಂತಱಿವೆನೆನುತಲಿ ಬಸವ ಚಿಂತಿಸಿದ ||೭||

ಆವ ವೇಷದಲಾದೊಡೆಮ್ಮಯ |
ದೇವನೊಲಿದೈತಂದೊಡಾತನ |
ಭಾವಭಣಿತೆಯನಱಿವವೊಲು ನಾನೊಂದುಪಾಯವನು ||
ತೀವಿ ತೆಕ್ಕನೆ ಸಿಕ್ಕಿಸುವೆನಾ |
ನಾವ ಪರಿಯಿಂದಾದೊಡೆಯು ಮ |
ಜ್ಜೀವಿತೇಶನನೆನುತಲಾ ಬಸವಣ್ಣನನುಗೆಯ್ದ ||೮||

---

೧ ಸಸ್ಥಾ ( ಉ, ಖ, ಗ, ಚ. ) ೨ ಧ ( ಇ, ಉ, ಖ, ಜ. )

ಅನುಗೊಳಿಸಿದನು ಶೂನ್ಯಸಿಂಹಾ |
ಸನವಿದೆಂದದಕಿಟ್ಟು ಹೆಸರನು |
ವಿನುತ ಪಶ್ಚಿಮಮಾರ್ಗದಲಿ ತಾ ಕಂಡುದೆಲ್ಲವನು ||
ಕನಕಮರಕತಮುಖ್ಯ ಮಣಿಗಳ |
ಘನತರದ ಕೇವಣದ ಲಹರಿಯ |
ಮಿಸುಗ ಮಿಸುಗುವ ವಿಮಲ ಪೀಠವ ಬಸವ ನಿರ್ಮಿಸಿದ || ೯ ||

ಇಂದುಕಾಂತದ ಶಿಲೆಯ ಹಪ್ಪಳಿ |
ಬಂಧಿಸಿದ ಸೋಪಾನ ಸುತ್ತಲು |
ಹಿಂದೆ[೧] ಹೊರೆಗಾಣಿಸದ ಸಪ್ತಾವರಣಮಯಭಿತ್ತಿ ||
ಒಂದಱಿಂದೊಂದಧಿಕತರವೆನ |
ಲೊಂದುಗೂಡಿದ ಶೂನ್ಯಪೀಠದ |
ನಿಂದ ನಿಲವರಿದಾಯ್ತು ಲೋಕದ ಜನದ ಕಣ್ಮನಕೆ || ೧೦ ||

ಕೀಲಣೆಯ ನವ ರತುನರಾಜಿಯ |
ಮೇಳವದ ಪ್ರತ್ಯೇಕ ಪಙ್ತಿಗ |
ಕೋಳಿಯಲಿ ತೆತ್ತಿ[೨]ಸಿದ ತಳಪದ ಸಪ್ತಲೋಹಳಿಗಳ ||
ಮೇಲೆ ಮೇಲಡಕಿಲುಗಳಂದದ |
ಲೇಳು ನೆಲೆಯಲಿ ಭಕ್ತಿಭೂಮಿ |
ಪಾಲ ಬಸವನು ಶೂನ್ಯ ಸಿಂಹಾಸನವ ವಿರಚಿ[೪]ಸಿದ || ೧೧ |

ಹೊಱವಳಯದೊಂಬತ್ತು ಬಾಗಿಲು |
ಮೆಱ[೩]ವ ಮಧ್ಯಕೆ ನಾಲ್ಕು ಬಾಗಿಲು |
ಸೇಱ[೩] ವಿರಾಜಿಸುವೆರಡು ಬಾಗಿಲು ಗರ್ಭವಳಯದಲಿ ||
ಮಿಱುಪ ಮೇಲಣ ಕೆಲಸಗತಿ ಕಣ್[೫] |
ದೆಱೆ[೫]ದ ಬಾಗಿಲು ಶಿಖರದಲಿ ಮಹ |
ದಱವಿನಂಬರಪೀಠವೆಸೆದುದು ಬಸವನಾಜ್ಞೆಯಲಿ || ೧೨

೧ ಹೊಂದಿ ( ಇ, ಉ, ಮ. ) ೨ ಕೀಲಿ ( ಅ, ಕ. ) ೩ ವೆ ( ಇ, ಉ. ) ೪ ನಿರವಿ ( ಚ. ೫ ಕ | ಜ್ಞಿರ ( ಜ. )

ಸ್ವಾನುಭಾವಾಧಾರ ಸ್ವಾಧಿ |
ಷ್ಠಾನ ಮಣಿಪೂರಕವನಾಹತ |
ವಾ ನವೀನದ ಕೆಲಸಗತಿಯು ವಿಶುದ್ಧಿಯಾಜ್ಞೇಯು ||
ಸ್ಥಾನಗಳ ನೆಲೆಗೊಳಿಸಿ ಬ್ರಹ್ಮ |
ಸ್ಥಾನವನು ಮೇಲೆನಿ[1]ಸಿ ರಚಿಸಿದ |
ಮಾನನಿಧಿ ಬಸವಣ್ಣನೀಪರಿ ಶೂನ್ಯಪೀಠವನು || ೧೩ ||

ಪರಿವಿಡಿಯಲಿಳೆ ಸಲಿಲ ಪಾವಕ |
ಮರುತ ಗಗನಾತುಮ ನಿರಾಳದ |
ತರತರದ ಶಿವಭಕ್ತ ಮಾಹೇಶ ಪ್ರಸಾದಿಗಳ ||
ಪರಮ ವರದ ಪ್ರಾಣಲಿಂಗಿಯ |
ಶರಣನೈಕ್ಯನ ಭೇದ ನೆಲೆಗಳ |
ನೆರವಿಯಂತಿರೆ ಶೂನ್ಯಪೀಠವ ಬಸವ ನಿರ್ಮಿಸಿದ || ೧೪ ||

ನೆಲದ ನೆಲೆ[2]ಯಲಿ ಕಠಿಣತರವನು |
ಜಲದ ನೆಲೆ[2]ಯಲಿ ರಸಮಯವನಾ |
ಜ್ವಲನ ನೆಲೆಯಲಿ ಬಿಸಿಯು ಮರುತನ ನೆಲೆಗೆ ಮಾರುತನ ||
ಸಲೆ ನಭದ ನೆಲೆಗಂಬರವ ಮನ |
ನಿಲುಕದನುಪಮದೆಡೆ[3]ಗೆ ಶೂನ್ಯವ |
ನಿಲಿಸಿ ಬಸವನು ಶೂನ್ಯಸಿಂಹಾಸನವ ನಿರ್ಮಿಸಿದ || ೧೫ ||

ಈಡೆ ಪಿಂಗಳ ವರ ಸುಷುಮ್ನಾ |
ನಾಡಿಗಳು ಬಲಿದೆಂಟು ದಿಕ್ಕಿನ |
ಕೋಡ ಕೈಯಲಿ ಮದಗಜಂಗಳು ಮೇಲು ನೆಲೆಯೊಳಗೆ ||
ಕೂಡೆ ಬೆಳಗುವ ಸೋಮಸೂರಿಯ |
ರಾಡುತಿಹ ವೀದಿಗಳು ಭುವನದ |
ಬೀಡಿದೆನಲಾ ಬಸವನೊಡ್ಡಿದನಂಬರಾಸನವ || ೧೬ ||

೧ ಲಿರಿ ( ಅ, ಇ, ಚ, ಜ. ) ೨ ಮರೆ ( ಉ, ಖ. ) ೩ ಸೆ ( ಇ. )

ಪರಮ ಪ್ರಣಮವೆ ಬೇರು ಸಕಲ |
ಸ್ವರವೆ ಬುಡ ವರ ಶೈವಪಂಚಾ |
ಕ್ಷರಿಯೆ ಶಾಖೆ ಸುವರ್ಣ ಕುಸುಮಗಳಕ್ಷರಾಳಿಗಳು ||
ವ[१]ರ ಪದಾರ್ಥವೆ ಫಲಗಳೆಂಬಂ |
ತಿರಲು ನಾದಮಹೀಜದೊಲು ವಿ |
ಸ್ತರಿಸಿದುದು ಮಣಿಮಯದ ತರುವಾ ಶೂನ್ಯಪೀಠದಲಿ || ೧೭ ||

ಆ ಮರನ ಹಬ್ಬಿರ್ದ ಲತೆಯವೊ |
ಲಾ[२] ಮಹಾಶಿವತತ್ವದಹಿಯ ಫ |
ಣಾಮಣಿಯ ಬೆಳಗೆನೆ ಪರಂಜ್ಯೋತಿ ಪ್ರಕಾಶತೆಯ ||
ಸೀಮೆಯೆನಲಾ ಪ್ರತಿನಿಧಿಗೆ ನಾ |
ನಾಮಯದ ನೆಮ್ಮುಗೆಯ ನಿಲಿಸಿದ |
ನಾ ಮನೋಹರ ಶೂನ್ಯಸಿಂಹಾಸನಕೆ ಬಸವಣ್ಣ || ೧೮ ||

ಅಳವಡಿಸಿದನು ಪಂಚಭೂತದ |
ನೆಲೆಗಳಲಿ ಹದಿನಾಲ್ಕು ಲೋಕ[३]ದ |
ಹೊಲಿಗೆಯನು ಮೋಲಾತ್ಮತತ್ವದಲೈಕ್ಯಪದವಿಯನು ||
ನಿಲಿಸಿ ನಿರುಪಮ ನಿರ್ವಿಕಾರ |
ಸ್ಥಲವನಲ್ಲಿಂದೇಳನೆಯ ತುದಿ |
ನೆಲೆಯೊಳೊಡ್ಡಿ[४]ದ ಶೂನ್ಯಸಿಂಹಾಸನಕೆ[५] ಬಸವಣ್ಣ || ೧೯ ||

ಅಲ್ಲಿಗಲ್ಲಿಗೆ ಬೇಹ ಶಕ್ತಿಗ |
ಳಲ್ಲಿಗಲ್ಲಿಗೆ ಬೇಹ ನಾಡಿಗ |
ಳಲ್ಲಿಗಲ್ಲಿಗೆ ಕರ್ಮಭಕ್ತಿಜ್ಞಾನತತ್ವಗಳು ||
ಅಲ್ಲಿಗಲ್ಲಿಗೆ ಸಗುಣನಿರ್ಗುಣ |
ವೆ[६]ಲ್ಲವನು ತಾ ಕಂಡ ತೆಱನಲಿ |
ಪಲ್ಲವಿಸಿ ಬಸವಣ್ಣ ರಚಿಸಿ[७]ದನಂಬರಾಸನವ || ೨೦ ||

---

೧ ಪ ( ಇ. ) ೨ ಯೆಂ । ಬಾ ( ಒ. ) ೩ ] ಭುವನ ( ಅ, ಉ, ಖ. ) ೪ ಯ ನೋಡಿ ( ಇ. )
೫ ದಿ ( ಇ. ) ೬ ಮಾರ್ಗದೊ । ಳೆ ( ಕ, ಗ, ಮ. ) ೭ ನೋಡಿ ( ಉ. )

ಅಂಡಪಿಂಡನ್ಯಾಯವೊಂದೇ[೧] |
ಕಂಡಿರೇ ಎಂದೆಂಬುದನು[೨] ಭೂ |
ಮಂಡಲದೊ[೩]ಳಾ ಶೂನ್ಯಸಿಂಹಾಸನದಲಱಿವಂತೆ[೩] ||
ದಂಡಿಯಾಗಿರೆ ನಿರ್ಮಿಸಿದನದ |
ಕಂಡವರು ಬೆಱಗಾಗೆ ಬಸವನು |
ದಂಡನಾಯಕನಲ್ಲಮನ ಬರವಿಂಗೆ ಭರದಿಂದೆ || ೨೧ ||

ಈ ತೆಱದಲ[೪]ನುಭವದಲಱಿದ ಮ |
ಹಾತಿಶಯ[೫]ದ ಮನಸ್ಸಮಾಧಿಯ |
ರೀತಿ[೫]ಯಂತಿರೆ ಶೂನ್ಯಸಿಂಹಾಸನವನಿದಿರಿಟ್ಟು ||
ಪ್ರೀತಿ ಮಿಗೆ ಪಿರಿದೆನಿಸಿ ನಾನಾ |
ಜಾತಿಭಾವದಲೊಡ್ಡಿಯುಪಮಾ |
ತೀತವೆಂದೆನೆ ಬಸವದಂಡಾಧೀಶ ವಿರಚಿಸಿದ || ೨೨ ||

ಇನ್ನಱಿಯಬಹುದಾವನಿಂತೀ |
ಶೂನ್ಯಸಿಂಹಾಸನವನೇಱಿದೊ |
ಡೆನ್ನ ಹೃದಯಾಂಬುಜರವಿಪ್ರಭುರಾಯನಹುದೆಂದು ||
ತನ್ನೊಳಗೆ ನಿಶ್ಚೈಸಿ ನಿಜ ಸಂ |
ಪನ್ನತೆಯಲಿರುತಿರ್ದನವನೀ |
ಮಾನ್ಯನೆಮ್ಮಯ ಬಸವದಂಡಾಧೀಶನರ್ತಿ[೬]ಯಲಿ || ೨೩ ||

ನಡೆವ ಗತಿಯಲಿ ಹಂಸೆಯನು ಸರ |
ವಿಡುವಗತಿಯಲಿ ಕೋಗಿಲೆಯ ನುಣ್[೭] |
ನುಡಿಗಳಿಂದ[೮]ಲಿ ರಾಜಕೀರನನಱಿವ ತೆಱನಂತೆ ||
ಸಡಗರಿಸಿದೀ ಶೂನ್ಯಪೀಠವ |
ನಡಱಿ ನಿಲುವ ಮಹಾತ್ಮನೇಯೆ |
ನ್ನೊಡೆಯನಹುದಹುದೆಂದು ನಿಶ್ಚೈಸಿದನು ಬಸವಣ್ಣ || ೨೪ ||

---

೧ ವನು ನೀವ್ ( ಜ. ) ೨ ಬುದನೊಲಿದು ( ಒ. ) ೩-೩ ಳರಿವಂತೆ ಸಿಂಹಾಸನವ ನೆರೆ ಬಲಿದು ( ಜ. ) ೪ ನನ ( ಒ, ಕ. ) ೫-೫ ರೀತಿಯನು ವಿರಚಿಸಿ । ಖ್ಯಾತಿ ( ಒ. ) ೬ ಭಕ್ತಿ ( ಗ. ) ೭ ನಾ ( ಇ. ); ನಡೆ ( ಖ. ) ೮ ವ ಪರಿಯ ( ಒ. )

ಕಂಗಳಿದಿರಿನ ಕತ್ತಲೆಯನು ಪ |
ತಂಗನಲ್ಲದೆ ಕಳೆಯಬಹುದೇ |
ಅಂಗಸಹಜಾಜ್ಞಾನಾದಿಗತ ಮಾಯಾ[1]ತಮಂಧವನು ||
ಹಿಂಗಿಸುವೊಡಾ ಗುರು ಗುಹೇಶ್ವರ |
ಲಿಂಗನೆಯ್ತಂದಲ್ಲದಹುದೇ |
ಸಂಗ ತಾನೆ ಬಲ್ಲನೆಂದೆನುತಿರ್ದ ಬಸವಣ್ಣ || ೨೫ ||

ತೃಷೆಯ ಕಳೆ[2]ಯಲಿ ಬಹರು ಕೆಲಬರು |
ಹಸಿವ ಕಳೆಯಲಿ ಬಹರು ಕೆಲಬರು |
ವ್ಯಸನಗಳಿಗರ್ಥವನು ಬೇಡಲಿ ಬಹರು ಕೆಲಕೆಲರು ||
ಸಸಿನೆ ಬಂದೀ ಶೂನ್ಯಪೀಠದ |
ದೆಸೆಯ ನೋಡುವ ಪರಮ ಪುರುಷರ |
ಹೆಸರ ಕಾಣೆನದೇನ ಹೇಳುವೆನವಱ ಕೌತುಕವ || ೨೬ ||

ಆರು ಬಲ್ಲರು ಬಸವನೊಡ್ಡಿದ |
ಪ್ರೇರಣೆಯನೆಂದೆನುತಲೆಲ್ಲರು |
ದೂರದಲಿ ನೆಱೆ ನೋಡಿ ಬೆಱಗಹರಲ್ಲದದಱನುವ ||
ಆರು ಬಲ್ಲವರಾರು ಮೊಗಸುವ |
ರಾರು ಹುಗುವವರಾರು ಮಹವಿ |
ಸ್ತಾರವೆನಿಸಿದ ಶೂನ್ಯಸಿಂಹಾಸನದ ಸುಳಿವಳಿಯ || ೨೭ ||

ಹುತ್ತಿನೊಳಗಣ ಹೊಳ್ಳು ಹಾವಿಂ |
ಗೆತ್ತ ಹೋದೊಡೆ ಸುಸರವಲ್ಲದೆ |
ಮತ್ತೆ ಮಿಕ್ಕಿನ ಜೀವಜಾಳಕಭೇದ್ಯವಾದ[5]ಂತೆ ||
ಎತ್ತ ಬಲ್ಲರು ಭಕ್ತರಲ್ಲದ |
ಮತ್ತ ಭವಿಗಳು ಶೂನ್ಯಪೀಠದ |
ಬಿತ್ತರವನೆಂದೆನುತ ಬೆಱಗಾದುದು ಬುಧಸ್ತೋಮ || ೨೮ ||

೧ ವಿಭ್ರಮ ( ಜ. ) ೨ ನಳಿ ( ಒ. ) ೩ ನಡರು ( ಕ. ) ೪ ಸಸಿನ ( ಇ, ಉ, ಖ, ಗ, ಚ. )
೫ ವಪ್ಪ ( ಕ, ಚ. )

ಮಂತ್ರ ಹಠ ಲಯ ರಾಜಯೋಗದ |
ಸಂತೆಗಳ ಶಬ್ದಗಳ ಜಾಣರು |
ಯಂತ್ರವಾದಿ[1]ಗಳಾರು ದರ್ಶನ ವೇಷಧಾರಿಗಳು ||
ಇಂತು ಮೆಱೆವವರೆಲ್ಲರೆಮ್ಮ ಮ |
ಹಂತನೊಡ್ಡಿದ ಶೂನ್ಯಪೀಠದ |
ಚಿಂತೆಯನೆ ವಿಸ್ತರಿಸ[2]ರೇನೆಂದೆಂಬೆನಚ್ಚರಿಯ || ೨೯ ||

ಸಾಱಿ ಲಕ್ಕದ ಮೇಲೆ ತೊಂಬ |
ತ್ತಾಱುಸಾವಿರ ಮಿಂಡಜಂಗಮ |
ಮೀಱಿ ಬಾಲರು ವೃದ್ಧರೆಯ್ತಹುದೆಣಿಕೆಗರಿದೆನಿಸಿ ||
ಹೇಱಿ ದಣಿದರು ತಮ್ಮ ಮನಸಿಗೆ |
ತೋಱಿದಿಷ್ಟಾರ್ಥಂಗಳಿಂದಲಿ |
ನೀಱೆ[3] ಬಸವನ ಮನೆಯಲನುದಿನವಖಿಳ ಜಗವಱಿಯೆ || ೩೦ ||

ಏನನೆಂಬೆನು ಬಸವನಾ ಸು |
ಜ್ಞಾನಸಿಂಹಾಸನವ ತನ್ನ ಮ |
ಹಾನುಭಾವದ ಭಣಿತೆಯಂತೆ ಸಮಸ್ತ ವಿಧದಿಂದೆ ||
ತಾನು ನಿರ್ಮಿಸಿ ಬಳಿಕ ತನ್ನ ಮ |
ನೋನುರಾಗದಲಮಳಹೃದಯ |
ಧ್ಯಾನದಲಿ ನೆಱೆ ನೆನೆವುತಿರ್ದನು ಗುರುಗುಹೇಶ್ವರನ || ೩೧ ||

**ಅಂತು ಗತಿ ೨೧ಕ್ಕಂ ಪದ ೯೨೪ಕ್ಕಂ ಮಂಗಳಂ**

---

೧ ಧಾರಿ ( ಒ, ಕ, ಜ. ) ೨ ಬರಲಮ್ಮ ( ಉ, ಖ, ಗ, ಚ. ) ೩ ವೀರ ( ಅ, ಇ, ಗ. )

# ಪ್ರಭುದೇವರು ಶೂನ್ಯಸಿಂಹಾಸನವನೇರಿದ ಗತಿ

## ವಚನ

ಕೆದರಿದ ತಲೆಯ ತೊನೆವ ನಡೆಯ ಹಣೆಯ ಬುಗುಟಿನ ಕರಸ್ಥಲದ ಅನಿಮಿಷದಿಂ ಬಹಿರಂಗದ ವಚನ ತಪ್ಪಿ ಇದಿರುಗೊಯಿಲು ತಾಗಿ ಪುರ್ಬೊಡೆದು ಕಣ್ಣು ತೆರೆದು ಕಿವಿ ಹರಿದು ಜೋಲುವ ರಕ್ತಧಾರೆಯ ಗಾಳಿಯ ಧೂಳಿಯ ಮಳೆಯ ಜೋರಿನ ಬೆನ್ನಬಾಸುಳದ ಎಡಬಲದ ಬದಿಯ ತಟ್ಟಿನ ಮುಳ್ಳುದರಹಿನ ಕಂಕುಳ ಸೀಳಂ ಕಂಡು ನೋಡುವ ಜನರು ಬೆರಗಾಗೆ ಪೊರವಾರಿನ ಮಸಿಯ ದಿಗಂಬರದ ಬಣಗು ಸುರಿವುತ್ತ ಆಸ್ವಾಯನವರತು ಬಿದ್ದು ಮೊಣಕಾಲೊಡೆದು ಹೊಸ ಹುಣ್ಣಿನ ರಕ್ತದ ಜೋರು ಹರಿದು ಮುಂಗಾಲು ತಲೆಯೊಡೆದು ಕಣಕಾಲು ಸಂದು ತಪ್ಪಿ ಕಿರಿಬೆರಳು ಎಡಹಿ ಬೊಟ್ಟೊಡೆದು ಗಾಯದ ಉರುಗು ಟೊಂಕದ ಬರುಗುಂಟನ ನೋಡಾ ಚನ್ನಬಸವಣ್ಣಾ । ಅತ್ಯಂತ ಮಲಿನ ಕೂಡಲಸಂಗಮದೇವರ ಕುರುಹು ವಿಪರೀತ ನೋಡುವರೆ ಭಯಂಕರವಾಗಿದೆ ಅಯ್ಯಾ ॥ ೧ ॥

ಅಟ್ಟಿ ಹಾಯುತ್ತ ಭೋಂಕನೆ ನಿಲ್ಲುತ್ತ ಒಮ್ಮೆ ಜಿನುಗುತ್ತ ಒಮ್ಮೆ ಮರುಳಿನಂತೆ ಮೂಕಿನಂತೆ ದೆಸೆದೆಸೆಯ ನೋಡುತ್ತ ಅಂಗಡಿಯ ರಾಜಬೀದಿಯ ಶೃಂಗಾರಂಗಳಂ ನಲಿನಲಿದು ನೋಡುತ್ತ ಇತ್ತೆರದ ಭದ್ರದ ಮೇಲೆ ನಾಂಟ್ಯವನಾಡುವರಿಗೆ ಇದಿರಾಗಿ ತಾ ಮರಳಿ ಆಡುತ್ತ ಹಾಡುತ್ತ ಬೈಯ್ಯುತ್ತ ಕೆರಳಿ ನುಡಿವುತ್ತ ವಾದ್ಯಮೇಳಾಪವ ಕಂಡು ಆಳಿಗೊಂಡು ನಗುತ್ತ ಹಸ್ತವನಾಟಿಸಿ ಗತಿಯನುಚ್ಚರಿಸಿ ಕೆಯ್ಯೊಡನೆ ಮರುಳಾಟವನಾಡುತ್ತ ಮೆಲ್ಲಮೆಲ್ಲನೆ ನಿಂದು ನೋಡಿ ನಲಿವುತ್ತ ಎಂದಿನ ಸುಳಿಹಿನೊಳಗಲ್ಲದ ಸುಳುಹು ಬಸವ ನಿಮ್ಮಾಣೆ ಸೊಡ್ಡಳನಲ್ಲದೆ ಮಾಣನು ॥ ೨ ॥

ಬಾಲನಹನೊಮ್ಮೆ ಲೋಲನಹನೊಮ್ಮೆ ವೃದ್ಧನಹನೊಮ್ಮೆ ಮತ್ತನಹನೊಮ್ಮೆ ಹೊಳೆದು ತೋರುವನೊಮ್ಮೆ ತೋರಿಯಡಗುವನೊಮ್ಮೆ ವಿಸ್ಮ ನೋಡಿ ಬೆರಗಾಗುತ್ತಿರೆ ಇದ್ದ ಠಾವಿನಲಿದ್ದು ಮುಂದೆ ತೋರುತ್ತಿರಲು ಸಾಂಪ್ರದಾಯದವರು ಒಡನೊಡನೆ ಹರಿದು ಬಂದು ಹೇಳುತ್ತಿರಲು ಹತ್ತೆ ಸಾರಿದ ಬಸವಣ್ಣನ ಮಹಮನೆಯ ತಲೆಯೆತ್ತಿ ನೋಡಿ ಮುಗಿಲ ಮೂಲೆ ತಪ್ಪದೆ ಕುಸುರಿಗೆಲಸದ ನಂದಿಯ ಮಂಟಪಂಗಳ ಮೇಲೆ ಉಪ್ಪರಿಗೆಯ ಭದ್ರಂಗಳ ನೋಡಿ ಭುವನಭವನೇಶ್ವರ ಹಿಂದು ಮುಂದೆ ಎಡಬಲನ ನೋಡಿ ನಗುತ್ತ ಮುತ್ತಿನ ತೋರಣಕ್ಕೆ ಹಾರೈಸಿ ಬಸವಣ್ಣನರಮನೆಯ ಹೊಕ್ಕ ಕಲಿದೇವರ ದೇವನು ॥ ೩ ।

ಬಲಕ್ಕೆ ಮುರಿದನು । ಪೌಳಿಯ ಉತ್ತರಬಾಗಿಲಲ್ಲಿ ತಲೆವಾಗಿ ಹೊಕ್ಕು ಗತಿಯ ಪವಣದಲ್ಲಿ ಧವಳಾಮಪ್ಪ ಪಶ್ಚಿಮದ್ವಾರದಿಂ ತ್ರಿವಿಧ ಗತಿಯ ಶೂನ್ಯಸಿಂಹಾಸನದ ಮೇಲೆ ಮುಕ್ತಕೇಶದ ಪರಮಗುರುರಾ ಸೇರಿದ ನೋಡಾ ಕಲಿದೇವರ ದೇವನು ॥ ೪

ಇದ್ದ ಪರಿಯಿಂತು ಅರಿದೆ ನೋಡಯ್ಯಾ । ನಿಂದರೆ ನೆಳಲಿಲ್ಲ ನಡೆದರೆ ಹೆಜ್ಜೆಯಿಲ್ಲ ಭೂತಳದೊಳ
[illegible] ಯದ ಸುಳುಹ । ಅಹುದಹುದು ಅರಿದು ಜಂಗಮಸ್ಥಲ । ಇಂತು

ಲ್ಲದೆ ಎಂತುಟು ಹೇಳಾ । ಆಪ್ಯಾಯನದರಿಕೆಯ ಹೊಲಬ ಕಾಣಬಾರದು । ಊಡಿದರೆ ಉಣ್ಣನೋ ಉಂಬನೋ । ಉಂಬುದುಂಟಾದರೆ ನೀಡುವೆನು ಕೂಡಲಸಂಗಮದೇವರಿಗೆ ಚೆನ್ನಬಸವಣ್ಣನು ಅಹುದೆನಲಿಕೆ ॥ ೫ ॥

ಅರಳುಗಂಗಳವರಿಗೆ ಹರಳುಗಂಗಳವರು ಸೈರಿಸದಂತೆ ತುರುಬುಳ್ಳವರಿಗೆ ಬರಿಮಂಡೆಯವರು ಸೈರಿಸದಂತೆ ಅರಸನ ಕಂಡು ಪುರುಷನ ಮರೆದಂತೆ ಮಾಡಿದನೀ ವ್ರತಗೇಡಿ ಬಸವನು । ಮಹೇಂದ್ರಜಾಲಿಗನೊಬ್ಬನ ಪ್ರಭುವೆಂದು ಕುಳ್ಳಿರಿಸಿಕೊಂಡು ತನ್ನ ಪ್ರಾಣಲಿಂಗವೆಂದು ನಮ್ಮತ್ತ ತಿರುಗಿ ನೋಡಲೊಲ್ಲ । ಅವನಲ್ಲಿ ಏನು ಲೇಸು ಕಂಡನೋ । ನಮ್ಮಲ್ಲಿ ಏನು ಹೊಲ್ಲೆಯವ ಕಂಡನೋ । ಕಂಚನೊಲ್ಲದೆ ಹಂಚ ಹಿಡಿದನು । ಆ ಅನಾಚಾರಿ ಅವನೊಬ್ಬ ವ್ರತಗೇಡಿ ಬಸವನೊಬ್ಬ । ಇವರಿಬ್ಬರು ದೇವಲೋಕಮರ್ತ್ಯಲೋಕಕ್ಕೆ ಹೊರಗು । ಇವರಿರ ಮುಖವ ನೋಡಲಾಗದೆನುತ ಹೋದರು ಕಲಿದೇವರ ದೇವನ ಶರಣರು ॥ ೬ ॥

ವಿಪಿನದೊಳು ಮದಕರಿಯ ಹಿಂಡು ಆನಂದದ ಲೀಲೆಯೊಳಾಡುತ್ತಿರಲು ಕೇಸರಿ ಬರಲು ಮದಕರಿಗಳೆಲ್ಲ ಕೆದರಿ ಓಡುವ ತೆರನಂತೆ ಸಾಕಾರ ಸೊಡ್ಡಳ ನಿಮ್ಮ ಶರಣ ಪ್ರಭುದೇವರು ಬರಲೊಡನೆ ಹಂದುದಯ್ಯಾ ನೆರೆದ ಶಿವಗಣಂಗಳು ॥ ೭ ॥

**ಸೂಚನೆ**

ಪ್ರಾರ್ಥನೆಗೆ ಪರಿಣಮಿಸಿ ಕಾರಣ ।
ಕರ್ತೃವೆನಿಸಿದ ಗುರು ಗುಹೇಶ್ವರ ।
ಮೂರ್ತಿಗೊಂಡನು ಶೂನ್ಯಸಿಂಹಾಸನದ ಶಿಖರದಲಿ ॥

ಪ್ರತಿರಹಿತ ಪರಮಾರ್ಥ ಚಾರಿ ।
ತ್ರತಿಯನೊಳಕೊಂಡಪ್ರಮೇಯನ ।
ಗತಿಯ ಗಂಭೀರತೆಯ ನಿರ್ದೇಹಿಯ ನಿಜಾಕೃತಿಯ ॥
ಮತಿಯುತರು ಮಿಗೆ ತತ್ವವಿತ್ತುಗ ।
ಳತಿಶಯದಿ ಲಾಲಿಸುವುದೀ ಸಂ ।
ಗತಿಯ ಸಂಗ್ರಹಿಸಿದ[2] ಮಹಾ ಪ್ರಭುಲಿಂಗ ಲೀಲೆಯಲಿ ॥ ೧ ॥

---

೧ ರಾ ( ಅ, ಜ. ) ೨ ಸಡಗರಣೆಯ ( ಜ. )

ದೂರದಲಿ ಪತಿಯಿರಲು ಸತ್ಕುಲ |
ನಾರಿ ಪುಷ್ಪಿತೆಯಾಗಿ ಸಲೆ ಸುಕು |
ಮಾರನಾಪೇಕ್ಷೆಯಲಿ ತನ್ನಯ ವಲ್ಲಭನ ಬರವ ||
೧ಹಾರುವಂತೆ ಶಿವಾನುಭಾವವಿ |
ಚಾರದಿಂದಲಿ ನಿತ್ಯಸುಖಮಯ |
ಕಾರಣಕೆ ಬಸವಣ್ಣ ಬಯಸಿದನಲ್ಲಮನ ಬರವ೧ || ೨ ||

೩ಹಣ್ಣೆ ಹನ್ನೆರಡಬ್ದವಾಯಿತು೩ |
ಶೂನ್ಯಸಿಂಹಾಸನವನಕಟಾ |
ಎನ್ನ ಗುರುವಿನ್ನೆಂದು ಬಿಜಯಂಗೈದು೪ ಕರುಣದಲಿ ||
ಕಣ್ಣಬಱನನು ತಿಳುಹಿ ತೆ೫ಕ್ಕನೆ |
ತನ್ನ ಮೂರ್ತಿಯ ತೋಱಿ ತೊಲಗದೆ |
ಮನ್ನಿಸುವನೋ ಎನುತಲಾ ಬಸವಣ್ಣ ಚಿಂತಿಸಿದ || ೩ ||

ಅರಸನಱಿಯದ ಬಿಟ್ಟಿಗೆಲಸದ |
ಪರಿಯಲಾಯಿತೆ ಎನ್ನ ಮಾಟದ |
ಪರಿಕರಣೆ ಫಲವೀಯಲಱಿಯದೆ ಶಿವ ಮಹಾದೇವ ||
ಹರ ಹರಾ ಎಂದೆನುತ ಚಿಂತಾ |
ತುರತೆಯಲಿ ಹೊಱಗೊಳಗನಾಲಿಸು |
ತಿರುತಲಿದ್ದನು ಬಯಸಿ ಬರವನು ಬಸವನಲ್ಲಮನ || ೪ ||

ಆತನಂತಃಕರಣವಾತನ |
ಮಾತ ಕೇಳುವವಾಗಿ ದಿಟ ಬಳಿ |
ಕಾತನಾಜ್ಞಾಮಾತ್ರದಿಂದಾ ಸ್ಥೂಲ ತನುವಿನಲಿ ||
ಓತಿರಲು ಬೇಡೆಂದೊಡಾಗಳೆ |
ಭೀತಿಯಿಂದೊಳಪೊಕ್ಕು ತಮ್ಮಯ |
ಧಾತುಗೆಟ್ಟೆಹವೇನಸಂಬೆನು ಬಸವನನುಭವವ || ೫ ||

೧-೧ ಹಾರಿಕೊಂಡಿರುತಿಪ್ಪಪೊಲು ಕರು | ಣಾರಸಾರ್ಣವ ಗುರುಗುಹೇಶ್ವರ | ಬಾರನೇ ಎಂದೆನು ಚಿಂತಿಸುತಿರ್ದ ಬಸವಣ್ಣ ( ಗ. ) ೨ ಸ ( ಉ. ) ೩-೩ ಹನ್ನೆರಡು ವರುಷಗಳು ಸಂದಲು ( ಗ. ೪ ಬಹನೋ ತನ್ನ ( ಉ. ) ೫ ಚೆ ( ಗ. )

ಈ ತೆಱದಲಾ ಶಿವಸಮಾಧಿ |
ಪ್ರೀತಿಯಿಂದಿರಲೊಂದು ದಿನ ತಾ |
ನೋತು ತನ್ನಯ ಸುಲಲಿತಾಂತರ್ಮುಖದ ಮುಕುರದಲಿ ||
ಪ್ರೀತಿಯಲಿ ತನಗಲ್ಲಮಪ್ರಭು |
ವೈತಹುದನೊ೧ಲಿದಮಲತತ್ವವಿ |
ಭೂತಿಯನು ತನಗೀವುದನು ನೆಱೆ ಕಂಡ ಬಸವಣ್ಣ || ೬ ||

ಕಂಡು ಕಡು ಸುಮ್ಮಾನ ಸುಖವೆಡೆ |
ಗೊಂಡು ರೋಮಾಂಚನದ ಬಿಗುಹಿನ |
ದಂಡಿ ಕಡು೨ ದಟ್ಟೈಸುತಿರೆ ಬಳಿಕಿತ್ತಲಾ ಮನವ ||
ಮುಂಡಿಸಿದನಾ ಸ್ಥೂಲಕಾಯದ |
ಮಂಡೆಯಲಿ ಪಸರಿಸಿದುವಾಗಳೆ |
ತಂಡತಂಡದ ನಾಡಿಗಳು ಬಸವಣ್ಣನವಯವದ || ೭ ||

ಬಲದ ಭುಜ ಬಲಗಣ್ಣು ಬಲಮೈ |
ಯಲುಗ ತೊಡಗಿದುದೊಡನೊಡನೆ ಮಿಗೆ |
ನಲಿವುತಿರ್ದುದು ಚಿತ್ತ ಚಿಂತಾಯಕನ ಬರವಿಂಗೆ ||
ಒಲಿದು ಬಳಿಕಾ ಹದನನೆಲ್ಲವ |
ತಿಳುಹಿದನು ವಿಸ್ತರಿಸಿ ಭಕ್ತಿಗೆ |
ತಿಲಕವೆನಿಸಿದ ಚೆನ್ನಬಸವಣ್ಣಂಗೆ ಬಸವಣ್ಣ || ೮ ||

ತಡೆಯದೀಕ್ಷಣವಿಷ್ಟ೩ಸಿದ್ಧಿಯ |
ಕೊಡುವ ಶುಭಸೂಚನೆಗಳಾದುವು |
ಬಿಡು ದುಮಾನವ ಕಟ್ಟಿಸಿನ್ನೀಳುಪ್ಪರದ ಗುಡಿಯ ||
ಅಡಸಿ ವೇದನಿಕಾಯುವಱಿಸಿದೊ |
ಡಡಿಯ ತೋಱಿಸದಮಲ ಬೊಮ್ಮನೆ |
ನಡೆದು ಬರುತಿಹನೆಂದು ನುಡಿದನು ಚೆನ್ನಬಸವಣ್ಣ || ೯ ||

---

೧ ರುತಲೊ ( ಉ. )  ೨ ಮಿಗೆ ( ಒ, ಕ. )  ೩ ವೃದ್ಧಿ ( ಗ. )

ಭಣಿತೆಯಲಿ ಬಸವನ ನಿರೂಪದ ।
ಲಣಿವಱಿದು ಪುರದೊಳಗೆ ಗುಡಿತೋಃ ।
ರಣಪತಾಕೆಗಳಾದಿಯಾವ ಸಮಸ್ತ ಸಂಭ್ರಮವ ॥
ಕ್ಷಣದೊಳಗೆ ರಚಿಸಿದರು ಸುರಪುರ ।
ಕೆಣೆಯೆನಲು ಸೌರಂಭದಿಂದಲಿ ।
ಕಣುಮನಕೆ ಕಲ್ಯಾಣ[೧]ವೇ ತಾನಾಯ್ತು ಕಲ್ಯಾಣ ॥ ೧೦ ॥

ಕತ್ತುರಿಯ ಕರ್ದಮದ ಕದಡಿನ ।
ಸುತ್ತುವಳಯಡ[೨] ತೊಳಗಿ ಬೆಳಗುವ ।
ಮುತ್ತಿನೋಃಳಿಯ ರಂಗವಾಲಿಯ ಚಿತ್ರಪಿಃದಿಗಳ ॥
ತೆತ್ತಿಸಿದ ಪೂವಲಿಯ ಪೂರದ ।
ಹೊತ್ತಿ ಹೊಗೆವ ಸುಗಂಧ ಧೂಪದ ।
ಲೆತ್ತನೋಃಡಿದೊಡತ್ತ ಕಡು ಚೆಲುವಾಯ್ತು ಕಲ್ಯಾಣ ॥ ೧೧ ॥

ತಳಿತ ಗುಡಿ ತೋಃರಣ ಪತಾಕೆಯ ।
ನೆಳಲು ರವಿಕಿರಣಗಳ ದಾಳಿಯ ।
ದಳದುಳಕೆ ಮಾಱಾಂತು ನಿಂದುವು ಬೀಃದಿ ಬೀಃದಿಯಲಿ ॥
ಸುಳಿವ ಗಣಿಕಾಜನದ ನಗೆಗಂ ।
ಗಳ ವಿಳಾಸದ ಬೆಳಗು ಬೆಳುದಿಂ ।
ಗಳನೆ ಬೀಃಱುತ್ತಿರ್ದುದಾ ಕಲ್ಯಾಣಪುರದೊಳಗೆ ॥ ೧೨ ।

ಮನದೊಡನೆ ಮನೆ ತಳಿತ ರೋಃಮಾಂ ।
ಚನದೊಡನೆ ಗುಡಿ ಹೆಚ್ಚಿ ಹಿಗ್ಗುವ ।
ತನುವಿನೊಡನೆ ಸಮಸ್ತಭಕ್ತಸ್ತೋಃಮ ನಿಮಿಷದಲಿ ॥
ಅನುಕರಿಸಿ ಕೈಗೆಯ್ದು[೩]ದಾಗಳೆ ।
ಘನಕೆ ಘನವೆನೆ ಬಸವರಾಜನ ।
ಮನೆಯೊಳಾ ಪ್ರಭುರಾಯ ಬಹ ಮಂಗಳ ಮಹೋಃತ್ಸವಕೆ ॥ ೧೩

---

೧ ಕೈಲಾಸ ( ಇ, ಗ, ಚ. ) ೨ ದಿ ( ಕ. ) ೩ ಕವಿಕವಿದು ( ಒ, ಜ. )

ಆವ ವೇಷವ ತೊಟ್ಟಿಹನೊ ಮೇ |
ಣಾವ ಪಥದಲಿ ಸುಳಿವನೋ ದಿಟ |
ವಾವ ವೇಳೆಯಲೊಲಿದು ಬಹನೋ ಶಿವ ಮಹಾದೇವ ||
ಭಾವಿಸುವೊಡರಿದೆ[1]ನುತಲಾ ಪ್ರಭು |
ದೇವರಿಗೆ ತಾನಿದಿರುವೋಗುತ |
ಲೀ ವಿಚಾರವನೆಣಿಸುತಿರ್ದನು ಬಸವದಂಡೇಶ || ೧೪ ||

ಇಡಿದ ಸರ್ವಾಂಗದ ವಿಭೂತಿಯ |
ಜಡಿದ ರುದ್ರಾಕ್ಷೆಗಳ ಮಾಲೆಯ |
ತೊಡಿಗೆಗಳ ಧವಳಾಂಬರಂಗಳ ಮೆಯ್ಯ ಮುಖಕಳೆಯ ||
ಮಡಿವಳಯ್ಯನು ಚೆನ್ನಬಸವನು |
ಹಡಪದಪ್ಪಣ್ಣಗಳು ಸಹಿತವೆ |
ನಡೆದನಿದಿರನು ಬಸವಂಡಾಧೀಶನಲ್ಲಮಗೆ[2] || ೧೫ ||

ದೆಸೆದೆಸೆಯು ಕಂಪಿಡಲು ತಳ[3]ನು ಲೇ |
ಪಿಸಿದ ಮೆಯ್ಗಂಪುಗಳ ಭೂಷಣ |
ವಿಸರ ಲಹರಿಯು ರತ್ನರಾಜಿಯು ಬೆರಕೆವೆಳಗುಗಳ ||
ಮುಸುಕಿ[4] ಮುಂಗುಡಿಗಳಲಿ ಕೈವಾ |
ರಿಸುವ ಕೈವಾರಿಗಳ ನೆರವಿಯು |
ವಸುಮತೀಶರು ಸಹಿತ ನಡೆದನು ಬಸವದಂಡೇಶ || ೧೬ ||

ಎಡಬಲಂಗಳೊಳೆಯ್ದೆ ಭಕ್ತರ |
ಗಡಣ ಹಿಂಭಾಗದಲಿ ನಾನಾ |
ಪೊಡವಿಪಾಲಕುಮಾರಕರ ಸಂದಣಿಯ ಸಂದೋಹ ||
ಬಿಡದೆ [5]ಕೈವಾರಿಸುವ ನೆಲನು |
ಗ್ಘಡಣೆಕಾಱರ[5] ಮೊತ್ತಗಳು ಮುಂ |
ಗುಡಿಯಲೊಪ್ಪಿರೆ ನಡೆದನಿದಿರನು ಬಸವದಂಡೇಶ || ೧೭ ||

---

೧ ತ ಪ್ರಭುವೆ ( ಚ. ) ೨ ಮನವೊಲಿದು ( ಇ. ) ೩ ಲಿಕೆ ( ಚ. ) ೪ ವಂದು ( ಚ. ) ೫-೫ ವಾದ್ಯದ ಭರಕೆ ನೆಲಘೀ | ಳಿಡಲು ರಾಯರ ( ಇ. )

ಭಣಿತೆಯುಲಿ ಬಸವನ ನಿರೂಪದ |
ಲಣಿವಱಿದು ಪುರದೊಳಗೆ ಗುಡಿತೋ |
ರಣಪತಾಕೆಗಳಾದಿಯಾದ ಸಮಸ್ತ ಸಂಭ್ರಮವ ||
ಕ್ಷಣದೊಳಗೆ ರಚಿಸಿದರು ಸುರಪುರ |
ಕೆಣೆಯೆನಲು ಸೌರಂಭದಿಂದಲಿ |
ಕಣುಮನಕೆ ಕಲ್ಯಾಣ^೧^ವೇ ತಾನಾಯ್ತು ಕಲ್ಯಾಣ || ೧೦ ||

ಕತ್ತುರಿಯ ಕರ್ದಮದ ಕದಡಿನ |
ಸುತ್ತುವಳಯದ^೨^ ತೊಳಗಿ ಬೆಳಗುವ |
ಮುತ್ತಿನೋಳಿಯ ರಂಗವಾಲಿಯ ಚಿತ್ರವೀದಿಗಳ ||
ತೆತ್ತಿಸಿದ ಪೂವಲಿಯ ಪೂರದ |
ಹೊತ್ತಿ ಹೊಗೆವ ಸುಗಂಧ ಧೂಪದ |
ಲೆತ್ತನೋಡಿದೊಡತ್ತ ಕಡು ಚೆಲುವಾಯ್ತು ಕಲ್ಯಾಣ || ೧೧ ||

ತಳಿತ ಗುಡಿ ತೋರಣ ಪತಾಕೆಯ |
ನೆಳಲು ರವಿಕಿರಣಗಳ ದಾಳಿಯ |
ದಳದುಳಕೆ ಮಾಱಾಂತು ನಿಂದುವು ಬೀದಿ ಬೀದಿಯುಲಿ ||
ಸುಳಿವ ಗಣಿಕಾಜನದ ನಗೆಗಂ |
ಗಳ ವಿಳಾಸದ ಬೆಳಗು ಬೆಳುದಿಂ |
ಗಳನೆ ಬೀಱುತ್ತಿರ್ದುದಾ ಕಲ್ಯಾಣಪುರದೊಳಗೆ || ೧೨ |

ಮನದೊಡನೆ ಮನೆ ತಳಿತ ರೋಮಾಂ |
ಚನದೊಡನೆ ಗುಡಿ ಹೆಚ್ಚಿ ಹಿಗ್ಗುವ |
ತನುವಿನೊಡನೆ ಸಮಸ್ತಭಕ್ತಸ್ತೋಮ ಸಿಮಿಷದಲಿ ||
ಅನುಕರಿಸಿ ಕೈಗೆಯ್ದು^೩^ದಾಗಳೆ |
ಘನಕೆ ಘನವೆನೆ ಬಸವರಾಜನ |
ಮನೆಯೊಳಾ ಪ್ರಭುರಾಯ ಬಹ ಮಂಗಳ ಮಹೋತ್ಸವಕೆ || ೧೩

೧ ಕೈಲಾಸ ( ಇ, ಗ, ಚ. ) ೨ ದಿ ( ಕ. ) ೩ ಕವಿಕವಿದು ( ಒ, ಜ. )

ಆವ ವೇಷವ ತೊಟ್ಟಹನೊ ಮೇ |
ಣಾವ ಪಥದಲಿ ಸುಳಿವನೋ ದಿಟ |
ವಾವ ವೇಳೆಯಲೊಲಿದು ಬಹನೋ ಶಿವ ಮಹಾದೇವ ||
ಭಾವಿಸುವೊಡರಿದೆ[1]ನುತಲಾ ಪ್ರಭು |
ದೇವರಿಗೆ ತಾನಿದಿರುವೋಗುತ |
ಲೀ ವಿಚಾರವನೆಣಿಸುತಿರ್ದನು ಬಸವದಂಡೇಶ || ೧೪ ||

ಇಡಿದ ಸರ್ವಾಂಗದ ವಿಭೂತಿಯ |
ಜಡಿದ ರುದ್ರಾಕ್ಷಿಗಳ ಮಾಲೆಯ |
ತೊಡಿಗೆಗಳ ಧವಳಾಂಬರಂಗಳ ಮೆಯ್ಯ ಮುಖಕಳೆಯ ||
ಮಡಿವಳಯ್ಯನು ಚೆನ್ನಬಸವನು |
ಹಡಪದಪ್ಪಣ್ಣಗಳು ಸಹಿತವೆ |
ನಡೆದನಿದಿರನು ಬಸವದಂಡಾಧೀಶನಲ್ಲಮಗೆ[2] || ೧೫ ||

ದೆಸೆದೆಸೆಯ ಕಂಪಿಡಲು ತಳಿ[3]ನು ಲೇ |
ಪಿಸಿದ ಮೆಯ್ಗಂಪುಗಳ ಭೂಷಣ |
ವಿಸರ ಲಹರಿಯ ರತ್ನರಾಜಿಯ ಬೆರಕೆವೆಳಗುಗಳ |
ಮುಸುಱು ಮುಂಗುಡಿಗಳಲಿ[4] ಕೈವಾ |
ರಿಸುವ ಕೈವಾರಿಗಳ ನೆರವಿಯ |
ವಸುಮತೀಶರು ಸಹಿತ ನಡೆದನು ಬಸವದಂಡೇಶ || ೧೬ ||

ಎಡಬಲಂಗಳೊಳೆಯ್ದು ಭಕ್ತರ |
ಗಡಣ ಹಿಂಭಾಗದಲಿ ನಾನಾ |
ಪೊಡವಿಪಾಲಕುಮಾರಕರ ಸಂದಣಿಯ ಸಂದೋಹ ||
ಬಿಡದೆ [5]ಕೈವಾರಿಸುವ ನೆಲನು |
ಗ್ಘಡಣೆಕಾಱರ[5] ಮೊತ್ತಗಳು ಮುಂ |
ಗುಡಿಯಲೊಪ್ಪಿರೆ ನಡೆದನಿದಿರನು ಬಸವದಂಡೇಶ || ೧೭ ||

---

೧ ತ ಪ್ರಭುವೆ ( ಚ. ) ೨ ಮನವೊಲಿದು ( ಇ. ) ೩ ಲಿಕೆ ( ಚ. ) ೪ ನಿಂದು ( ಚ ) ೫ ೫ ವಾದ್ಯದ ಭರಕೆ ನೆಲಘೀ | ೞಿಡಲು ರಾಯರ ( ಇ. )

ಮಾವುತರು ಮನ್ನೆಯರು ರಥಿಕರು |
ರಾವುತರು ಕರಣಿಕರು ಕವಿಗಳು |
ಭಾವಕರು ಭರತಜ್ಞರೆಲ್ಲಾ[೧] ಪರಿಯ ಪರಿಣತೆಯ ||
ಸೇವಕರು ಸಹಿತಲ್ಲಮಪ್ರಭು |
ದೇವರಡಿಗಿದಿರಾಗಿ ನಡೆದನು |
ಪಾವನಾತ್ಮಕ ಬಸವದಂಡಾಧೀಶನರ್ತಿಯಲಿ[೨] || ೧೮ ||

ಪರಿಪರಿಯ ಸತ್ತಿಗೆಯ ಸಾಲಿನ |
ಪರಿಪರಿಯ ಚಾಮರದ ಚಾಳಿಯ |
ಪರಿಪರಿಯ ಕೈಕಂಬಿಕಾಱರು ಜಡಿವ ಗಿಡಿಬಿಡಿಯ ||
ಪರಿಪರಿಯ ಮೆಯ್ದೊಡಹಿನುಲುಹಿನ |
ಪರಿಪರಿಯ [೩]ಭುಜಬಲದ ಸುಭಟರ[೩] |
ನೆರವಿ ಸಹಿತಿದಿರಾಗಿ ನಡೆದನು ಬಸವನಲ್ಲಮಗೆ || ೧೯ ||

ಕನ್ನಡಿಯ ಕಳಸ[೪]ಗಳ ವಿಳ[೪]ಸದ |
ಹೊನ್ನಗೇದಗೆಗಱೆಯ ಮುತ್ತಿನ |
ಚೆನ್ನ ದಂಡೆಯ ಪೂವಿಡಿದ ನಱುಗಂಪುಗಳ ಮುಡಿಯ ||
ರನ್ನದಲಿ ರಂಜಿಸಿದ ತೊಡಿಗೆಗ |
ಳುನ್ನತಿಯ ಸಿಂಗಾರವೊ[೫]ಪ್ಪುವ |
ಕನ್ನೆಯರು ಸಹಿತಿದಿರುವೋದನು ಬಸವನಲ್ಲಮಗೆ || ೨೦ ||

ನಡೆವ ಗಮಕದ ನಗುವ ಚೆಲುವಿನ |
ನುಡಿಯ ನುಂಪಿನ ಸೊಬಗನೊಸಾ |
ಲಿಡುವ ನೋಟದ ನಟಣೆಯನೆ ನಾಟಿಸುವ[೬] ತನುಲತೆಯ ||
ಒಡನೆ ಕವಿತಹ ತುಂಬಿಗುಚಿತವ |
ಕೊಡುವ ಮೆಯ್ಗಂಪುಗಳ ಸೊಂಪಿನ |
ಮಡದಿಯರು ಪಿಡಿದೆಯ್ದುತಿರ್ದರು ಮಂಗಳಾರತಿಯ || ೨೧ ||

---

೧ ರಾಪರಿ ( ಇ. ) ೨ ಳ್ತಿಯೊಳು ( ಉ. ) ೩-೩ ಸುಭಟರುಗಳೆಲ್ಲರ ( ಒ. ) ೪-೪ ದ ವಿಳ ( ಇ. ) ೫ ಕೊ ( ಇ. ) ೬ ನಟಿಸುತಿಹ ( ಇ. )

ಒಳುದೊಡೆಯ ನಸುದೋಱಲಿಕೆ ನಿಱಿ |
ತೊಲಗೆ ನಳಿತೋಳುಗಳ ಬೀಸುವ |
ಚೆಲುವಿಕೆಯಲೋಸರಿಸೆ ಮೇಲುದ ತೋರ ಮೊಲೆಯಲುಗೆ ||
ಬಳಲು ಮುಡಿ ಬಸವಳಿಯೆ ಬಡನಡು |
ಬಳುಕೆ ರವೆಯುದ ರತ್ನ ಭೂಷಣ |
ಘುಲುಘುಲುಸುತಿರಲಿದಿರ ನಡೆದರು ಪಾರವನಿತೆಯರು || ೨೨ ||

ಹಿರಿದು ಗರ್ಜಿಸುವಾನೆಗಳು ಕೇಂ |
ಕರಿಸುತಿಹ ವಾಜಿಗಳು ದಿಗುತಟ |
ಬಿರಿಯೆ ಚೀ[೧]ಱುವ ಶಂಖ ಮೌರಿಯು[೨] ಕೊಂಬು ಕಹಳೆಗಳು ||
ಧರಣಿಯುದಿರಲು ಗಿರಿಗಳುರುಳಲು |
ನೆರೆದು ಮೊಳಗುವ ಭೇರಿ ತಂಬಟೆ |
ಕರಡೆ [೩]ನಿಸ್ಸಳ ಸಹಿತಲಿದಿರೆಯ್ದಿದನು[೩] ಬಸವಣ್ಣ || ೨೩ ||

ಎಲ್ಲಿ ನೋಡಲು ಛತ್ರ ಚಾಮರ |
ವೆಲ್ಲಿ ನೋಡಲು ಸಿಂಧ ಸೀಗುರಿ |
ಯೆಲ್ಲಿ ನೋಡಲು ಸೊಕ್ಕಿದಾನೆಯ ಸುಳಿವ ಹೆಕ್ಕಳವು ||
ಎಲ್ಲ ನೋಡಲು ಕುಣಿವ ಕುದುರೆಗ |
ಳೆಲ್ಲಿ ನೋಡಲು ನಲಿವ ಪುರಜನ |
ವೆಲ್ಲ ಸಹಿತಿದಿರಾಗಿ ನಡೆದನು ಬಸವದಂಡೇಶ || ೨೪ ||

ಬೊಟ್ಟನನಿತು ವಿಭೂತಿಯಿಟ್ಟೊಡೆ |
ಬೆಟ್ಟದನಿತು ಪಿಶಾಚತನವಳ |
ವಟ್ಟು ನಿಲುವುದು ದಿಟವಲಾ ಬಱಿದೇಕೆ ಪುರದೊಳಗೆ ||
ಕಟ್ಟಿಸಿದ ಗುಡಿಗಳನು ಬಸವನ |
ಕಟ್ಟಳೆಯೆ ಕಡುಚೋದ್ಯವೆನುತಲಿ |
ಮುಟ್ಟಿಸಿದರಾ ಹದನನಾಗಳೆ ಖಳರು ಬಿಜ್ಜಳಗೆ || ೨೫ ||

೧ ಕೀ ( ಕ. ) ೨ ಬಲಮುರಿ ( ಇ. ) ೩–೩ ನಿಸ್ಸಾಳಗಳ ಧ್ವನಿಯಲಿ ನಡೆದ ( ಇ. )

ಕನಸಿನಲಿ ಪಕ್ವಾನ್ನ ಫಲಗಳ |
ಘನತರವ ಕಂಡೆದ್ದು ಕರೆ ಬಿ |
ದ್ದಿನರಿಗುಣಲಿಕ್ಕೆಂಬರಂತೀ[೧] ಬಸವದಂಡೇಶ ||
ತನಗೆ ಶುಭಸೂಚನೆಗಳೊದಗಿದು |
ವೆನುತ ವಿಭವದಲಿದಿರು ಹೋದನು |
ಜನಪ ಚಿತ್ತೈಸೆಂದರಾ ಲಾವಕರಿರು ಬಿಜ್ಜಣಗೆ || ೨೬ ||

ಏನು ಕೌತುಕ ದಂಡನಾಯಕ |
ನೇನ ನೆಗಳಿದನಾರು ಬಂದಹ |
ರೇನಿನ ಕಂಡರದೇನನೆಂಬೆವು ಭಕ್ತರಭಿಮತವ ||
ತಾನೆ ಬಲ್ಲನು ತನ್ನ ಮಹಿಮೆಯ |
ನೇನ ನಾವೆನಬಹುದು ತುದಿಯಲಿ |
ತಾನೆ ಕಾಣಲಿಬಹುದು ಕಾರಿಯವೆಂದನವನೀಶ || ೨೭ ||

ಇತ್ತಲೀ ಹದನಾಯ್ತು ಬಳಿಕಿ |
ನ್ನತ್ತಲಾ ಬಸವಣ್ಣ ತನ್ನಯ |
ಚಿತ್ತದಲಿ ಚಿಂತಿಸಿದನಾ ಪ್ರಭು ಬಾರನೇ ಎನುತ |
ಅತ್ತಲಿ ಸ್ಥಿತಿಗತಿಯನಾ ಪ |
ವೊರ್ತ್ತಮ ಪ್ರಭುರಾಯ ಲೀಲಾ |
ವೃತ್ತಿಯಿಂದಬಿದನುವ ನೆನೆದನು ತಾನೆ ತನ್ನೊಳಗೆ || ೨೮ ||

ವಂದನೆಯ ವೇಷಂಗಳಂದವ
ಹೊಂದದೆಲ್ಲರ ಕಂಗೆ ಮರುಳಿನ |
ಚಂದದಿಂಗಿತದಿಂದೆ ಸುಳಿದರೆ ಬಸವ ಬಳಿಕೆನ್ನ ||
ಅಂದದೊಳಗನು ತಿಳಿವನೋ ಮೋಹ |
ಮಂದಮತಿಯಾಗಿಹನೊ ನಾಸಿದ |
ನಿಂದು ನೋಡುವೆನೆನುತಲಾ ಪ್ರಭುರಾಯನನುಗೆಯ್ದು || ೨೯

೧ ತೆರದಲಿ ( ಅ. ) ; ತಿರೆ ( ಇ. ) ೨ ಚುಚ್ಚುಕ ( ಇ. ) ೩ ಬಲ್ಲರ | ದೇ ( ಇ ) ೪ ;
( ಇ, ಉ, ಒ, ಜ. )

ಅಣಕಿಸುವ ಬಾಧಕರ ಬಾಯುಸೆ |
ಟೊಣೆದು ಬಸವನ ಭಕ್ತಿಭಾರದ |
ಹೊಣಕೆಯನೆ ಹುಂಕಿಕೊಂಡು ಪೂರೈಸಲಿಕೆ ಬೇಕೆನುತ ||
ಎಣಿಸಬಾರದ ನೆರೆದ ನೆರವಿಯು |
ಕಣುಮುನಕೆ ಕಾಣಿಸಿದನೊಂದೇ |
ಕ್ಷಣದೊಳಗೆ ಸಮ್ಮೆಲ್ಲಮುಪ್ರಭುಲಿಂಗ ಲೀಲೆಯಲಿ || ೩೦ ||

ಬೀದಿಬೀದಿಗಳೊಳಗೆ ನೋಟಕ |
ರಾದಿಯಾದ ಸಮಸ್ತ ಪುರಜನ |
ವೆಯ್ದೆ ನಿರ್ಮಲವಾಗಿಯೊಂದೇ ಬಾರಿ ಕಾಂಬಂತೆ ||
ಆದಿಮಧ್ಯಾಂತಂಗಳಿಲ್ಲದ |
ನಾದಿ ಸಿದ್ಧನು ಹಲವು ಮೈಯಲಿ |
ಭೇದವಿಲ್ಲದೆ ಸುಳಿದನಾ ಪ್ರಭುಲಿಂಗ ಲೀಲೆಯಲಿ || ೩೧ ||

ಪಟ್ಟಣಕೆ ಬೇಕಾಗಿ ರಚಿಸಿದ |
ಬಟ್ಟೆಬಟ್ಟೆಗಳೊಳಗೆ ನಡೆತಂ |
ದಿಟ್ಟಣಿಸಿ ನೋಡುವರಿಗಲ್ಲಲ್ಲಗೆ ವಿನೋದದಲಿ ||
ನೆಟ್ಟನಾ ಪ್ರಭು ಕಪಟ ಕಾಯದ |
ಕಟ್ಟಳೆಯ ಕಾಣಿಸಿದನಂತದ |
ನಿಟ್ಟಿಸುವೊಡರಿದಾದುದೇನೆಂದೆಂಬೆನಚ್ಚರಿಯ || ೩೨ ||

ಬಿಟ್ಟ ಮಂಡೆಯ ಕೆಂಚುಗೂದಲ |
ನಿಟ್ಟೊಡಲ ನಿಡುದೋಳ ತೊನಹಿನ |
ಮುಟ್ಟದೆವೆಗಳ ನಟ್ಟ ನೋಟದ ಲಂಬಕರ್ಣಗಳ ||
ದಟ್ಟಡಿಯ ಮಲೆವಂಗದೊಲಹಿನ |
ಕಟ್ಟಳೆಯ ಕಡು ಮುರುಳು ವೇಷದ |
ತೊಟ್ಟು ತೊಟ್ಟನೆ ಸುಳಿದನಾ ಪ್ರಭುಲಿಂಗ ಲೀಲೆಯಲಿ || ೩೩ ||

---

೧ ಸೊ ( ಇ. ) ೨ ವ ( ಉ, ಕ. ) ೩ ಕ್ಕೆ ( ಜ, ಮು. ) ; ಮುಂ ( ಗ. ) ೪ ಸಾಧ ( ಗ. ) ೫ ಬೆರಗಾಗೆ ( ಉ, ಜ. ) ; ಚೆಲುವಾಗಿ ( ಇ. ) ೬ ವಿಕಟ ( ಗ. ) ೭ ನೆ ( ಇ, ಉ, ಖ, ಗ, ಜ. )

ಉಱುಗು ಟೊಂಕದ ಕುಂಟಗಾಲಿನ ।
ಬೆಱತ ಬಿಂಕದ ಮೆಯ್ಯ ಬಿಗುಹಿನ
ತಱಿದ ಬಾಸುಳ ಬದಿಯ ಮುಸುಱುವ ನೊಣದ ಹುಣ್ಣುಗಳ ॥
ಕಿಱುನಗೆಯ ಕಟವಾಯ ಜೋಱಿನ ।
ಕುಱುಹನಡಗಿಸಿಕೊಂಡು ಹಸ್ತದ[೧]
ನಿಱಿಗೆಯಲಿ ನೆಱೆ ಸುಳಿದನಾ ಪ್ರಭುಲಿಂಗ ಲೀಲೆಯಲಿ ॥ ೩೪ ॥

ನೋಡುವರ ನೆಱೆಯಟ್ಟಿ ಮುಟ್ಟಿಸಿ ।
ಓಡಿಹೋಗುತ ಮರಳಿ ಹಿಂದಕೆ ।
ಕೋಡಕೆಯ್ಯವರುಗಳನೆಡಿಸಿ ಬೀಳುತೇಳುತಲಿ ॥
ಹಾಡುತಲಿ ನಲಿನಲಿದು ಹರಿಸುಟಿ ।
ಯಾಡುತಲಿ ನಾನಾ ವಿನೋದವ ।
ಮಾಡುತಿರ್ದನು ಜಗದೊಳಾ ಪ್ರಭುಲಿಂಗ ಲೀಲೆಯಲಿ ॥ ೩೫ ॥

ಒಮ್ಮೆ ಶಿಶುವಹನೊಮ್ಮೆ ಗುರುವಹ ।
ನೊಮ್ಮೆ ಬಣಗಹನೊಮ್ಮೆ ಪಟುವಹ ।
ನೊಮ್ಮೆ ರೂಪಹನೊಮ್ಮೆ ಬಕ್ಕಟ[೩] [೪]ಬಟ್ಟ ಬಯಲಹನು ॥
ಒಮ್ಮೆಯಿಲ್ಲಹನೊಮ್ಮೆಯುಳ್ಳಹ ।
ನೊಮ್ಮೆಯೆಲ್ಲಾ ಮಿಡಿಯೊಳಿಹ ಪರ ।
ಬೊಮ್ಮನಲ್ಲಮಲಿಂಗ ನಟಿಸಿದನಿಂ ಪ್ರಕಾರದಲಿ ॥ ೩೬ ॥

ಹಾಡಿದೊಡೆ ಹಾಡುವನು [೫]ಪಾತ್ರವ ।
ನಾಡಿದೊಡೆ ತಾನಾಡುವನು[೫] ಕೊಂ ।
ಡಾಡಿದೊಡೆ ಕೊಂಡಾಡುವನು ನಮಿಸಿದೊಡೆ ನಮಿಸುವನು ॥
ನೋಡಿದೊಡೆ ನೋಡುವನು ಜೀವರು ।
ಮಾಡಿದಂತಿರೆ ಮಾಡಿ ನಿರ್ಗುಣ ।
[೬]ಗಾಢವನೆ ಪಸರಿಸಿದನಾ[೬] ಪ್ರಭುಲಿಂಗ ಲೀಲೆಯಲಿ ॥ ೩೭ ॥

---

೧ ಹೊಸಪರಿ ( ಇ, ಜ. ) ೨ ಳಿ । ದಾ ( ಅ. ) ೩ ಯಕಟಾ ( ಅ. ) ೪-೪ ಬಯಲು ತಾ ( ಉ, ಗ, ಜ. ) ೫-೫ ನರ್ತನ । ವಾಡಿದರೆಯಾಡುವನು ಸೆರೆ ( ಇ. ) ೬-೬ ಗೂಢದಲಿ ಪಸರಿಸಿದನು ( ಇ. )

ಕಂಡವರು ಬೆಱಗಾಗಿ ಬೆಬ್ಬಳ
ಗೊಂಡು ನೋಡುತಲಿರ್ದರಾತನ |
ದಂಡಿಯನು ತಾವಱಿಯಲಱಿಯದೆ ಕೂಡೆ ಜನವೆಲ್ಲ ||
ಕಂಡನಾತನ ಕಪಟವೇಷದ |
ಕಂಡಿಯನು ನೆಱೆ ನೋಡಿ ಭಾವಿಸಿ |
ದಂಡನಾಯಕ ಬಳಿಕ ನಿಶ್ಚೈಸಿದನು ಗುರುವೆಂದು || ೩೮ ||

ನೆಲನ ಮಱೆಗೊಂಡಿಹ ನಿಧಾನದ |
ಹೊಲಬನಂಜನವಿಡಿದ ಕಣ್ಣಿನ |
ಬಲುಹನುಳ್ಳವ ಕಾಬವೊಲು ಕರ ವಿಕೃತವೇಷದಲಿ ||
ಸುಳಿವ ಸಾಕ್ಷಾದಪ್ರಮೇಯನ |
ನಿಲವನಱಿದನು ಕರಣಗಳ ನಿ |
ರ್ಮಲತೆಯೊಳು ನಿಶ್ಚೈಸಿ ಬಳಿಕಾ ಬಸವದಂಡೇಶ || ೩೯ ||

ಉಕ್ಕಿದುದು ಮನವಱಿದು ಕಂಗಳು |
ಮುಕ್ಕುಳಿಸಿದುವು ಮೂರ್ತಿಯನು ಕವಿ |
ದೊಕ್ಕುವಾನಂದಾಶ್ರು ತಲೆದೋಱಿದುವು ತನುಪುಳಕ ||
ಮಿಕ್ಕು ಮಿಗೆ ಮತಿ ಮಱೆದು ಹರುಷವು |
ಹಕ್ಕೆಗೊಂಡುದು ನಲವಿನಲಿ ವೈ |
ಯಿಕ್ಕಿದನು ಬಸವಣ್ಣನಲ್ಲಮಲಿಂಗನಂಘ್ರಿಯಲಿ || ೪೦ ||

ಘನಮಹಿಮ ಶಿವಭಕ್ತರೆಲ್ಲರು |
ತನತನಗೆ ಹರಿತಂದು ತಮ್ಮಯ[೧] |
ತನುವನೀಡಾಡಿದರು ಬಳಿಕಾ ಪ್ರಭುವಿನಂಘ್ರಿಯಲಿ ||
ವನಿತೆಯರು ನಲವಿನಲಿ ಜಯ ಜಯ |
ವೆನುತ ಕರ ನಖ ನಯನಗಳ ಬೆಳ |
ಗನೆ ನಿವಾಳಿಸುತೆತ್ತುತಿರ್ದರು ಮಂಗಳಾರತಿಯ || ೪೧ ||

೧ ಸಾಷ್ಟಾಂಗಸಹಿತವೆ (ಕ, ಜ.)

ಶರಣು ಶರಣೆಂದಿದಿರುಗೊಂಡರು |
ತಿರುಗಿದುದು ಜನವೆಲ್ಲ ನೆರೆದ |
ಬ್ಬರಿಸಿದುವು ವಾದ್ಯಗಳು ಮಿಗೆ ಕಲ್ಯಾಣಪುರದೊಳಗೆ ||
ಬರುತಲಿರ್ದನು ಸಕಲ ಪದದಲಿ |
ಭರಿತನಾಗಿಯಿದೇನು ಮಹಿಮೆಯ |
ಹರಹಿಕೊಂಡೆಯ್ತಂದನೋ ಪ್ರಭುಲಿಂಗ[೧] ಲೀಲೆಯಲಿ || ೪೨ ||

ಬಗೆವೊಡಾ ಹನ್ನೆರಡು ಯೋಜನ |
ದಗಲವಾಗಿಯೆ ಬಹಳವೆನಿಸಿದ |
ನಗರದೊಳಗೆಲ್ಲೆಲ್ಲಿ ನೋಡಿದೊಡಲ್ಲಿಯಲ್ಲಮನು ||
ಬಗಿದು ಹುಗಲೆಡೆಯಿಲ್ಲವೆಂಬವೊ |
ಲಗಣಿತಪ್ರತಿಯಾಗಿ ಸುಳಿದನು |
ಪೊಗಳ ಬಲ್ಲವರಾರು ದಿಟವಾತನ ಮಹಾತ್ಮೆಯನು * || ೪೩ ||

ಕೇರಿಕೇರಿಯೊಳಾಡುತಿಹ ಸುಕು |
ಮಾರಕರ ಕಂಡಾಡುವನು ಪರಿ |
ವಾರದೊಳು ದಿಟದಂತೆ ನಾಯಕತನವ ಪಸರಿಸುವ ||
ಆರು ಕಂಡರೆಯುವರವೊಲು ಸಾ |
ಕಾರನಾಗಿಹನಲ್ಲದೊಂದು ಶ |
ರೀರ ತಾನಲ್ಲೆಂಬುದನು ತೋಱಿದನು ಪ್ರಭುರಾಯು || ೪೪ ||

ಹಸು ತೃಷೆಯ ಹರವರಿಯುನಱಿಯದೆ |
ಮಿಸುಗುವೆವೆ ಕಣ್ಣಾಲಿಗಳನಾ |
ಡಿಸದೆ ನಡೆತಂದಾ ಮಹಾತ್ಮನ ಕೂಡೆ ನೋಡುತಲಿ ||
ಎಸೆವ ಪುರಜನವೆಯ್ದೆ ತಾವನಿ |
ಮಿಷರ ತೆಱದಲಿ ಮೆಱೆಯುತಿರ್ದರು |
ದೆಸೆದೆಸೆಯ ಬೀದಿಗಳಲಾ ಕಲ್ಯಾಣಪುರದೊಗೆ || ೪೫ ||

---

೧ ಶನ್ನ (ಇ) * ಈ ಪದ್ಯವು 'ಇ' ಪ್ರತಿಯಲ್ಲಿ ಇಲ್ಲ.

ಬಂದನಾಗಳೆ ಬಸವರಾಜನ |
ಮಂದಿರಕೆ ಸಲೆ ಸಕಲ ಸಂಭ್ರಮ |
ದಿಂದಲಾ ಪ್ರಭುಲಿಂಗ ಭಕ್ತಾಧೀನಯುಕ್ತಿ[೧]ಯಲಿ ||
ಮುಂದೆ ಜಯ ಜಯವೆನುತ ಪರಮಾ |
ನಂದದಲಿ ಪರಿಪರಿಯ ಭಕ್ತರ |
ಸಂದಣಿಯ ಸೌರಂಭದಿಂದಾ ಶೂನ್ಯವಿಸ್ತರಕೆ[೨] || ೪೬ ||

ಜಗದ ಜಂತ್ರದ ಸೂತ್ರಧಾರಿಗೆ |
ಸಗುಣ ನಿರ್ಗುಣನಹ ಮಹಾತ್ಮಗೆ |
ಬಗೆದು ನೋಡಲು ಬಲ್ಲತಾ[೩]ವುದು ದಿಟ ವಿಚಾರಿಪೊಡೆ[೪] ||
ಹಗಲುಗತ್ತಲೆಯೆನಿಸಿ ಹಲಬರ |
ಬೆಗಡುಗೊಳಿಸುವ ಶೂನ್ಯಪೀಠವ |
ನಗುತಲಡರಿದನಲ್ಲಮಪ್ರಭುಲಿಂಗ ಲೀಲೆಯಲಿ || ೪೭ ||

ನಾಡಿಗಳನಾವಾವ ಪರಿಯಲಿ |
ತೀಡಿ ಜೀವರ ದೇಹಯಂತ್ರವ |
ನಾಡಿಸುವವೊಲು ಶೂನ್ಯಸಿಂಹಾಸನದ ಸೂತ್ರವನು ||
ಕೂಡಿ ನೋಡಿ ಷಡುಸ್ಥಲದ ಸವ |
ಜೋಡನೆಲ್ಲವ ಮುಟ್ಟಿ[೫] ಮುಂಪಕೆ |
ನೀಡಿ ನಡೆದೇರಿದನು ಬಳಿಕಾ ಪ್ರಭು ವಿನೋದದಲಿ || ೪೮ ||

ಆರು ಚಕ್ರವನಾರು ಶಕ್ತಿಯ |
ನಾರು ಮತಿಗಳನಾರು ಗತಿಗಳ |
ನಾರು ವರ್ಣ[೬]ವನಾರು ನಿರ್ಣಯವಾದ ಸಂಪದವ ||
ಆರು ಪರಿಯಲಿ ಸವೆದು ಸಲೆ ನೆಲೆ |
ದೋರುವೆಡೆಗಳನೆಯ್ದೆ ನೋಡುತ |
ಲೇರುತಿರ್ದನು ಶೂನ್ಯಸಿಂಹಾಸನವ ಪ್ರಭುರಾಯ || ೪೯ ||

---

೧ ವೃತ್ತಿ (ಒ) ೨ ಪೀಠಕ್ಕೆ (ಉ, ಖ.) ೩ ಬಳಿಕದಾ (ಇ.) ೪ ಸದೆ (ಇ.) ೫ ಮುರಿದು (ಜ) ೬ ಭೂತ (ಉ, ಗ.)

ಕುಂಡಲಿಯುನಂಡಲೆದು ರವಿಶಶಿ |
ಮಂಡಲಂಗಳ ಮೀಱಿ ಕಾಮದ
ಕಂಡಿಗಳ ಕೀಲಿಸಿ ಸುಷುಮ್ನಾನಾಳದೊಳಗಡಱಿ[೧] ||
ಮಂಡಿಸಿದನಾ ಶೂನ್ಯಪೀಠದ |
ಮಂಡೆಯೊಳು ತೊಳತೊಳಗಿ ಬೆಳಗಿಯು[೨] |
ಖಂಡ ತೇಜೋಮೂರ್ತಿಯಲ್ಲಮಲಿಂಗ ಲೀಲೆಯಲಿ || ೫೦ ||

ಪ್ರಣವತರು[೩]ವನೆ ನೆಮ್ಮಿ ಮಂತ್ರಾ |
ಗ್ರಣಿಯು ಪಂಚಬ್ರಹ್ಮ ಸರ್ಪನ |
ಫಣಿ[೪]ಯ ಮಣಿಯಿಂದತ್ತ[೪]ಲದ್ವೈತಸ್ಥಲಾದಿಗಳ ||
ಕಣಿಯನೆಲ್ಲವ ಕಳೆ[೫]ದು ನೆಱೆ ನಿ |
ರ್ಗುಣ ನಿರಾಳದ[೬] ನಿರುಪಮದ ಮೇ |
ಲಣ ಮಹಾಸನದಲ್ಲಿಯಾ[೭] ಪ್ರಭುಲಿಂಗ ಮಂಡಿಸಿದ || ೫೧ ||

ಅಲ್ಲಿಗಲ್ಲಿಗೆ ತಕ್ಕರೂಪಿನ |
ಲ[೮]ಲ್ಲಿಗಲ್ಲಿಗೆ ತಕ್ಕನಡೆಗಳ |
ಲ[೯]ಲ್ಲಿಗಲ್ಲಿಗೆ ತಕ್ಕ ಸಕಲೈಶ್ವರ್ಯ ಶಕ್ತಿಯಲಿ[೧೦] ||
ಅಲ್ಲಿಗಲ್ಲಿಗೆ ಸುಳಿದು ಸೂತ್ರಗ |
ಳೆಲ್ಲವನು ಚೇಷ್ಟಿಸುತಲೀಱಿದ |
ನಲ್ಲಮಪ್ರಭು ಶೂನ್ಯಸಿಂಹಾಸನದ ಶಿಖರದಲಿ[೧೧] || ೫೨ ||

ಆದಿಮಧ್ಯಾಂತಂಗಳಿಲ್ಲದ |
ವೇದಶಾಸ್ತ್ರಂಗಳಿಗೆ ಸಿಲುಕದ |
ನಾದಬಿಂದುಗಳೆಂಬ ಸಂಪುಟದೊಳಗೆ ಸಮನಿಸದ ||
ಆದ[೧೨]ರಿಸುವಾತ್ಮತ್ರಯಂಗಳ |
ಹಾದಿಯಲಿ ಹಂಗಿಲ್ಲದನುಪಮ |
ವಾದ ಘನ ಗುರು ಮೂರ್ತಿಗೊಂಡನು ಶೂನ್ಯಪೀಠದಲಿ || ೫೩ ||

---

೧. ಗಾಡಿ ( ಗ. ) ೨ ಗುವ ( ಇ, ಉ. ಗ. ) ಗುತ ( ಜ, ) ಗಿಹ ( ಖ. ) ೩ ನು ( ಉ. ) ೪-೪ ಮಣಿಯ ಬೆಳಗಿಂದ ( ಇ. ) ೫ ತಿಳಿ ( ಗ, ಚ. ) ೬ ಕುಳಿ ( ಖ ) ೭ ಸದನದೊಳಗಾ ( ಉ. ) ೮ ಪುಗ | ಳ ( ಖ. ) ೯ ದೇಹಗ | ಳ ( ಖ. ) ೧೦ ಭಕ್ತಿಗಳ ( ಖ. ) ೧೧ ವನು ( ಉ. ) ೧೨ ಧ ( ಇ, ಗ, ಜ. )

ಭಾವುರೇ ಬಸವಣ್ಣ ಭುವನ |
ವ್ಯಾಪಿಯುಹುದ್ಧೈ ದಿಟ ವಿಚಾರಿಸ |
ಲೀ ಪರಿಯಲಾ[1]ರಜೀವರಂತರ್ಮಾರ್ಗದೊಡ್ಡಣೆ[2]ಯು ||
ತ್ರೈಪುರಂಗಳನಳಿಯುಬಲ್ಲ ಮ |
ಹಾಪುರುಷ ನೀನೆನುತ ಹೊಗಳಿದ |
ನಾ ಪರಬ್ರಹ್ಮಸ್ವರೂಪನು ದಂಡನಾಯಕನ || ೫೪ ||

ತಳಿತ ತನುವಿನ ರೋಮಕೂಪದ |
ಕುಳಿಗಳೆಲ್ಲವು ಕಂಗಳಾಗಿರೆ |
ಬಳಸಿ ಭಾವಿಸಿ ಪರಮ ಗುರುವಿನ ದಿವ್ಯಮೂರ್ತಿಯನು ||
ತೊಲಗದೀಕ್ಷಿಸಿ ಚಿತ್ತದಲಿ ಮು |
ಕ್ಕುಳಿಸಿಯಾನಂದಾಶ್ರು ಜಲಧಿಯು[3] |
ತುಳುಕುತಿರ್ದನು ಬಸವದಂಡಾಧೀಶ ಭಕ್ತಿಯುಲಿ || ೫೫ ||

ಹಾಡುತಿರ್ದರು ಕೆಲರು ನೃತ್ಯವ |
ನಾಡುತಿರ್ದರು ಕೆಲರು ಸೇವೆಯ |
ಮಾಡುತಿರ್ದರು ಕೆಲರು ಜಯ ಜಯ ಉಘೆ ಉಘೇ ಎನುತ ||
ನೋಡುತಿರ್ದರು ನಲಿದು[4] ಭಕ್ತಿಯ |
ಗಾಡಿಕಾಱರು ತಮತಮಗೆ ಹರಿ |
ದಾಡುತಿರ್ದರು ಹರುಷದಲಿ ಗುರು ಮೂರ್ತಿಗೊಂಡಿರಲು || ೫೬ ||

ಹಲವು ಚೆಲುವಿನ ಭದ್ರಮಂಟಪ |
ದೊಳಗೆ ನೆರೆದಿಹ ಜಂಗಮದ ಸಂ |
ಕುಳದ ಭಕ್ತರ ಪರಿಚರದ ಭಾವೆಯರ ಮಧ್ಯದಲಿ ||
ತೊಳಗಿ ಬೆಳಗುವ ಶೂನ್ಯಪೀಠವ |
ನೆಲೆಯನೆಲ್ಲವ ಮೀಱಿ ಬಯಲಲಿ |
ನೆಲಸಿ ನಿಂದನಿದೇನು ಮಹಿಮೆಯೊ ಗುರು ಗುಹೇಶ್ವರನ || ೫೭ ||

**ಅಂತು ಗತಿ ೨೨ಕ್ಕಂ ಪದ ೯೮೧ ಕ್ಕಂ ಮಂಗಳಂ**

---

೧ ನಾ (ಒ.) ೨ ದೋವರಿ (ಇ.) ೩ ದಲಿ (ಗ.) ೪ ಪರಮ (ಇ.); ಕೆಲರು (ಒ.)

# ಪ್ರಭುದೇವರು ಆರೋಗಣೆ ಮಾಡಿದ ಗತಿ

**ವಚನ**

ಒಂದಾದುದು ಎರಡಪ್ಪುದೇ । ಎರಡಾದುದು ಒಂದಪ್ಪುದೇ । ಪರಿಣಾಮದ ವೇಳೆಯಲ್ಲಿ ಸಂದೇಹ ಹುಟ್ಟಲುಂಟೇ । ಬಂದ ಜಂಗಮದ ನಿಲವನರಿಯದೆ ಹಿಂದನೆಣಿಸಿ ಹಲವ ಹಂಬಲಿಸುವರೇ । ಈ ಒಂದು ನಿಲವಿಂಗೆ ಪರಿಣಾಮವ ಮಾಡಬಲ್ಲಡೆ ನಿನ್ನ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ಪರಿಣಾಮವಹುದು ನೋಡಾ । ಗುಹೇಶ್ವರನೆಂಬ ಲಿಂಗದ ನಿಲವನರಿಯದೆ ಮರುಳಾದೆಯಲ್ಲಾ ಸಂಗನಬಸವಣ್ಣಾ
॥ ೧ ॥

ದೇವ ದೇವ ಮಹಾಪ್ರಸಾದ ನಿಮ್ಮಡಿಗಳಿಂದಂತಲ್ಲದೆ ಇನ್ನೆನಗೆ ಬೇರೆ ಸ್ವತಂತ್ರವುಂಟೇ । ಸಂದ ಸಂಶಯವುಂಟೇ । ದರ್ಪಣದೊಳಗಣ ಪ್ರತಿಬಿಂಬವ ನೋಡುವ ಮುಖಕ್ಕೆ ಭಿನ್ನಭಾವವುಂಟೇ । ಚರಿಸಿ ಬಹ ಅನಂತ ಸುಳುಹಿನೊಳಗೆ ನೀನೊಬ್ಬ । ನಿನ್ನೊಳಗೆ ಅನಂತ ಸುಳುಹು ಅಡಗಿದುವು । ನಿನಗೆ ಮಾಡಿದ ಸುಯಿದಾನವ ನಿನಗೆ ನೀಡುವೆ ಅವಧರಿಸಯ್ಯಾ ಕೂಡಲಸಂಗಮದೇವ ಪ್ರಭುವೇ ॥ ೨ ॥

ಹೆಡಗೆ ಹಾರ ಮೊರ ಹಾರ ಗೆರಸಿ ಹಾರ ಮಡಕೆ ಹಾರ ದೆಸೆದೆಸೆಯಲು ತಂದು ನೀಡುತ್ತಿರಲು ಹೊಸಪರಿಯ ಆರೋಗಣೆಯನವಧರಿಸುತಿರ್ದನು । ಆವ ದೆಸೆಗಳಲ್ಲಿ ತಂದು ನೀಡುತ್ತಿದ್ದರೆ ಆ ದೆಸೆಗಳಲ್ಲಿ ಬಾಯಾಗಿ ಕೊಳುತಿರ್ದನು । ಎತ್ತ ನೋಡಿದಡತ್ತ ಮುಖವಾಗೆ ಎವೆ ಹೊಯ್ವಂತೆ ತೆರಹಿಲ್ಲದೊಂದು ನಿಮಿಷ ಎಡಹಿದರೆ ಅಕ್ಕಿಗಟ್ಟು ನುಚ್ಚು ತವುಡು ಮೊದಲಾದ ಪದಾರ್ಥವೆಲ್ಲವು ಸಂದವು ನಿಮಿಷದಲ್ಲಿ । ಭಕ್ತಿಬಂಧುಗಳೆಲ್ಲ ತಮ್ಮ ತಮ್ಮ ಮಠದಲಾದ ಸುಯಿದಾನಂಗಳಂ ತಂದು ಸಾರಗಟ್ಟಿ ನೀಡುತಿರ್ದಪೆ ಅದ್ಭುತಮಾದ ಆರೋಗಣೆಯಂ ಕಂಡು ಹರಿಹರಿದು ಪಾಕಪ್ರಯತ್ನಮಂ ಮಾಡಿ ಎನುತ ಬಸವಪ್ರಿಯ ಕೂಡಲಚೆನ್ನಸಂಗಯ್ಯನಲ್ಲಿ ಸಂತೋಷದೆಲೋಲಾಡುತಿರ್ದನೆನ್ನ ಪರಮಗುರು ಬಸವಣ್ಣನು ॥ ೩ ॥

ಗುರುವೇ ಬೋನ ಶಿಷ್ಯನೇ ಸೋಬೋಗರ ಲಿಂಗಕ್ಕೆ ಪದಾರ್ಥ ಅರ್ಪಿತವಯ್ಯಾ । ಘನಕ್ಕೆ ಮನವೆ ಅರ್ಪಿತ । ಮನಕ್ಕೆ ಮಹವೆ ಅರ್ಪಿತ । ಘನವೊಳಗೆ ಮನವು ತಲ್ಲೀಯವಾದ ಬಳಿಕ ಅರ್ಪಿಸುವ ಭಕ್ತರಾರು ಆರೋಗಿಸುವ ದೇವರಾರು । ನಿತ್ಯತೃಪ್ತನುಣಕಲಿತನೆಂದಡೆ ಅರ್ಪಿಸಲುಂಟೇ ದೇವ ಮತ್ತೊಂದನು । ಕೂಡಲಸಂಗಮದೇವಪ್ರಭುವೇ ಸುಚಿತ್ತದಿಂದ ಆರೋಗಿಸಯ್ಯಾ ॥ ೪ ॥

ಮನ ಯುಕ್ತಿ ವಿವೇಕನೆಂಬಕ್ಕಿಯನು ಗುಪ್ತವೆಂಬೊರಳೊಳಗಿಕ್ಕಿ ಅಭಿನ್ನಮಥನವೆಂಬ ಒನಕೆಯಲ್ಲಿ ತಳಿಸಿ ಕಲ್ಮಷವೆಂಬ ತೌಡು ಹಾರಿಸಿ ಸಮತೆಯೆಂಬ ಸಲಿಲದಲ್ಲಿ ಚಾಳಿಸಿ ಅಳುಪೆಂಬ ಹರಳು ಕಳೆದು ದಯಾಮೃತವೆಂಬ ಹಾಲಿನಲ್ಲಿ ಬೋನಮಂ ಮಾಡಿ ಸಮರಸ ರುಚಿಕರವೆಂಬ ಶಾಕಪಾಕಂಗಳಂ ಮಾ ನೆನಹಿನ ಅವಲಂಬನೇ ಅಭಿಘಾರವಾಗಿ ನಿರ್ಮಳವೆಂಬ ಶಿವದಾನವನಳವಡಿಸಿ ಕಾದಿದ್ದರಯ್ಯಾ ಪಂಚೇಂದ್ರಿಯವೆಂಬ ಸುನಕ ಮುಟ್ಟದಂತೆ । ಕಾದಿದ್ದರಯ್ಯಾ ಷಡುವರ್ಗನೆಂಬ ತೊತ್ತಿರು ಮುಟ್ಟದಂತೆ ಕಾದಿದ್ದರಯ್ಯಾ ಅಷ್ಟಮದಂಗಳೆಂಬ ಮಕ್ಕಳು ಮುಟ್ಟದಂತೆ । ಇನಿತು ಹೀನಂಗಳಿವಾವು ಮುಟ್ಟದಂ ಕಾದಿದರಾಗಿ ಈ ಬೋನ ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು ಕಾಣಾ ಚೆನ್ನಬಸವಣ್ಣಾ ॥ ೫

ಭಕ್ತಿಯುಕ್ತಿಯ ಹೊಲಬ ಮೂರು ಲೋಕದೊಳಗೆ ಬಲ್ಲವರಾರನು ಕಾಣೆನು । ಲಿಂಗದಲ್ಲಿ ಭಕ್ತಿ ಮಾಡಿದಡೆ ಭವ ಹರಿಯದೆಂದು ಜಂಗಮಮುಖ ಲಿಂಗವೆಂದರಿದು ಅರ್ಚಿಸಿ ಪೂಜಿಸಿ ದಾಸೋಹವ ಮಾಡಿ ಪ್ರಸನ್ನತೆಯ ಹಡೆದು ಆ ಪ್ರಸನ್ನತೆಯ ರುಚಿಯನುಪಮಿಸಬಾರದು । ಆ ಬಸವಣ್ಣನ ಭಕ್ತಿಪ್ರಸಾದವ ಕೊಂಡು ನಾನು ಬದುಕಿದೆನು । ಆ ಬಸವಣ್ಣನ ಪ್ರಸಾದವ ಕೊಂಡು ಅಲ್ಲಮಪ್ರಭು ತೃಪ್ತನಾದನು । ಅಲ್ಲಮಪ್ರಭು ಕೊಂಡ ಪ್ರಸಾದದ ತೃಪ್ತಿ ಲಕ್ಕದ ಮೇಲೆ ತೊಂಬತ್ತಾರುಸಾವಿರ ಜಂಗಮಕ್ಕೆ ತೃಪ್ತಿಯಾಯಿತ್ತು । ಆ ಲಕ್ಕದ ಮೇಲೆ ತೊಂಬತ್ತಾರುಸಾವಿರ ಜಂಗಮ ತೃಪ್ತಿಯಾದಲ್ಲಿ ಸಚರಾಚರವೆಲ್ಲವು ತೃಪ್ತಿಯಾಯಿತ್ತು । ಇಲ್ಲವೆಂದು ಬಿಜ್ಜಳ ತರ್ಕಿಸಲು ಕಪ್ಪೆಯ ಒಡಲೊಳಗೆ ಪ್ರಭುವಿನ ಪ್ರಸಾದವ ತೋರಿದ ಬಸವಣ್ಣನು । ಇದು ಕಾರಣ ನಮ್ಮ ಕೂಡಲಚೆನ್ನಸಂಗಮದೇವರಲ್ಲಿ ಬಸವಣ್ಣನ ಪ್ರಭುದೇವರ ಪ್ರಸಾದದ ಘನವು ತ್ರೈಲೋಕದೊಳಗೆ ಬೆಳವಿಗೆಯಾಯಿತ್ತು ॥ ೬ ॥

ತೊರೆಯುದಕವ ಕೆರೆಯುಂಡು ತೃಪ್ತವಾಗಲು ಆ ಕೆರೆಯುದಕವ ಹಲವು ಕೆಲವು ಸ್ಥಾವರ ಜಂಗಮಗಳುಂಡು ತೃಪ್ತಿವಡೆದಂತೆ ಪ್ರಭುದೇವರ ತೃಪ್ತಿ ಅಸಂಖ್ಯಾತ ಮಹಾಗಣಂಗಳೆಲ್ಲಕ್ಕೆ ತೃಪ್ತಿಯಾಯಿತ್ತು ನೋಡಾ । ಬಸುರ ಹೆಂಗಸು ಉಂಡಲ್ಲಿ ಒಡಲ ಶಿಶು ತೃಪ್ತಿಯಾದಂತೆ ಸಚರಾಚರವೆಲ್ಲವು ತೃಪ್ತಿಯಾದವು ನೋಡಾ । ಕೂಡಲಸಂಗಮದೇವಾ ಪ್ರಭುದೇವರ ಪ್ರಸಾದದ ಮಹಿಮೆಗೆ ನಮೋ ನಮೋ ಎಂಬೆನು ॥ ೭ ॥

**ಸೂಚನೆ**

ಒಸೆದು ತಾನುಂಡಖಿಳ ಜೀವರ ।
ಹಸಿವ ನೂಕಿದ ಲೋಕವಱಿಯಲು ।
ಬಸವರಾಜನ ಭಕ್ತಿವತ್ಸಲ ಗುರು ಗುಹೇಶ್ವರನು ॥

ಅನುವಿಡಿದು ಗುರು ಲಿಂಗ ಜಂಗಮ ।
ದನು[1]ವ ನಿಶ್ಚೈಸುವರು[2] ನಿರ್ವಂ ।
ಚನೆಯ ಭಕ್ತಿಗೆ ತನು ಮನೋಧನಗಳನು ಸವೆವ[3]ವರು ॥
ವಿನುತ ಮತಿಯುತರೆಲ್ಲರತಿ ವಂ ।
ದನೆಯಲಾಲಿಸಿ ಕೇಳಿ ಸುಖಿಸುವು ।
ದನುಪಮದ ಸಂಗತಿಯನೀ ಪ್ರಭುಲಿಂಗ ಲೀಲೆಯಲಿ ॥ ೧ ॥

---

೧ ತನ ( ಉ, ಕ, ಚ. ) ೨ ಸುತ್ತೆ ( ಕ. ) ೩ ಸಲಿಸು ( ಇ. )

ಬಯಲು ಸಿಂಹಾಸನದ ಮೇಲಣ |
ಬಯಲು ಬಯಲಲಿ ತೊಳಗಿ ಬೆಳಗುತ |
ಬಯಲ ತನುವಿಡಿದಲ್ಲಮಪ್ರಭು ಮೂರ್ತಿಗೊಂಡಿರಲು ||
ಪ್ರಿಯಪಲುಬ್ಬುವ ಭುಲ್ಲವಿಪ ಬು |
ದ್ಧಿಯನು ಬೋಳೈಸುತಲಿ ಬಳಿಕತಿ |
ಶಯದ ಸತುಕರಣೆಗಳನನುಗೊಳಿಸಿದನು ಬಸವಣ್ಣ || ೨ ||

ಚೆನ್ನಬಸವನು ಬಾಚರಸನ |
ಪ್ಪಣ್ಣ ಮಡಿವಳ ಮಾಚಿದೇವನು |
ಕಿನ್ನರಿಯ ಬೊಮ್ಮಯ್ಯಗಳು ಮೋಳಿಗೆಯ ಮಾರಯ್ಯ ||
ಮಾನ್ಯತೆಯ ಶಿವಭಕ್ತರೆಲ್ಲರು |
ಶೂನ್ಯಸಿಂಹಾಸನದ ಗುರುವಿನ |
ಬಿನ್ನಣಕೆ ಬೆಱಗಾಗುತಿರ್ದರು ನಟ್ಟ ನೋಟದಲಿ || ೩ ||

ಬಂದು ಲಿಂಗಾರ್ಚನೆಯ ಮಾಡಲಿ |
ಕೆಂದು ಮುನ್ನಿನ ದಿವಸ ದಿವಸದ |
ಛಂದದಿಂದಲಿ ಮೂರ್ತಿಗೊಂಡು ಮನೋನುರಾಗದಲಿ ||
ಮುಂದೆ ನಾನಾ ರಾಗ ರಂಜನೆ |
ಯಿಂದಲಾಪ್ಯರ ವಚನಗಳನೊಲ |
ವಿಂದೆ ಕೇಳುತಲೊಪ್ಪುತಿರ್ದುದು ಜಂಗಮವ್ರಾತ || ೪ ||

ಜಡೆಯು ರುದ್ರಾಕ್ಷಿಯು ವಿಭೂತಿಯು |
ಕೊಡೆಯು ಕೌಪೀನದ ವ್ಯಾಘ್ರಾಜಿನ |
ದುಡುಗೆಗಳ ನಿರ್ವಾಣ ಕಾಸಾಂಬರದ ಹಾವುಗೆಯು ||
ಹಿಡಿದ ಲಿಂಗದ ಯೋಗದಂಡದ |
ಮೃಡನ ಹೋಲುವ ಮೂರ್ತಿವೆತ್ತಿಹರೆ |
ಪ್ರೊಡೆಯರಿರ್ದರು ಶೂನ್ಯಸಿಂಹಾಸನದ ಬಳಸಿನಲಿ || ೫ ||

---

೧ ರಚನೆಗ | ಳಿಂ ( ಅ, ಇ, ಖ, ಗ. ) ೨ ಸ್ತೋಮ ( ಉ, ಗ. ) ೩ ಯಂತಿಹ ( ಅ, ಇ, ಗ. )

ನೆರೆದುದಾರೋಗಣೆಗೆ ನಾನಾ |
ಪರಿಯ ಜಡೆಗಳ ತಾಳುಬೋಳಿನ |
ವರ ವಿಭೂತಿಯ ಲಿಂಗದಂಗದ ಕರಕಮಂಡಲದ |
ಬೆರಳ ಜಪಮಣಿಸಾಲಿಕೆಯ ವಿ |
ಸ್ತರದ ಕಂಬಳಿ ಕಂಥೆಗಳ ಘಾ |
ಸುರದ ಜಂಗಮ ಶೂನ್ಯಸಿಂಹಾಸನದ ಬಳಸಿನಲಿ ॥ ೬ ॥

ಧ್ಯಾನ ಧಾರಣ ಯಮ ನಿಯಮ ಸುಯಿ |
ದಾನ ಸೂಕ್ಷ್ಮವಿಚಾರ ಶೀಲ ವಿ |
ಧಾನ ಹೂವಗ್ಗವಣಿಯಾರತಿ ಧೂಪ ಬೋಗಂಗಳ |
ಮೌನ ಮೊದಲಾಗಿರ್ದ ಹಲವವ |
ಧಾನ ನಿಷ್ಠೆಯ ನಿತ್ಯ ನೇಮದ |
ಮಾನಿಗಳು ನೆರೆದಿರ್ದರಾ ಮಂಟಪದ ಬಳಸಿನಲಿ ॥ ೭ ॥

ಬಳಸಿವಗ್ಗದ ಸಭೆಯೊಳಗೆ ತೊಳ |
ತೊಳಗಿ ಬೆಳಗುವ ಶೂನ್ಯಪೀಠದ |
ತಲೆಯ ಬಯಲಾಸನದಲಮಲ ಬ್ರಹ್ಮ ನೆಲಸಿರಲು |
ನಲಿದು ನೋಡುವ ಕಣು ಮನಂಗಳ |
ತೊಲಗಲರಿಯದೆ ಬಂದ ಜಂಗಮ |
ಗಳನದೇನೆಂದರಿಯದಿರ್ದನು ಬಸವದಂಡೇಶ ॥ ೮ ॥

ಹೊಸತ ಮಾಡಿದನಿಂದು ಜಂಗಮ
ಹಸಿದು ಬಿಜಯಂಗೈದೊಡಿತ್ತಣ |
ದೆಸೆಯ ನೋಡುವುದಿಲ್ಲ ಸತ್ಕರಿಸುವುದು ಮುನ್ನಿಲ್ಲ
ಬಸವನಾದೊಡೆಯಿಂದ್ರಜಾಲದ |
ಹಸರಿಗಗೆ ಮರುಳಾದನಾತನ |
ಗಸಣೆ ನಮಗೇಕೆನುತಲೆದ್ದುದು ಜಂಗಮಸ್ತೋಮ ॥ ೯ ॥

---

೧ ದೀಪ ( ಉ. ) ೨ ಜೋ ( ಉ. ) ೩ ಮಧ್ಯದ ( ಅ, ಒ, ಡ. ) ೪ ಳು ( ಉ, ಗ. )

ಘೋರನಲ್ಲಿಂದುಭಯ ಶಂಖವ |
ಪೂರವಿಸಿಕೊಳುತೆದ್ದು ಹೋದರು |
ಸಾರಭಕ್ತಿಯ ಶರಧಿಯಱಿದನು ಬಳಿಕಲಾ ಹದನ ||
ದೂರವಾದೆನೆ ಸಮಯಕ[೧]ವರುಪ |
ಚಾರಗ[೨]ಳ ನಾನವರಿಗೋದಗದೆ[೨] |
ಮೇರಿದಪ್ಪಿದೆನೇ ಶಿವಾ ಎನುತಿರ್ದ ಬಸವಣ್ಣ || ೧೦ ||

ನಾವು ಬಡಜಂಗಮವು ಬಂದೊಡೆ |
ನೀವು ನಮ್ಮ ಸುತುಷ್ಟಿ[೩]ಬಡಿಸದ |
ದಾವ ಕಾರಣ ನೀನು ಚಿಂತಿಸುತಿರ್ದೆ ಬಸವಣ್ಣ ||
ಭಾವಿಸುವೊಡಾ ಸಾಧನದ ಸಂ |
ಭಾವನೆಗಳು ಸಮುಗ್ರವವನಿ |
ನ್ನಾವನಾರೋಗಿಸುವನೈ ಪ್ರಭುರಾಯ ಹೇಳೆಂದ || ೧೧ ||

ಮಿಾಱಿ ನುಡಿವೊಡೆ ನಿನ್ನೊಳಗೆ ನಾ |
ನಾಱಿ ಲಕ್ಕದ ಮೇಲೆ ತೊಂಬ |
ತ್ತಾಱು ಸಾವಿರ ಜಂಗಮವು ಸಂತುಷ್ಟಿಬಡುವಂತೆ ||
ತೋಱುವೆನು ಮೊದಲೆನ್ನ ಹಸಿವಿನ |
ದೂಱ ನೀ ದಿಟ[೪] ನಿಲಿಸಬಲ್ಲೊಡೆ |
ಮಾಱು ಮಾತುಗಳೇನುಕಾರಣ ಬಸವ ಕೇಳೆಂದ || ೧೨ ||

ಎನಲು ಪನ್ನೀರಿನಲಿ ಪಾದಾ |
ರ್ಚನೆಯ ಮಲಯಜಹಿಮಗಳನು ಲೇ |
ಪನವ ಮೌಕ್ತಿಕದಕ್ಷತೆಯ ನವಕುಸುಮಪೂಜೆಗಳ ||
ವಿನುತ ಧೂಪವ ರತ್ನದೀಪವ |
ಸನುಗೊಳಿಸಿ ವಂದಿಸಿದನೀ ಪರಿ |
ಮನವೊಲಿದು ಬಸವಣ್ಣನಾ ಪ್ರಭುಲಿಂಗಮೂರ್ತಿಯನು || ೧೩ ||

---

೧ ಸೇವೆಗ ( ಇ. ) ೨–೨ ಳಿಗಾಸೊದಗಲಮ್ಮದೆ ( ಒ, ಗ. ) ೩ ತೃಪ್ತಿ ( ಚ. ) ೪ ನಿದ ( ಜ. )

ಎಸೆವ ನವರತ್ನಾಳಿಯಲಿ ತೆ |
ತ್ರಿಸಿದ ಹೊನ್ನಡ್ಡಣಿಗೆಗಳು ಮಿಗೆ |
ಪಸರಿಸಿದ ಪರಿಯಾಣಗಳು ಕೆಲವಟ್ಟಲೋಳಿಯಲಿ ||
ಬಿಸಿಬಿಸಿಯ ಪರಿಪಾಕತೆಯ ಷಡು |
ರಸಮಯಂಗಳ ಬೋನವನು ಗಡ |
ಣಿಸಿ ಸಮರ್ಪಿಸಿದನು ಮಹೋತ್ಸಾಹದಲಿ ಬಸವಣ್ಣ || ೧೪ ||

ತೆಗೆದನೊಂದೆವೆ ಹಳಚುವದರೊಳ |
ಗಗಲಲಿ[1]ಕ್ಕಿದ ಬೋನದೊಳಗೊಂ |
ದಗುಳು ಮಿಗದಂತೆಲ್ಲವನು ಬಸವಣ್ಣನದ ಕಂಡು ||
ಹೊಗಳಿ ಹಿಗ್ಗುತ ಹರುಷದಲಿ ಮಿಗೆ |
ಮೊಗಮೊಗದು ತಂದೊಟ್ಟಿ[2]ಲಂತವ |
ನಗಿದನಾಗಳೆ ನಿಮಿಷದೊಳಗಾ ಪ್ರಭು ವಿನೋದದಲಿ || ೧೫ ||

ಊಡಬಹುದಿಂತುಂಬ ದೇವಗೆ |
ನೀಡಬಹುದಹು[3]ದಲ್ಲವೆಂಬಿ |
ಖೋಡಿಯಿಲ್ಲದೆ ಕೊಂಡು ಸುಖಿಸುವ ಸರ್ವಭಕ್ಷಂಗೆ ||
ಮಾಡಿ ಮನೆಗಳಲಿದ್ದ ಬೋನವ |
ತೋ[4]ಡಿ ತನ್ನಿಯೆನಲ್ಕೆ ಪುನರಪಿ |
ನೀಡತೊಡಗಿದರೆಂಟು ದೆಸೆಯಲಿ ಬಸವ ನೇಮಿಸಲು || ೧೬ ||

ಹೊನ್ನ ಹೆಡಗೆಗಳಡಿಗಡಿಗೆ ರಾ |
ಜಾನ್ನದೋಗರ ತುಂಬಿ ಭಕ್ತರ |
ಚೆನ್ನ ಹಸ್ತಂಗಳಲಿ ಬರುತಿರ್ದುವು ಸಮಗ್ರದಲಿ ||
ಎಣ್ಣೆಯೂರಿಗೆಯಿಡ್ಡ[5]ಲಿಗೆ ಕಡು |
ಸಣ್ಣ ಸೇವಗೆ ಸರವಳಿಗೆ[6] ಮಿಗೆ |
ಕಣ್ಣಗಾರಿಗೆಯೊಟ್ಟುತಿರ್ದುವು ದೇವನಿದಿರಿನಲಿ || ೧೭ ||

---

೧ ಕಿ ( ಉ. ) ೨ ದೀಯ ( ಇ. ) ೩ ದರಿ ( ಉ. ) ೪ ಸೋ ( ಒ. ) ೫ ಯೆಡೆಯೆಡೆ ( ಉ. ) ೬ ಸರಳಿಗೆಯು ( ಉ. )

ಕ್ಷೀರಗಾರಿಗೆಯೊಟ್ಟಿಲನು ಬೆ[1] |
ಚ್ಚಾರಿಗೆಯು ಬಣಬೆಗಳನೊಡೆಗಳ |
ತೋರ ರಾಶಿಯು ಶಾಳಿ ಸೊಪ್ಪುಳಿ ಫೇಣಿ ಪರಡಿ[2]ಗಳ ||
ನೀರವತ್ತಿಗೆ ತಱಗು ಕಡಬುಗ |
ಳೀರಿಗಳನೊಟ್ಟಿದರೆ ಕಾಣುತ |
ಘೋರನೊಂದೇ ತುತ್ತಿನಲಿ ಕಬಳಿಸಿದ ಗುರುರಾಯ || ೧೮ |

ಪ್ರೀತಿಯಿಂದಾ[3]ರೋಗಿಸುವ ಗುರು |
ವೀತನಹುದೆನ್ನೊಡೆಯನೀ ಪರಿ |
ಯಾತನಾದೊಡೆ ನೀಡುವೆನು ತಾ ಮೆಚ್ಚುವಂತೆನುತ[4] ||
ಓತು ಮತ್ತೆ ಸಮಸ್ತ ಭಕ್ಷ್ಯ ಸ |
ಮೇತವನು ಪಾಯಸಗಳನು ನವ |
ನೀತ ಸದ್ಯೋಘೃತವನರ್ಪಿಸುತಿರ್ದ ಬಸವಣ್ಣ || ೧೯ |

ಮುಸುಡ ಮುಂದಕೆ ತಂದು ಮಿಗೆ ತೋ |
ಱಸದ ಮುನ್ನವೆ ಸಕಲ ಪಾಕ |
ಪ್ರಸರವೆಲ್ಲವನೊಂದು ನಿಮಿಷಾರ್ಧದಲಿ ಕಬಳಿಸಿದ ||
ದೆಸೆದೆಸೆಯಲರ್ಪಿಸುತಲಿರೆ ಭ |
ಕ್ಷಿಸಿದನವನಲ್ಲಲ್ಲಿ ಗುರುವಿನ |
ಹಸು ಮಹೋನ್ನ[5]ತವಾಗುತಿರ್ದುದು ಲೋಕ ಬೆಱಗಾಗೆ || ೨೦ |

ದಂಡನಾಥಂಗೆನಿತೆನಿತುವು[6] |
ದ್ದಂಡತೆಯ ದಾಸೋಹ ಧೈರ್ಯದ |
ದಂಡೆ ಹೆಚ್ಚಿದುದದಕೆ ಶತ ಸಾವಿರಕೆ ವೆಗ್ಗಳಿಸಿ ||
ಮಂಡಳಿಸಿ[7] ಮಾಱಾಂತು ಮಿಗೆ ಮುಂ |
ಕೊಂಡು ಗುರು ಹಸಿದುಣುತಲಿರ್ದನು |
ಕಂಡುದಿಲ್ಲಾ ಮಹಿಮರಿಬ್ಬರ ಮಾಟಗಳ ಕಡೆ[8]ಯ || ೨೧

---

೧ ಬಿ ( ಉ, ಕ. ) ೨ ಪಾನ ( ಉ, ಕ. ) ೩ ಮಿಗೆಯಾ ( ಉ. ) ೪ ಮೆಚ್ಚುವಂದದಲಿ( ಕ. ೫ ಹಸಿವುವುನ್ನತ ( ಉ. ) ೬ ಗೀತರದೊಳು ( ಎ. ) ೭ ಮಂಡಿಸಿಯೆ ( ಕ. ) ೮ ಳಿಗೆಡೆ ( ಅ. ) ಪರಿ ( ಹ. )

ಹೊನ್ನ ಕೊಪ್ಪರಿಗೆಗಳ ಪಾನವ |
ಹೊನ್ನ ಕೊಪ್ಪರಿಗೆಗಳ ತುಪ್ಪವ |
ಹೊನ್ನ ಕೊಪ್ಪರಿಗೆಗಳ ಪಾಯಸ ಫಳದ ಶಿಖರಿಣಿಯ
ಹೊನ್ನ ಕೊಪ್ಪರಿಗೆಗಳ ಬೋನವ |
ತನ್ನ ಮುಂದಕೆ ತಂದು ನಿಲಿಸದ |
ಮುನ್ನಲಾರೋಗಿಸಿದನಾ ಪ್ರಭುಲಿಂಗ ನಸುನಗುತ ॥ ೨೨ ॥

ಹೆಡಗೆಗಳಲೀ ಭಕ್ಷ್ಯ ಮಾಡಿದ[1] |
ಮಡಕೆಗಳಲೀ ಶಾಖ ತುಂಬಿದ[2] |
ಕುಳಿಡಿಕೆಗಳಲೀ ಪಕ್ವ ಫಲ ಸಂಕುಲವ ಸಂದಣಿಸಿ ॥
ಅಡಕುತಿರ್ದರು ಭಕ್ತರೆಲ್ಲರು |
ತುಡುಕಿ ಕಬಳಿಸುತಿರ್ದನಲ್ಲಮ |
ನೆಡೆಬಿಡಂಗಳ ಕಾಣೆನಾತನ ದೀಪನೋತ್ಸವಕೆ ॥ ೨೩ ॥

ಕಟ್ಟು ಮಂಡಗೆ ಹಾಲು ಸಕ್ಕರೆ |
ಗಟ್ಟಿ ಮೊಸರುಂಡೆಗಳ ರುಚಿಗಳ |
ಮೊಟ್ಟೆಯನೆ ಮುಂದಿಡುತಲುಪ್ಪಿನ ಕಾಯ ಕಚರಿಗಳ ॥
ಬಟ್ಟ ಸಂಡಗೆ ಬಾಳುಕಂಗಳ |
ನೊಟ್ಟುತಿರ್ದರು ಬೇಸಱದೆ ಬೆಂ |
ಬಿಟ್ಟುದಿಲ್ಲಾ ಪ್ರಭುವಿನಾರೋಗಣೆಯ ಸಡಗರಣೆ[5] ॥ ೨೪ ॥

ಮಾಡುತಿರಹೇಳಡಿಗೆಗಳ ನೆಱ[3] |
ನೀಡುತಿರಹೇಳಾದ ಬೋನವ |
ಕೂಡುತಿರಹೇಳಖಿಳವೆನಿಸಿದ ಸಕಲ ಸಾಧನವ ॥
ತೋ[6]ಡಿ ತರಹೇಳಿದ್ದುದೆಲ್ಲವ |
ನೋಡಬೇಹುದು ದೇವನೂಟದ |
ಗಾಡಿಕೆಯನೆಂದೆನುತಲಬ್ಬರಿಸಿದನು ಬಸವಣ್ಣ ॥ ೨೫ ॥

---

೧ ತುಂಬಿದ ( ಇ. ) ; ತುಂಬಿತು ( ಉ. ) ೨ ತು ( ಉ. ) ೩ ತು ( ಕ. ) ೪ ಗಡಿಗೆ ( ಇ. ) ೫ ಕೆ ( ಉ. ) ೬ ಓ ( ಜ. )

ಆತ ಹೇಳದ ಮುನ್ನಲಾತನ |
ಮಾತು ಹಿಂಚಿತು ಮಿಂಚಿತೋ ಎನ |
ಲಾತು ಬಂದುವು ಮನೆಯುಲಾದ ಸಮಸ್ತ ಸಾಧನವು ||
ಪ್ರೀತಿ ಮಿಗಲಾ ಬಂದ ವಸ್ತುವ |
ನೋತು ನೀಡಿದ ಬಯಲ ಬಸುಱಲಿ |
ಕೌತುಕವನೇ ನಟಿಸುತಿರ್ದನು ಗುರು ವಿನೋದದಲಿ || ೨೬ ||

ಉಂಬನೊಬ್ಬನೆ ಪಕ್ವ ಫಲಗಳ |
ನಿಂಬುಗೊಟ್ಟೆಯ್ದಿ ಸುವರಗಣಿತ |
ಕೊಂಬನೊಬ್ಬನೆ ಕೋಟಿಮುಖದಲಿ ನೀಡಿದೆಲ್ಲವನು |
ತುಂಬಿ ತುತ್ತಿ[೧]ದ ಹೊಟ್ಟೆ ನೆಱೆ[೨] ಘಾ |
ರೆಂಬುತಿರ್ದುದು ಮತ್ತೆಯಲ್ಲಮು |
ನುಂಬುದಕೆ ಕಡೆಗಾಣೆ[೩]ವೆನುತಿರ್ದುದು ಗಣಸ್ತೋಮ[೪] || ೨೭ ||

ಆವ ಬೇಗ[೫]ದಲಾಗಹುದೊ ಮ |
ತ್ತಾವ ಬೇಗ[೬]ದಲೀತನೀವನೊ |
ಆ[೭]ವ ಬೇಗದಲಾತನುಂಬನೊ ಶಿವ ಮಹಾದೇವ ||
ಭಾವಿಸುವೊಡಾ ಚಳಬಳಿಕೆಯನು |
ತಾವೆ ಬಲ್ಲರು ದೇವಭಕ್ತರು |
ನಾವೆ ತಿಳಿವೊಡೆ ನಮ್ಮ ಹವಣಲ್ಲೆಂದುದಖಿಳ ಜನ || ೨೮ ||

ಏನು ಹೇಳುವೆನಾವ ಮುಖದಲಿ |
ಬೋನವೆಯ್ದಿದ ದೀಪನಪ್ರಭೆ |
ಹೀನವಾಗದು ಸಚ್ಚಿದಾನಂದಸ್ವರೂಪಂ[೮]ಗೆ ||
ಊನವಾಗದು ಮಾಟದೊಂದ[೯]ಭಿ |
ಮಾನ ಬಸವಗೆಯವರಿಗಿನ್ನು ಸ |
ಮಾನವಾರು ಸದಾಶಿವಾ ಎಂದುದು ಗಣಸ್ತೋಮ || ೨೯ ||

---

೧ ತುಂಬಿ ( ಇ. ) ೨-೨ ಪಾತನ ದೀಪಸೋತ್ಕಹನ ( ಗ. ) ೩-೩ ದೋಳಹುದೊ ಭೋಜ್ಯವ । ದಾವ ಬೇಗದಿ ತೆಗೆವನೋ ಇದ । ನಾ ( ಇ. ) ೪-೩ ದ ತೆಗೆವನೋ ಮಿಗಿ । ಲಾ ( ಉ. ) ೫ ದ್ವೈಕರಸಮಯ ( ಉ, ಗ ) ೬ ಮಾಡಿಕೊಂಡ ( ಗ. )

ಅಲ್ಲಮಪ್ರಭುವುಂಬ ತವಕದ |
ಭುಲ್ಲವಣೆಯನೆ ಕಂಡು ಹರಿಹರಿ |
ದೆಲ್ಲ ಭಕ್ತರು ತಮ್ಮ ಮನೆಮನೆಗಳಲಿ ಮಾಡಿರ್ದ ||
ಸಲ್ಲಲಿತ ಪಕ್ವಾನ್ನ ಪಾನವ[1] |
ನೊ[2]ಳ್ಳಿತಾಗಿಯೆ ತಂದು ಸಲಿಸ[3]ಲು |
ಪಲ್ಲವಿಸಿದುದು ಮತ್ತೆ ಹಸು ಗುರುವಿಂಗೆ ನೂರ್ಮಡಿಸಿ || ೩೦ ||

ಪುರದ ಬೀದಿಯೊಳಲ್ಲಿಗಲ್ಲಿಗೆ |
ಹರಿಹರಿದು ಮನೆಮನೆಗಳೊಳು ಹೊ |
ಕ್ಕುರವಣಿಸಿ ತಂದಡಕುತಿರ್ದರು ಸಕಲ ಸಾಧನವ ||
ನೆರೆದುದಾರೋಗಣೆಗೆ ನಿಮಿಷಕೆ |
ಸರಿವುತಲ್ಲಮನಾನನಕೆಯು |
ಚ್ಚರಿಯದಾಯಿತು ದೇವಭಕ್ತರ ಛಲದ ಚಳಬಳಿಕೆ || ೩೧ ||

ಪರಿಪರಿಯ ಸೌಕರಿಯ[4]ದೋಗರ |
ಪರಿಪರಿಯ ಪಾಯಸ[5] ಘೃತಂಗಳು |
ಪರಿಪರಿಯ ನವನೀತ ಸಕ್ಕರೆ ತೋವೆ ಪಳದೆಗಳು ||
ಪರಿಪರಿಯ ಭಕ್ಷ್ಯಗಳು ನಾನಾ |
ಪರಿಪರಿಯ ವನರುಹ[6]ಫಲಂಗಳು |
ಪರಿಪರಿಯ ಶಾಖದ ಸಮೂಹಗಳಿತ್ತರಲ್ಲಮಗೆ || ೩೨ ||

ಹಲವು ರೀತಿಯ ಕಣಿಕದಡಿಗೆಯು |
ಹಲವು ರೀತಿಯ ಹಿಟ್ಟಿನಡಿಗೆಯು |
ಹಲವು ರೀತಿಯ ಪಾನವಂಬಲಿಯುಪ್ಪುಗಾಯಿಗಳ ||
ಹಲವು ರೀತಿಯ ತಕ್ರ ದಧಿಗಳ |
ಹಲವು ರೀತಿಗಳಗ್ಗವಣಿಗಳ[7] |
ಸಲಿಸುತಿರ್ದರು ಭಕ್ತರಾ ಪ್ರಭುಲಿಂಗನಾನನಕೆ || ೩೩ ||

---

೧ ಫಲಗಳ ( ಉ. ) ೨ ಪಾಯಸ । ಪೊ ( ಜ. ) ೩ ಸೀಡ ( ಅ, ಕ. ) ೪ ಸೌರಂಭ ( ಉ. )
೫ ಸದ್ಯೋ ( ಉ. ) ೬ ಷಡುರಸ ( ಉ. ) ೭ ಯ ನಿರ್ಮಲೋದಕ ( ಇ. )

ಅಂಬರವೆ ಬಾಂಸ್ದ್ದ ಅಂದು ಜೀರ್ಣಿಸಿ |
ಕೊಂಬೊಡದಕಿನ್ನಾರು ದಿಟ ಸಾ |
ಕೆಂಬ ತೆಱದಲಿ ತೇಂಗುವಂತುಣಲಿಕ್ಕ ಬಲ್ಲವರು ||
ಇಂಬುಗೊಟ್ಟರೆ ಸಕಲ ಲೋಕವ |
ಸುಂಬ ಮಹಿಮಗೆ ನೀಡುತ್ತೈದನೆ |
ನಂಬ ಬಲ್ಲರೆ ಬಸವನೇ ಶಿವನೆಂದುದಖಿಳಜನ || ೩೪ ||

ಜಂಗಮಕೆ ಭಕ್ತರಿಗೆ ಪ್ರತಿದಿವ |
ಸಂಗಳಂತಿತ್ತಾ ಮೂರು ಲಕ್ಕ ಜ |
ನಂಗಳಿಗೆ ಸವೆದಿರ್ದ ಬಸವನ ಮನೆಯ ದಿನಾನ್ನ ||
ಹಿಂಗದುಳಿದ ಸಮಸ್ತ ಭಕ್ತ ಗೃ |
ಹಂಗಳಲಿ ತಂದಡಕಿದಗಣಿತ |
ಮುಂಗುತಿರ್ದನದೆಲ್ಲವನು ತಣಿವಿಲ್ಲದಲ್ಲಮಗೆ || ೩೫ ||

ಗಣಿಸುವೊಡೆ ಬ್ರಹ್ಮಾಂಡಕೋಟಿಗ |
ಳಣಲಗೆಯ್ದಿದ ಹರಿ ವಿರಿಂಚಿಗ |
ಳಣಿಕೆಗಡಿಮುಡಿದೋಱದಾ ಮಹಿಮಾವಲಂಬಂಗೆ ||
ಉಣಿಸುಗಳ ತಂದೊಟ್ಟೆ ಮುಟ್ಟಿಸಿ |
ತಣಿಸುವೆನು ನೋಡೆನುತ ಪುನರಪಿ |
ಹೊಣಕೆವಿಡಿದನು ತಾನೆ ತನ್ನಲಿ ಮತ್ತೆ ಬಸವಣ್ಣ || ೩೬ ||

ಕಣಜಗಳನೊಡೆದೊಡೆದು ತರಹೇ |
ಳಣಿಸದಿರ್ದ ಸಮಸ್ತ ಭಂಡವ |
ನುಣಿಸುಗಾಱನ ಪರಿಯ ನೋಡುವೆನೆನುತ ತವುತನುಗೆ ||
ಕಣಕ ಸಕ್ಕರೆ ತುಪ್ಪ ಗೋದುವೆ |
ಚಣಗಿ ಹೆಸಱುದ್ದುಗಳನಡಕಿದ |
ರಣಿವಱಿದು ಪುರದೊಳಗೆ ಬಸವಣ್ಣನ ನಿರೂಪದಲಿ || ೩೭ ||

೧ ವಸ್ತು ( ಉ. ) ೨ ಳೊಳು ( ಉ. ) ೩-೩ ಳಿಂಗುಣ್ಣಿಸುವ ( ಇ. ) ೪-೪ ನ್ನವ ತಂದರ ( ಅ. ) ೫ ಖೀವ ( ಇ. ) ೬ ನು ( ಚ. ) ೭ ಯ | ಗಣನೆಗೆಯ್ದು ( ಉ. ) ೮ ಲಬ್ಬರಿಸಿ ( ಗ. )

ಶಾಳಿ ಸಾವಿರ ಪರಿಯ ಭರಣಿಯ |
ಜೋಳ ಬರಗಲಸಂದೆ ಹಾರಕ |
ಕೇಳು ಧಾನ್ಯ ಸಮೇತ ಕಂಡುಗ ಕೋಟಿ ಸಂಖ್ಯೆಯಲಿ ||
ಮೇಲೆ ಮೇಲಿಟ್ಟಣಿಸಿ ಭಕ್ತರು |
ಲೀಲೆಯಲಿ ಹೊತ್ತಡಕುತಿರ್ದರು |
ಹೇಳುವರೆ ಹೊಸತಾಯಿತಲ್ಲಮನೂಟದಾಟೋಪ || ೩೮ ||

ನೀಡುತಿರ್ದರು ಗಂಜಿಯಂಬಲಿ |
ತೌಡು ನುಚ್ಚುಗವಲಕ್ಕಿಗಚ್ಚನು |
ಕೂಡೆ ಸಾರದ ಮೇಲೆ ಸಾರವ ಕಟ್ಟಿ ತನತನಗೆ ||
ಹಾಡದೆಣ್ಣೆಯ ಹೊಟ್ಟು ನುಚ್ಚಿನ |
ಗೂಡೆಗಳನವ ನುಂಗಿ ಕಡು ಪಟು |
ಮಾಡುತಿರ್ದನು ದೇವ ಮತ್ತೆ ಮಹಾ ಕ್ಷುಧಾಗ್ನಿಯನು || ೩೯ ||

ನೆನೆದು ಹಿಡಿಯದ ಮುನ್ನಲರ್ಪಿತ |
ನೆನೆದು ಸೋಂಕದ ಮುನ್ನಲರ್ಪಿತ |
ನೆನೆದು ನೋಡದ ಮುನ್ನಲರ್ಪಿತ ಗುರುಪದಾಂಬುಜವ ||
ನೆನೆದೊಡಲ್ಲಿಯದಲ್ಲಿಯರ್ಪಿತ |
ವೆನಿಸಿ ನಿರ್ವಯಲಾಗುತಿರ್ದುದು |
ಘನತರದ ಸಾಧನಸಮಗ್ರತೆ ನಿಮಿಷಮಾತ್ರದಲಿ || ೪೦ ||

ಒಡಬನಣಲಿಗೆಯಾಲಿಕಲ್ಲಿನ |
ಕಡಿಗಳಾನಲು ಬಲ್ಲುವೇ ಜಗ |
ದೊಡೆಯನುಂಡಿಹೆನೆಂದೊಡಕಟೆಂತೊಂದು[೧] ಪಟ್ಟಣದ ||
ಒಡವೆ ನೆಱಿವುದೆ ಬಂದ ಭಂಡವ |
ನೊಡಲೊಳಡಗಿಸಿಕೊಂಡನಾತನ |
ಬೆಡಗ[೨]ಬಲ್ಲವರಿಲ್ಲವೇನೆಂದೆಂಬಿನಚ್ಚರಿಯು[೨] || ೪೧ ||

೧ ಟಾ ಒಂದು ( ಉ. ) ; ದಕೆಯಿದೊಂದು ( ಗ. ) ೨-೨ ನಂತಿಂತೆಂದು ಬಲ್ಲವರಿಲ್ಲವಲ್ಲ ಮನ ( ಉ. )

ವಿಶ್ವತೋಮುಖ ವಿಶ್ವತೋಕರ |
ವಿಶ್ವತೋದರ[1] ವಿಶ್ವತೋಪದ |
ವಿಶ್ವತೋಮಯನೆನಿಸಿ ಮೆಱೆವ ಮಹಾ ಮಹಾತ್ಮಂಗೆ ||
ಶಾಶ್ವತಂಗಳನೀವ ಘನ ಮಹಿ |
ಮಸ್ವರೂಪನ ಲೀಲೆಗಾವುದು |
ವಿಶ್ವದೊಳಗರಿದೆನುತಲಿರ್ದುದು ಭಕ್ತಸಂದೋಹ || ೪೨ ||

ಪಂಚ ಪರುಷವನುಳ್ಳ ಬಸವನು |
ಸಂಚಿಸಿದ ಸಾಧನಸಮಗ್ರತೆ |
ಮುಂಚೆ ಜೀರ್ಣಿಸಿ ಹೋದುದೂಟದ ಮೊದಲಚೂಣಿಯಲಿ ||
ಮುಂಚುತಿರ್ದುದು ದೀಪನಪ್ರಭೆ |
ಸಂಚಲಿಸದಲಿ[2] ತೊಳಗಿ ಬೆಳಗಿನ[3] |
ಗೊಂಚಲಂಪದಲಲ್ಲಮಪ್ರಭುರಾಯನಂಗದಲಿ || ೪೩ ||

ಆವ ಮುಖದಲಿ ಬಂದು ಬೇಡಿದೊ |
ದೇವನಾತನಿಗೆಂಬ[4] ಭಕ್ತಿಯು[5] |
ಸೇವೆಗೊಣೆಯವಾದುದೇ ಶಿವ ಶಿವ ಮಹಾದೇವ ||
ದೇವನೇ ಹಸಿದುಣುತಿಹನೆಯಿ |
ನ್ನಾವ ಪರಿಯ[6]ಲಿ ದಣಿಸುವೆನೊ ಮಹ |
ದೇವ ಎನುತಲಿ ಮನದೊಳಗೆ ಬಸವಣ್ಣ ಚಿಂತಿಸಿದ || ೪೪ ||

ಕಳನೊಳಗೆ ಹಗೆ ಕಟ್ಟಿ ಬಂದಿರೆ |
ಬಳಿಕ ಗರುಡಿಯು ಹೊಕ್ಕು ಸಾಧನೆ |
ಗಳನು ಮಾಡಿಹೆನೆಂಬನಂತಿರೆ ಗುರುವೆ ಹಸಿದಿರಲು ||
ಸಲಿಸಲೊಲ್ಲದೆ ಬೋನಗಳನು |
ಮ್ಮಳಿ[7]ಸುವರೆ ಬಸವಣ್ಣ ಚಿಂತೆಯು |
ತೊಲಗನೊಕೆಂದೆ[8]ನುತಲಿರ್ದುದು ಭಕ್ತಿಬಂಧುಗಳು || ೪೫ ||

---

೧ ಭುಜ ( ಉ. ) ೨ ಸದತಿ ( ಉ. ) ೩ ಗುತ ( ಉ. ) ೪ ತಾನೆಂದೆಂಬ ( ಇ. ) ೫ ಬಿರಿದಿನ ( ಗ. )
೬ ತೆರನ ( ಅ, ಒ. ) ೭ ನೀ | ಯಲ ( ಇ, ಉ. ) ೮ ತೊಲತೊಲಗು ತೊಲಗೆ ( ಗ. )

ಕಡುಗಲಿಗೆ ಕರುಳೊಗಲು ಕೈಯಲಿ |
ಹಿಡಿದು ಸಮರಕೆ ನಡೆ[1]ವನಲ್ಲದೆ |
ಕಡೆಗೆ ಸಾರಲಿಬಹುದೆ ಭಕ್ತನ ಧನ ಸಮರ್ಪಿಸಲು ||
ಒಡಲು ಮನಗಳನೊಡನೆ[2]ಯರ್ಪಿಸಿ |
ಕಡೆಯ ಕಾಣಿಪುದೆಂದು ನುಡಿದರು |
ಮಡಿವಳಯ್ಯನು ಚೆನ್ನಬಸವನು ಬಸವರಾಜಂಗೆ || ೪೬ ||

ತೆತ್ತಿಗರು ತಾ[3]ವಾದಕಾರಣ |
ತತ್ತ ವೇಳೆಯಲಾದಿರ್ದೈ ದಿಟ |
ಹೆತ್ತ ತಂದೆಗಳಹುದು ಮಡಿವಳಚೆನ್ನಬಸವಗಳು ||
ಹೊತ್ತು ಹೋಗದ ಮುನ್ನ ತನುವಿನ |
ತುತ್ತ ನೀಡುವೆ ಗುರುವಿಗೆನುತಲಿ |
ಚಿತ್ತದಲಿ ಹಾರೈಸುತಿರ್ದನು ಬಸವದಂಡೇಶ || || ೪೭ ||

ಭಸಿತದಂಗದ ಭಾವಶುದ್ಧದ |
ಮಿಸುಗುವಂತಮುಖದ ಬುದ್ಧಿಯ |
ದಶವಿಧದ ಪ್ರಾಣೇಂದ್ರಿಯಂಗಳ ನಿರ್ವಿಕಾರತೆಯ ||
ಬಸವ ಬಸವಗಳಾಳ್ವ[4]ನಾರೋ |
ಗಿಸುವೊಡೋಗರವಾಗಿ ಬಂದನು |
ನಸುನಗುತಲಾ ದೇವನೀಕ್ಷಿಸಿದನು ಕಟಾಕ್ಷದಲಿ || ೪೮ ||

ಹಸಿದು ಬಂದವನಲ್ಲವರ್ಥದ |
ದೆಸೆಗೆ ಬಂದವನಲ್ಲ ಕಾಮದ |
ಮಸೆಗೆ ಮನ[5]ದಲಿ ನೊಂದು ಬಂದವನಲ್ಲ ನಾ ನಿನ್ನ ||
ಹಸರಿಸಿದ ದಾಸೋಹತನವನು |
ಸಸಿನೆ[6] ನೋಡಲು ಬಂದೆನಲ್ಲದೆ |
ವ್ಯಸ[7]ನದಾಸೆಗಳೆನ್ನಲುಂಟೇ ಬಸವ ಕೇಳೆಂದ || ೪೯ ||

---

೧ ನಿಲು ( ಇ. ) ೨ ಸೊಮ್ಮೆ ( ಗ. ) ೩ ನೀ ( ಉ. ಕ. ) ೪ ಕೊಡೆಯ ( ಅ, ಕ, ಗ. ) ೫ ಮಸಕಮದ ( ಇ. ) ೬ ಪೊಸೆದು ( ಇ. ) ೭ ಯುತ ( ಇ. )

ಶುದ್ಧ ಸಾಕ್ಷಾದಮೃತದೇಹದ |
ಬಿದ್ದಿನಂಗುಣಲಿಕ್ಕುದುಂಟೇ |
ನಿದ್ದ ಸಾಧನೆ ಕೆಟ್ಟುದಕಟಕಟೆಂದು[೧] ನೀನೆನಲು ||
ತಿದ್ದಬೇಕೆನುತಾನೆ ಹವಣಿಸಿ |
ಮೆದ್ದೆನಲ್ಲದೆ ದಿಟ ವಿಚಾರಿಸೆ |
ಹೊದ್ದುವುವೆ ಹಸು ತೃಷೆಗಳೆನ್ನಲಿ ಬಸವ ಕೇಳೆಂದ || ೫೦ ||

ಕನ್ನಡಿಯ ಪ್ರತಿಬಿಂಬಕಿನ್ನೊಂ |
ದನ್ಯ ಚೆಲುವಿಕೆಯಾಗಬಲ್ಲುದೆ |
ನಿನ್ನ ಮನದಲಿ ಮಾಟಕೂಟ[೨]ದ ಬುದ್ಧಿ ಮುಮುಕರಿಸೆ ||
ನನ್ನ ಹಸು ಹರಿದುಂಡಿತಲ್ಲದೆ |
ನಿನ್ನ ಮನದಲಿ ಮಾಟವಿಲ್ಲದೊ |
ಡೆನ್ನ ತನುವಿಗೆಯೂಟವಿಲ್ಲೈ[೩] ಬಸವ ಕೇಳೆಂದ || ೫೧ ||

ಅಷ್ಟಮದಗಳ ಸೊಗಡ ಸೊಕ್ಕಿನ[೪] |
ದಷ್ಟವಿಲ್ಲದ ಮೂಱವಸ್ಥೆಯ |
ದೃಷ್ಟಿ ತಾಗದ ವ್ಯಸನವೇಳಱ ಕಿಡಿಯ[೫] ಖಂಡಿಸಿದ ||
ದೃಷ್ಟವೆನಿಸಿದ ನಿಮ್ಮ ಕಾಯ |
ಶ್ರೇಷ್ಠ ನೈವೇದ್ಯವನು ಕಾಣುತ |
ತುಷ್ಟಿ ತನುವಿಗೆ ತುಂಬಿತೀಗಳು ಬಸವ ಕೇಳೆಂದ || ೫೨ ||

ಉಣಿಸುವುಣಿಸೆಂದೆಂಬರೆಲ್ಲರು[೬] |
ವುಣಿಸನುಂಬುದ[೭]ನಿಂದು ಕಂಡೆವು |
ದಣಿಸಿದಿರಿ ನೀವಾದೊಡೆಮ್ಮನು ಭಕ್ತ ನಿಮ್ಮಾಣೆ ||
ಅಣಕವಲ್ಲಿದು ನರಸುರೋರಗ |
ರೆಣಿಕೆಯೊಳು ನಿನಗಾರು ಸರಿ ಕಾ |
ರಣಕಳಾತ್ಮಕ ನೀನೆಲೈ ಬಸವಣ್ಣ ಕೇಳೆಂದ || ೫೩ ||

---

೧ ಕೆಟ್ಟುದೆಂದುಣಬೇಕು ( ಉ. ) ೨ ಮಾಯಮಾಟ ( ಗ. ) ೩ ವುಂಟೇ ( ಗ. ) ೪ ಸೊಂಕಿನ ( ಅ, ಇ, ಜ. ) ೫ ಕ್ರೀಡೆ ( ಅ, ಖ. ) ; ಕೀಲ ( ಗ. ) ; ನು ಕೆಡಿಸಿ ( ಚ.) ೬ ರಲ್ಲದೆ ( ಉ. ) ೭ ವುಣಿಸಿವುಣುವುದ ( ಕ, ಜ. ) ; ಉಣಿಸನೆಂಬುದ ( ಇ. )

ಬಳಿಕ ಹಸ್ತೋದಕವನಿತ್ತ ನಿ |
ರ್ಮಳ ಸುಗಂಧ ವಿಲೇಪನವ ಪರಿ |
ಮಳದ ಕರ್ಪುರವೀಳೆಯಂಗಳನಿತ್ತು ಭಕ್ತಿಯಲಿ ||
ನಲಿದು ಗುರುವಿನ ಪಾದಪಂಕಜ |
ಗಳ ಸಮೀಪದಲೊಪ್ಪುತಿರ್ದರು |
ಬಳಸಿದಳಿಕುಲದಂತೆ ಬಸವಣ್ಣಾದಿ ಭಕ್ತಗಣ೧ || ೫೪ ||

ಬಸವ ಬಾರೈ ನಿನ್ನ ಜಂಗಮ |
ಹಸಿದರಲ್ಲಾ೨ ಕರೆಯ ಹೋಗೆನೆ |
ಬೆಸನ ಕೈಕೊಂಡಲ್ಲಮಪ್ರಭುವಿಂದೆ ಬೀಳ್ಕೊಂಡು ||
ಒಸೆದು ಬಂದು ಮಹಂತರನು ಪ್ರಾ |
ರ್ಥಿ೩ಸುತಲಾರೋಗಣೆಗೆ ಕರೆಯಲು |
ಬಸವರಾಜಗೆ ಬಳಿಕ ನುಡಿದುದು ಜಂಗಮಸ್ತೋಮ || ೫೫ ||

ಎಂದಿನಾರೋಗಣೆಯ ಮಾಡಿದ |
ಚೆಂದದಿಂ ಮಿಗಿಲಾಗಿ ಪರಮಾ |
ನಂದವಾಗಿದೆ ತೇಗಿದರೆ ಷಡುರುಚಿ೪ರಸಾಯನದ ||
ಸಂದವಾಸನೆ ಸೂಸುತಿದೆ ಪ |
ಜತ್ರಿಂದುದಿ೫ದೆಕೋ೬ ಎನುತ ಮಹಿಮರು |
ಮುಂದೆ ಬಸವನು ಕಾಣಲಿಕೆ ದಣಿದಿರ್ದರೊಲವಿನಲಿ || ೫೬ ||

ನಿನ್ನ ಗುರುವಿನ ಮಹಿಮೆಯೋ ಮೇಣ್ |
ನಿನ್ನ ಮಹಿಮೆಯೊ ಜಂಗಮಕೆ ದಿಟ೭ |
ನಿನ್ನ ಗುರುವಾರೋಗಿಸಲು ತ೮ಣಿವಾಯಿತೆಮಗೆಲ್ಲ ||
ನಿನ್ನ ಗುರು ಸಚರಾಚರದ ಚೈ |
ತನ್ಯ ಮೂರ್ತಿಯೊ ಎನುತಲಾ ಬಸ |
ವಣ್ಣನಿದಿರಲಿ ನುಡಿವುತಿರ್ದುದು ಜಂಗಮಸ್ತೋಮ || ೫೭ ||

---

೧ ಜನ ( ಗ. ) ೨ ದುಪಕಟಾ ( ಅ. ) ; ದುದೆಲ್ಲರು ( ಗ. ) ೩ ವಂ । ಬ ( ಜ. ) ೪ ರಸ ( ಗ. ) ೫ ದೊಡಿ ( ಇ, ಕ, ಜ. ) ೬ ಯೆಂ । ದಾಡಿದರು ಖೋ ( ಅ. ) ೭ ದಿಟ ವಿಚಾರಿಸು ( ಗ. ) ೮ ದ ( ಅ, ಇ, ಉ, ಒ, ಕ, ಗ, ಜ. )

ನಮ್ಮ ನಾಚಿಸಲೆಂದು ಬಂದೈ |
ನಮ್ಮೊಳಿನಿತಿಲ್ಲದಱ ನಾಚಿಕೆ |
ನಮ್ಮ ಸಮಯದೊಳಾರಿಗಾದೊಡೆ ಹೆಮ್ಮೆ ಹುಟ್ಟಿದೊಡೆ[೧] ||
ನಮ್ಮ ಹೆಮ್ಮೆ ವಿಚಾರಿಸುವೊಡದು |
ನಮ್ಮ ಜಯವ[೨]ದು ಸಾಕು ಹೋಗೆಂ |
ದೆಮ್ಮ ಬಸವನ ಬೀಳುಕೊಟ್ಟುದು ಜಂಗಮಸ್ತೋಮ || ೫೮ ||

ಗುರುವಿಗೊರೆದ ಸುಗಂಧಲೇಪನ |
ಗುರುವಿಗಿಟ್ಟಕ್ಷತೆಗಳೆಲ್ಲವು |
ಗುರುವಿಗಿಕ್ಕಿದ ಪುಷ್ಪಮಾಲೆಗಳೈದೆ ಜಂಗಮಕೆ ||
ಭರಿತವಾಗಿರೆ ತಿಳಿದನಿಂಗಿತ |
ದಿರವಿನಲಿ ದಣಿವಾದ ಭೇದವ |
ಕರಣದಲಿ ನೆಱೆ[೩] ಕಂಡು ಸರಿದನು ಬಳಿಕ ಬಸವಣ್ಣ || ೫೯ ||

ಬಂದನಾಗಳೆ ಬಸವ ತನ್ನಯ |
ಮಂದಿರಕೆ ಗುರುಪಾದದಲಿ ಶರ |
ಣೆಂದು ಬಳಿಕಾ ಹದನನೆಲ್ಲವನೊಲಿದು ಬಿನ್ನೈಸೆ ||
ಮುಂದೆ ಮೋಹಿಸಿ ನೆರೆದ ಭಕ್ತರ |
ಸಂದಣಿಗಳುಘೆ ಎನಲು ಪರಮಾ |
ನಂದಶರಧಿಯ ಲಹರಿಯಂತಿರೆ ಮೆಱೆದುದಾ ಸ್ಥಾನ || ೬೦ ||

ಬಸುಱ ಹೆಂಡತಿಯೊಳಿಟ ಹೊಟ್ಟೆಯ |
ಶಿಶುವ ದಣಿಸುವವೊಲು ಜಗಂಗಳ |
ಬಸುಱಲಡಗಿಸಿಕೊಂಡು ನೀ ದಣಿಯುಣಲು ಜಂಗಮಕೆ ||
ಹಸಿವದೆಲ್ಲಿಯದೆಲ್ಲರಿಗೆ ಸಂ |
ತಸವು ಸಂತುಷ್ಟತೆಯಲಿದ್ದರು |
ಹೊಸತಿದಾದುದು ಲೋಕದೊಳು ಗುರುರಾಯ ಕೇಳೆಂದ || ೬೧ ||

---

೧ ಹೆಚ್ಚಿದರೆ ( ಚ. ) ೨ ಜರಿವು ( ಇ. ) ೩ ಪೆಂಗಸಿನೂ ( ಇ, ಗ. )

ನಿನ್ನ ಭಾವನೆಯಿದ್ದ ಪರಿಯಲಿ |
ನಿನ್ನ ಜಂಗಮ ತೃಪ್ತರಾದರೆ |
ನನ್ನ ನೇತಕೆ ಅಟ್ಟು ಮಾಡುವೆ ಬಱಿದೆ ಬಯಲಿಂಗೆ ||
ನಿನ್ನ ಕತದಿಂದಾದೆನಲ್ಲದೆ |
ಮುನ್ನ ನಾನೆಂದೆಂಬ ವಾಸನೆ |
ಯೆನ್ನಲುಂಟೇ ದಿಟ ವಿಚಾರಿಸೆ ಬಸವ ಕೇಳೆಂದ || ೬೨ ||

ಲಿಂಗ ನೀನಾರೋಗಿಸಿದೊಡಾ |
ಜಂಗಮವು ಸಂತುಷ್ಟರಾದರು |
ಜಂಗಮದ ಸಂತುಷ್ಟಿ[1] ಸಚರಾಚರದೊಳೆಲ್ಲರಿಗೆ ||
ಹಿಂಗದಿತ್ತುದು ದಣಿವನೀ[2] ಚಿ |
ತ್ರಂಗಳಾಟದ ಸೂತ್ರವೆಲ್ಲವು |
ಲಿಂಗ ನಿನ್ನಯ ಮಹಿಮೆಯೆಂದನು ಬಳಿಕ ಬಸವಣ್ಣ || ೬೩ ||

ಎನಲು ನಿರಹಂಕಾರ ಭಾವದ |
ಮನದ ಬಸವಗೆ ಚೆನ್ನಬಸವಗೆ |
ವಿನುತಮತಿ ಮಡಿವಾಳ ಮೊದಲಾದಖಿಳ ಭಕ್ತರಿಗೆ ||
ಅನುಪಮಾನಂದೈಕ್ಯ ನಿತ್ಯಾಂ |
ಗನೆಯನೆಲ್ಲರಿಗೀವೆನೆನುತಲಿ |
ನೆನೆವುತಿರ್ದನು ಗುರು ಗುಹೇಶ್ವರಲಿಂಗ ಲೀಲೆಯಲಿ || ೬೪ ||

**ಅಂತು ಗತಿ ೨೩ಕ್ಕಂ ಪದ ೧೦೪೫ಕ್ಕಂ ಮಂಗಳಂ**

---

೧ ತತ್‌ಶೇಷ ( ಅ. )   ೨ ನಿದು ( ಅ, ಇ, ಕ. )

# ಮನೋಲಯದ ಗತಿ

**ವಚನ**

ಹಸಿವಿನ ಪ್ರೇಮಕ್ಕೆ ಬೋನವ ಹಿಡಿವರು। ತೃಷೆಯ ಪ್ರೇಮಕ್ಕೆ ಮಜ್ಜನಕ್ಕೆರೆವರು। ಅವರಿಗೆ ದೇವರಿಲ್ಲ ಭಕ್ತರಿಲ್ಲ ನಾನು ಇಲ್ಲ ನೀನು ಇಲ್ಲ ಪೂಜಿಸುವರಿಲ್ಲ ಪೂಜೆಗೊಂಬುವರಿಲ್ಲ ಕಾಣಾ ಸಂಗನ ಬಸವಣ್ಣಾ ॥ ೧ ॥

ಭಾವವಳಿಯದು ಬಯಕೆ ಸವೆಯದು । ಐಕ್ಯನಾದಹೆನೆಂದರೆ ಏನಹುದೋ । ಸಬುದಸಂಭ್ರಮವಳಿಯದೆ ತನ್ನ ಇದಿರಿನಲಿ ಪ್ರತಿಗಂಡಡಹುದೇ । ಗುಹೇಶ್ವರನೆಂಬ ಸಂಬಂಧವಳಿಯದೆ ಬೇಸತ್ತು ಬಯಸುವಂಗಾಯುತವಹುದೇ ॥ ೨ ॥

ಹೊರಸಿನೆಕ್ಕಿಗೆ ಸಂಖಿದ ಮಣಿಯ ಪವಣಿಸುವರಾರು । ನೀವಾರಾದಡೆಯೂ ಪವಣಿಸಿ ಭೋ । ಇದನಾನರಿಯೆನು । ಒಂದು ತಾಳಮರದ ಮೇಲೆ ಮೂರು ರತ್ನ ಏಹುದ ನಾ ಬಲ್ಲೆ । ಒಂದು ರತ್ನ ಉತ್ಪತ್ತಿ ಸ್ಥಿತಿ ಲಯಕ್ಕೊಳಗು । ಒಂದು ರತ್ನ ಹದಿನಾಲ್ಕು ಭುವನಕ್ಕೆ ಬೆಲೆಯಾಯಿತ್ತು । ಇನ್ನೊಂದು ರತ್ನಕ್ಕೆ ಬೆಲೆಯಿಲ್ಲವೆಂದು ಗುಹೇಶ್ವರಲಿಂಗೈಕ್ಯರು ನಿಶ್ಶಬ್ದಂ ಬ್ರಹ್ಮ ಉಚ್ಯತೆ ಎಂದುದಾಗಿ ॥ ೩ ॥

ಕಾಯದೊಳಗಣ ಜೀವನ ಪಾರಿ ಹೋಹ ಕಳ್ಳನ ಸಂಗ ಬೇಡ । ನಿಮ್ಮ ನಿಮ್ಮ ವಸ್ತುವ ಸುಯಿದಾನವ ಮಾಡಿಕೊಳ್ಳಿ । ಗುಹೇಶ್ವರನೆಂಬ ಕಳ್ಳನ ಕೊಂಡರೆ ಅಳುವರಾರು ಇಲ್ಲ ॥ ೪ ॥

**ಸೂಚನೆ**

ಉದ್ಧರಿಸಿ ಬಸವಣ್ಣ ಮೊದಲಾ ।
ಗಿರ್ದ ಭಕ್ತರಿಗೊಲಿದು ಕೊಟ್ಟನು ।
ಸಿದ್ಧಿಗಳನುಚಿತ[೧]ದಲಿ ನಮ್ಮಯ ಗುರು ಗುಹೇಶ್ವರನು ॥

ಸಕಲವನು ಸಂಭವಿಸಿ ಮನಸಿಗೆ ।
ಮುಕರಿಸುವ ಹಂಕಾರ ಭಾವದ ।
ಮುಕುರವನು ಮುರಿದಚಲ ಪದವಿಗೆ ನಿಲುವ ನಿರ್ಣಯವ ॥
ಸಕಲ ಭಕ್ತರು ಸಕಲ ಯುಕ್ತರು ।
ಸಕಲ ಮುಕ್ತರು ಮುಖ್ಯವಾಗಿಹ ।
ಸಕಲರೆಲ್ಲರು ತಿಳಿವುದೀ ಪ್ರಭುಲಿಂಗ ಲೀಲೆಯಲಿ ॥ ೧ ॥

---

೧ ಕರುಣ ( ಉ. )

ಪರಮ ಪರಿಣಾಮದಲಿ ತನ್ನಯ |
ಚರಣಸನ್ನಿಧಿಸಂಗವಾಗಿಹ |
ಶರಣರೆಲ್ಲರ ಕಂಡು ಕರುಣಾರಸಾರ್ದ್ರಚಿತ್ತದಲಿ ||
ವರದನಾಗಲಿ ಬೇಕೆನುತ ಮಿಗೆ |
ದರಹಸಿತವದನಪ್ರಭಾಶಶಿ |
ಕಿರಣಗಳ ಸುರಿವುತ ಮಹಾಪ್ರಭುಲಿಂಗನಿಂತೆಂದ || ೨ ||

ಪಾವನತೆಯಾಯ್ತಿ[೧]ಷ್ಟಲಿಂಗದ |
ಸೇವೆಯಲಿ ಬಹಿರಂಗವಂತ |
ರ್ಭಾವವಾದೊಡೆ ಶಿವಸಮಾಧಿಯಲಾಯ್ತು ನಿರ್ಮಲತೆ ||
ನೀವು ನೋಡಲು ನೀವು ನೆನೆಯಲ |
ದಾವುದರಿದಿನ್ನೆನುತ ಭಕ್ತರ |
ನೋವಿ ಹೊಗಳಿದನಲ್ಲಮಪ್ರಭುಲಿಂಗ ಲೀಲೆಯಲಿ || ೩ ||

ಎನಿತು ಸಂಪದವಾದೊಡೇನದ |
ಱನಿತು ದಂದುಗ ಬೆಂಬಿಡದು ದಿಟ |
ವೆನಿತು ಮಾಡಿದೊಡೇನು ಮಾಡಿದ ಫಲವ[೨]ನುಣಬೇಕು ||
ಇನಿತು ಸಾಕಿನ್ನೆಮಗೆ ನಿನ್ನನೆ |
ನೆನೆದು ನೆಱೆ[೩] ನಿಶ್ಚಿಂತರಹ ಸುಖ |
ದನಿತನೇ ಪೇಳೆನುತ ಬಿನ್ನೈಸಿದನು ಬಸವಣ್ಣ || ೪ ||

ಆವ ವಾಸನೆವಿಡಿದು ಜನಿಸಿದ |
ಜೀವರುಗಳಭಿಲಾಷೆ ನಿಲುಕುವ |
ದಾ ವಿಳಾಸತೆ ತಪ್ಪದದು ಶಿವನಿತ್ತ ಬೆಸನಿಂದೆ ||
ನೀವು ನ[೪]ಮ್ಮೊಳು ಪರಮಸುಖಸಂ |
ಭಾವನೆಯನಱಿಯಲಿಕೆ ಬಂದಿರಿ |
ನಾವು ನಿಮಗದನೊರೆಯಬೇಹುದು ಬಸವ ಕೇಳೆಂದ || ೫ ||

---

೧ ದಿ ( ಉ. ) ೨ ಬಿತ್ತಿದ ಬೆಳೆಯ ( ಇ, ಕ, ಜ. ) ೩ ನಿಜ ( ಇ. ) ೪ ನಿ ( ಇ, ಉ, ಜ. )

ಮಾನವಾಕೃತಿಯಿಂದೆ ತದ್ಭವ |
ಕಾನನಂಗಳ ಸುಡುವ ಸಮ್ಯಗ್ |
ಜ್ಞಾನವಾಗಲಿಬೇಕೆನುತ ಶಿವಭಕ್ತಿಭರದಿಂದೆ ||
ಸ್ವಾನುಭಾವನೆಗೆಂದು ಬಂದಿರಿ |
ನಾ ನಿಮಗೆ ಬೋಧಿಸುವೆ[1]ನದನವ |
ಧಾನಿಸೆನುತಾ ಭಕ್ತರಿಗೆ ಗುರುರಾಯನಿಂತೆಂದ || ೬ ||

ಇಲ್ಲದಿಹ ಮಾಯಾಪ್ರಪಂಚುಗ |
ಳುಳ್ಳವೆಂದೆಂಬಂತೆ ವಿಷಯದ |
ಭುಲ್ಲವಣೆಗಳಲಿಂದ್ರಿಯದ್ವಾರದಲಿ ರಂಜಿಸುವ ||
ಎಲ್ಲವನು ಕಾಣಿಸುವದದ[2]ಱಿತೊಳು |
ಹೊಲ್ಲವೊಳ್ಳಿತ್ತೆಂದು ಕೆಲವನು |
ಸಲ್ಲವಿಡುವುದು ಮನವು ಮನವಳಿದವನೆ ಸುಖಿಯೆಂದ || ೭ ||

ಸ್ಥೂಲ ತನುವಿನ ಜಾಗ್ರ ಸ್ವಪ್ನದ |
ಕಾಲದಲಿ ಹುಸಿ ಸೂಕ್ಷ್ಮ ತನುವಿಗೆ |
ಮೇಲೆ ಕಾರಣ ತನುವಿನಲ್ಲಿ ಸುಷುಪ್ತಿ ಪಸರಿಸಲು ||
ಬೀಳು ಬಿದ್ದುವು ಜಾಗ್ರ ಸ್ವಪ್ನಗ |
ಳಾಳುತಿಹುದಿವನೊಂದೆ ಮನವಾ |
ಕಾಳು ಮನವೊಂದಳಿದುದಾದರೆ ನಿತ್ಯರಹರೆ[3]ಂದ || ೮ ||

ಸುರನರೋರಗರೆಂಬ ಮರುಳರ |
ಹುರುಳುಗೆಡಿಸಿದ ಮೂಱವಸ್ಥೆಗೆ |
ಪಿರಿದೆನಿಸುವಾ ತೂರ್ಯ ತೂರ್ಯಾತೀತವೆಂಬೆಱಡು ||
ಸರಸತರವಹ ಬಲೆಯ ಬೀಸಿಯೆ |
ಹರಹಿಕೊಂಡಿಹುದೀ ಮನಸ್ಸದ |
ನುರುಹಬಲ್ಲವನವನೆ ನಿತ್ಯನು ಬಸವ ಕೇಳೆಂದ || ೯ ||

---

೧ ನಾನು ಬೋಧಿಸಿ ಪೇಳ್ವೆ ( ಇ. ) ೨ ಪೊಡವ ( ಒ, ಮು. ) ೩ ಸುಖಿಯೆ ( ಗ. )

ಮನವ ಬಹಿರಂಗದಲಿ ಚರಿಸುವ |
ಮನುಜನವನಜ್ಞಾನಿ ಮತ್ತಾ |
ಮನವನಂತರ್ಮುಖದಲಾಚರಿಸಿದೊಡೆ ಸರ್ವಜ್ಞ ||
ಮನವು ಮನದಲಿ ನಿಂದು ನಿರ್ವಾ |
ಸನೆಯಲಿರೆ ಸುಜ್ಞಾನಿಯಂತಾ |
ಮನವನಳಿದರೆ ನಿತ್ಯನೈ ಬಸವಣ್ಣ ಕೇಳೆಂದ || ೧೦ ||

ಎನಿತು ತೋರುವ ತೋರಿಕೆಗಳನಿ |
ತನಿತು ಮನಸಿಂದಾದುವಲ್ಲದೆ |
ಮನವನಳಿದರೆ ಮತ್ತೆ ಕಾಣಿಸಲುಳಿದುದೊಂದಿಲ್ಲ ||
ಮನವೆ ಬೆಸಲಾದಖಿಳವಹ ವಾ[೧] |
ಸನೆಗಳಿಗೆ ಬಿದ್ದಾಸೆಗೆಯ್ದುರೆ |
ಮನುಜ ಜಾತಿಯುಲಾತನಧಮನು ಬಸವ ಕೇಳೆಂದ || ೧೧ ||

ಆಶೆಯೆಂಬುದು ತಾನೆ ಮಾಯಾ |
ಪಾಶವದು ಮುಸುಕಿದರೆ ತಾನೇ |
ಕ್ಲೇಶವಿಂತಿವು ಬಗೆಗೆ ಬಲಿಯಲು ತಾನೆ ಭವಬಂಧ ||
ದೋಷದುರಿತದ ಪುಂಜವದು ಕೇ |
ನಾಶಗೊಡ್ಡಿದ ಹರಕೆಗುರಿಯಾ |
ಯಾಶೆವೊಂದಳಿದವನೆ ನಿತ್ಯನು ಬಸವ ಕೇಳೆಂದ || ೧೨ ||

ಬೇಕು ಬೇಡೆಂದೆಂಬುದೊಂದವಿ |
ವೇಕವುಳ್ಳನ್ನಬರ ನಾನಾ |
ಶೋಕಮೋಹಾದಿಗಳು ಮುಂಗುಡಿವರಿದು ಮುಸುಕುವುವು ||
ಲೋಕರಂಜನೆಗೆಳಗಿದವರಿ[೨] |
ಕಾಕುತನದಲಿ ಕೆಟ್ಟು ಹೋಹರು |
ಬೇಕು ಬೇಡೆಂಬೆರಡನಳಿದರೆ ನಿತ್ಯರಹರೆಂದ || ೧೩ ||

---

೧ ದುರ್ವಾ ( ಇ, ಜ. ) ೨ ರತಿ ( ಜ. )

ಅನವರತವೇನಾದೊಡೊಂದನು |
ನೆನೆವುತಿಹುದೀ ಮನಸು ಮನಸಿನ |
ನೆನಹಿನಿಂದವೆ ತೋಱುವುವು ಸರ್ವ ಪ್ರಪಂಚಗಳು ||
ಇನಿತನಱಿದು ಸಮಾಧಿಯಲಿ ತ |
ನ್ಮನ[1]ವನೆಲ್ಲವ ತಿಂದು ತೇಗುವ |
ಘನ ಪರಾಕ್ರಮವುಳ್ಳೊಡಾತನೆ ಮುಕ್ತನಹನೆಂದ || ೧೪ ||

ಘನಮಹಿಮ ಚಿತ್ತೈಸು ದಿಟವಾ |
ಮನವನಳಿದಿಹೆನೆಂಬುದದು ತಾ |
ಮನವೆಯಲ್ಲದೆಯಾ ಮನಸ್ಸನದೆಂತು ತಿನ[2]ಬಹುದು ||
ಮನವನೆಂತಾದರೆಯು ನಿರ್ವಾ |
ಸನೆಗೆ ತಹುದರಿದಲ್ಲವಲ್ಲದೆ |
ಮನವನಳಿವುದು ಚೋದ್ಯವೆಂದನು ಬಳಿಕ ಬಸವಣ್ಣ || ೧೫ ||

ಮನವನಱಿದಿಹೆನೆಂಬುದದು ಮನ |
ಮನವ ನಿಲಿಸಿಹೆನೆಂಬುದದು ಮನ |
ಮನವನಳಿದಿಹೆನೆಂಬುದದು ಮನವಾವರೀತಿಯಲಿ ||
ಮನವೆ ತಾ ಹೆಱ[3]ಸಾಱಿ ಬಹು ಯೋ |
ಚನೆಗಳನು ರಂಜಿಸುವುದಂತಾ |
ಮನವನೆಲ್ಲವನಳಿದನಾದರೆ ನಿತ್ಯನಹನೆಂದ || ೧೬ ||

ದೇವ ಬಿನ್ನಹ ಮನವನಳಿದ ನಿ |
ರಾವಲಂಬಿಯ ಕುಱುಹದೆಂತುಟು |
ಜೀವನೋ ಪರಮನೊ ಪರಾಪರನಾಮನುಳ್ಳ[4]ವನೊ ||
ಆವುದಾಗಿಹುದಾತನಂಕಿತ[5] |
ನಾವು ತಿಳಿವಂತಿರೆ[6] ನಿರೂಪಿಸಿ |
ಕಾವುದೆನುತಲಿ ಮತ್ತೆ ಬಿನ್ನೈಸಿದನು ಬಸವಣ್ಣ || ೧೭ ||

---

೧ ನ್ನನು ( ಕ, ಗ, ಚ, ಜ. ) ೨ ಗೆಲ ( ಇ. ) ೩ ತ್ಸರ ವಸ್ತುವಾದ ( ಇ. ) ೪ ನಿಂಗಿತ ( ಅ, ಕ, ಜ. ) ೫ ತದ ( ಗ, ಜ. )

ನೇಮವಿಲ್ಲದೆ ಮನವನೇ ತಿಂ[೧] |
ದಾ ಮಹಾ ನಿರುಪಮ ನಿರಾಳಗೆ |
ನಾಮ ರೂಪು ಕ್ರಿಯೆಗಳುಂಟೇ ಕುಱುಹ ತೋಱುವರೆ ||
ಪ್ರೇಮದಿಂದೊಂದೊಂದು ಕುಱುಹನು |
ಕಾಮಿಸುವರಿಂತಿವರಿದಲ್ಲದೆ[೨] |
ಆ ಮಹಾತ್ಮನಭೇದ್ಯ ಕಾಣಾ ಬಸವ ಕೇಳೆಂದ || ೧೮ ||

ಗುರುವೆ ಬಿನ್ನಹವಾ ಮನವ ನಿ |
ಟ್ಟೊರಸಿದನುಪಮನೊಂದು ಲಕ್ಷ್ಯ |
ಸ್ಮರಣೆಯಿಂದಾಗಾದೆನಲ್ಲದೆ ಬಱದೆ ಬಹುದಿಲ್ಲ ||
ಕರುಣಿಸಾ ಲಕ್ಷ್ಯವನು ನಮ್ಮ |
ಲ್ಲರಿಗೆ ಬಳಿಕೆಮ್ಮನುಭವಂಗಳ |
ಪರಿಯನವಧರಿಸೆನುತಲಿದ್ದನು ಚೆನ್ನಬಸವಣ್ಣ || ೧೯ ||

ಲಕ್ಷ್ಯವನು ಪೇಳುವೊಡೆ ಮಾತಿನ |
ಲಕ್ಷವಲ್ಲ ಮಹಾನುಭಾವದ |
ಲಕ್ಷವಲ್ಲಷ್ಟಾಂಗಯೋಗದ ಲಕ್ಷ ಮುನ್ನಲ್ಲ ||
ಲಕ್ಷವದು ನಿರ್ಲಕ್ಷವೇ ತಾ |
ಲಕ್ಷವಾಗಿಹುದೆಂದು ಘನಗುರು |
ಲಕ್ಷಣವ ಲಕ್ಷಿಸಿಯೆ ನುಡಿದನು ಚೆನ್ನಬಸವಂಗೆ || ೨೦ ||

ನೆನಹಿಗಿಲ್ಲದ ನೋಟಕಿಲ್ಲದ |
ತನುವಿಗಿಲ್ಲದ ಸಾಧನದ ಭಾ |
ವನೆಯೊಳಿಲ್ಲದ ಹೇಳಲಿಲ್ಲದ ಕೇಳಲಿಲ್ಲೆಂಬ ||
ಅನುಪಮವನಿನ್ನಾವ ಪರಿಯಿಂ |
ದನುಭವಿಸಿ ನೆಱೆ[೩] ನಿತ್ಯರಹೆವೆಂ |
ದೆನುತ ಕೇಳಿದನಲ್ಲಮನ ಮಡಿವಾಳ ಮಾಚಯ್ಯ || ೨೧ ||

---

೧ ಮನ್ನಿಸ ( ಉ. ) ೨ ರೀತಿಯದಿದಲ್ಲದೆ ( ಅ. ) ; ದರಿದಲ್ಲವಲ್ಲದೆ ( ಕ. ) ೩ ದಿನಿತಾದ ( ಇ. )

ಇಲ್ಲದುದ ತಾವಱಿದೆವೆಂಬಱಿ |
ವು[1]ಳ್ಳವರು ತನುಮನಗಳೊಳು ತಾ |
ವಿಲ್ಲದಿರಬೇಕಾಗಿಹುದು ಸಂಸಾರಸ್ವಪ್ನದಲಿ[2] ||
ಇಲ್ಲದೆಚ್ಚತ್ತಱಿವು ಮಱಿಹಿನ |
ಗಲ್ಲಣೆಯನೀಡಾಡಿ ತಾನಿರ |
ಬಲ್ಲೊಡಾತನೆ ಮುಕ್ತನೈ ಮಡಿವಾಳ ಕೇಳೆಂದ || ೨೨ ||

ಹುಸಿವೊಡೀ ಮಾಯಕದ ತನು[3]ಮನ |
ದೆ[3]ಸಕವವನಿನ್ನಿಲ್ಲ[4]ವೆನಿಸುವ |
ಗ[5]ಸಣೆಯೇತಕೆ ಬೇಱೆ[6] ಮುಕ್ತಿಯ ಬೆದಕುತಿರಲೇಕೆ ||
ಹುಸಿಯೆ ನಾವಾಗಿರ್ದ ವೇಣ್ ಹೂ |
ಣಿಸುವ ಬಗೆ ದಿಟವಹವೆ ಎನುತಾ |
ಬಸವ ಮೊದಲಾಗಿರ್ದ ಭಕ್ತರು ಕೇಳ್ದರಲ್ಲಮನ || ೨೩ ||

ನೀಲ ಹೊಳೆ ಕೆಸರಾಗದಿಹುದೆ ವಿ |
ಚಾರಿಸಲು ಬಸವನ ಸಮೀಪದ |
ಲಾರು ಸಮ್ಯಗ್ಜ್ಞಾನಸಾಧಕರಾಗರೆಂದೆನುತ ||
ಹಾರವಿಸಿ ಭಕ್ತರು ನಿರಾಳವ |
ಹಾರಿ ಬಿನ್ನಹ ಮಾಡೆ ಕರುಣಾ |
ಕಾರ ಘನಗುರುವದಕೆ ಸಂತಸವಡುತಲಿಂ[7]ತೆಂದ || ೨೪ ||

ಖ್ಯಾತಿನದ್ವೈತದಲಿ ಮಾಱೀಯ |
ಸ್ವಾತಿ ಮಾಣದು ಮನದ ಸಂಕ |
ಲ್ಪಾತಿಶಯದಲಿ ನಾಮ ರೂಪು ಕ್ರಿಯೆ ನಿವಾರಿಸಲು ||
ಪ್ರೀತಿ ನೀತಿಯ ನುಂಗಿದುಪಮಾ |
ತೀತನಾದಂಗಲ್ಲದಾಗದು |
ಕೌತುಕವ ನಾನೇನ ಹೇಳುವೆ ಬಸವ ಕೇಳೆಂದ || ೨೫ ||

---

೧ ಳು । ಪ ( ಉ, ಓ, ಕ, ಚ, ಜ. ) ೨ ಸಂಪದದೆ ( ಗ. ) ೩-೩ ದಿನ । ಮ ( ಗ. ) ೪ ನು ನಿ ನಗಿಲ್ಲ ( ಇ. ) ೫ ವಾಗುತಿಂ ( ಉ. ) ; ಷಾಮುತಿಂ ( ಹು. ) ೬ ಹಿಂಗ ( ಅ. ) ೭ ರೀ ( ಉ. ) ; ಗೀ ( ಇ. )

ತೆಂಗನಗಿದಗಿದೊಡೆಯದೊಯ್ಯನೆ |
ನುಂಗಿ ತಿರುಳನೆ ಜೀರ್ಣಿಸುವ ಮಾ |
ತಂಗದಂತಿರೆ ಶರಿರವಳಿಯದ ಪರಿಯುಲವಗವಿ[1]ಸಿ ||
ಅಂಗದೊಳಹೊಱಗಿಡಿದ ಮಾಯೆಯ |
ಹಿಂಗಿಸುವ ಗುರು[2]ಮಹಿಮೆ ನಿಸಗೊ |
ಬ್ಬಂಗೆ ಸಲುವುದು ವೇದ ಮಚ್ಚಲು ದೇವ ಕೇಳೆಂದ || ೨೬ ||

ಬಸವನೇ ಗುರುವಾಗಿ ತಾ ಬೋ |
ಧಿಸಿದನೊಡನಧ್ಯಾತ್ಮಭಾವದ |
ಬೆಸುಗೆಯನು ಮುರ್ಝು ಭಾಪು ನೀನಹುದ್ಯೆ ಸಮಾಧಿಯಲಿ ||
ಹಸನ ಮಾಡಿದೆ ತನು ಮನಂಗಳ |
ದೆಸೆಯನಲ್ಲದೊಡೀ ತೆಱನನಾ |
ರುಸುರ ಬಲ್ಲರು ಚಾಗೆನುತ ಮಚ್ಚಿದನು ಗುರುರಾಯ || ೨೭ ||

ಧರೆಯ ಕಠಿಣವ ಕೆಡಿಸಿ ನೀರಿನ |
ಸಿ[3]ರಿಯ ರಸವನೆ ದಹಿಸಿ ಪಾವಕ |
ನುರಿಯ ನಂದಿಸಿ ಮಾರುತನ ಸಂಚಲವ ಗತಿಗೆಡಿಸಿ[4] ||
ಹಿರಿಯ ಗಗನವನಿಂಬುಗೊಂಡಿಹ |
ಶರಣತನದ ಮಹಾತ್ಮೆ ನಿನ್ನನು |
ಶರಣುವೊಕ್ಕುದು ಬಸವ ಮುರ್ಝು ಭಾಪೆಂದ ಗುರುರಾಯ || ೨೮ ||

ಬಸವ ಮಾಡಿದೊಡಾಯ್ತು ಗುರುನೆಲೆ |
ಬಸವ ಮಾಡಿದೊಡಾಯ್ತು ಲಿಂಗವು |
ಬಸವ ಮಾಡಿದೊಡಾಯ್ತು ಜಂಗಮವಱಿವ ಮಹಿಮಂಗೆ ||
ಬಸವನಿಂದಧ್ಯಾತ್ಮವೇ ಪಸ |
ರಿಸಿತು ಲೋಕದೊಳಂತುಕಾರಣ |
ಬಸವನೇ ಪರದೈವವೆಂದೆನುತಿರ್ದ ಗುರುರಾಯ || ೨೯ ||

---

೧ ಡಿ ( ಇ. )  ೨ ಘನ ( ಅ, ಇ. )  ೩ ಝು ( ಜ. )  ೪ ನತಿಗಳೆದು ( ಇ. )

ಮನವೆಯಕ್ಕನು ಚೆನ್ನಬಸವನೆ |
ನೆನಹು ಮಡಿವಳನಱಿವು ಬಾಚರ |
ಸನೆ ವಿವೇಕ ಸುಶೀಲವೇ ತಾ ಹಡಪದಪ್ಪಣ್ಣ ||
ತನುವೆ ಕಿನ್ನರ ಬಸವನೇ ಚೇ |
ತನಕಳಾತ್ಮಕನಂತು ಬಸವ |
ಣ್ಣನ ಮಹಾತ್ಮೆಯನೇನ ಹೊಗಳುವೆನೆಂದ ಗುರುರಾಯ || ೩೦ ||

ದೇವ ನಿನ್ನಯ ಭಕ್ತರೆಲ್ಲರು |
ಜೀವ ನೀನೇ ಪರಮನಿಂತಿ[೧] |
ಜೀವಪರಮರನೊಂದುಮಾಡಿ ನಿರಾವಲಂಬನದ ||
ಠಾವನೆಡೆಗುಡು ಸಾಕು ಹೊಗಳುವೊ |
ಡಾವು ನಿನಗೊಂದಿದಿರೆ ಎನುತವೆ |
ಶಿವಿ ಭಯಭಕ್ತಿಯಲಿ ಬಿನ್ನೈಸಿದನು ಬಸವಣ್ಣ || ೩೧ ||

ಹೆಚ್ಚಿದನು ಗುರು ಕರುಣದಿಂದಲಿ |
ನಚ್ಚಿದನು ಗುರು ಬಸವರಾಜನ |
ಮಚ್ಚಿದನು ಗುರು ತನ್ನ ಭಕ್ತಿಯ ಸವಿಯ[೨] ತನಿರಸವ ||
ಕೊಚ್ಚಿದನು ಗುರು ಮಱವೆಯೆಲ್ಲವ |
ಮುಚ್ಚಿದನು ಗುರು ಭಿನ್ನ ಭಾವವ |
ಬಿಚ್ಚಿದನು ಗುರು ಭವದ ಬಂಧವ ತನ್ನ ಭಕ್ತರಲಿ || ೩೨ ||

ಹಲವು ದಿನ ಮಱ[೩]ದೊಱಗಿ ನಿದ್ರೆಯ |
ಬಲೆಯೊಳಗೆ ದುಸ್ವಪ್ನಕೋಟಿಯ |
ಕೊಲೆಗೆಲಸಕೊಳಗಾದವರನೆಬ್ಬಿಸುವ ತೆಱನಂತೆ ||
ತೊಲಗಿಸುವೆ ಸಂಸಾರ ಸ್ವಪ್ನವ |
ತಿಳುಹಿ ನಿಜ ಪದವಿಗಳ ಕೊಡುವೆನು |
ಸುಲಭದಲಿ ನಾನೆನ್ನ ಭಕ್ತರಿಗೆಂದ ಗುರುರಾಯ || ೩೩ ||

---

೧ ನಂತಿರೆ ( ಉ. ) ೨ ಫಲದ ( ಇ. )

ಎಂದು ಬಳಿಕವರವರಿಗುಚಿತಗ |
ಳಿಂದಲವರವರನುಭವಂಗಳ |
ಹೊಂದಿಕೆಯು ಹೋಲುವೆಯು ಬೆಂಬಳಿವಿಡಿದು ಕರುಣದಲಿ ||
ಸಂದ ಸಮ್ಯಗ್ಜ್ಞಾ[1]ನ ಶಿರದ |
ಲ್ಲಿ[2]ಂದ ವಿಶ್ರಾ[1]ಂತಿದ ಸುಖದ ಪರಮಾ |
ನಂದವಹ ಸಂಕೇತಗಳ ಕರುಣಿಸಿದ ಗುರುರಾಯ || ೩೪ ||

ನಾನು ನೀನೆಂದೆಂಬ ಭೇದವಿ |
ಧಾನವಲ್ಲದ [3]ನದ್ವಿತೀಯುವ |
ಧಾನವಲ್ಲದ[3] ಜ್ಞಾತೃ ಜ್ಞಾನ ಜ್ಞೇಯ ವಿರಚಿಸಿದ ||
ಏನುವೆನಿಸದ ಏನುವಿಲ್ಲದ |
ಏನುವಲ್ಲದ ನಿರುಪಮುದ ಸುಯಿ |
ದಾನ ಸುಖವನೆ ಕೊಟ್ಟನಾ ಗುರು ಬಸವರಾಜಂಗೆ || ೩೫ ||

[4]ಮರಣವಿಲ್ಲದ ಜನನ[4]ವಿಲ್ಲದ |
ಕರಣವಿಲ್ಲದ ಕರ್ಮವಿಲ್ಲದ |
ಯಿಹಪರಂಗಳೊಳೊಡಲ ಬಿಟ್ಟಯು ಹೊಱ[5]ಗಳನು ಹೊಱದ ||
ನಿರುಪಮದ ನಿಶ್ಚಿಂತ ನಿಶ್ಚಲ |
ಪರಮ ನಿತ್ಯಾನಂದಪದವಿಯು |
ಕರುಣಿಸಿದನಾ ಗುರು ಗುಹೇಶ್ವರಲಿಂಗ ಬಸವಂಗೆ || ೩೬ ||

ಭೂರುಹದ ತಾಯ್ಬೇ[5]ರಿಗಮೃತದ |
ನೀರನೆಱೆ[5]ದೊಡೆ ಶಾಖೆಗಳಿಗೆ ಸು |
ಸಾರ ವೇದಿಸುವಂತೆ ಬಸವನ ಭಕ್ತಿಬಂಧುಗಳು ||
ಹಾರವಿಸುವಂತೆಮ್ಮ ಬಸವನ |
ಕಾರಣದಲೆಲ್ಲರಿಗೆ ತನ್ನಯ |
ಸಾರ ನಿತ್ಯಾನಂದಪದವಿಯನಿತ್ತ ಗುರುರಾಯ || ೩೭ ||

---

೧-೧ ನಿ ಶಿರದಲಿ | ಮುಂದೆ ಬೀ ( ಗ. ) ೨ ಸಾರದ | ಲಿ ( ಇ. ) ೩-೩ ನಿರುಪಮದ ಸು | ಜ್ಞಾನವೊತ್ತಿಹ ( ಚ. ) ೪-೪ ಜರೆಯು ಜನನವು ಮರಣ ( ಇ. ) ೫ ತಳಬೇ ( ಗ. )

ಶರಣಸಂದೋಹವನು ತನ್ನಯ |
ಪರಮ ನಿತ್ಯಾನಂದ ಪದವಿಯ |
ಲಿರಿಸಿ ತಾನಲ್ಲಿಂದೆ ಹೋಗುತಲವರ ಬೀಳ್ಕೊಟ್ಟು ||
ಕರುಣದಿಂದಲಿ ಸಕಲ ಸಚರಾ |
ಚರರೊಳಂತರಿಯಾಮಿಯಾಗಿಯೆ |
ಗುರು ಗುಹೇಶ್ವರಲಿಂಗನಿರ್ದನು ತನ್ನ ಲೀಲೆಯಲಿ || ೨ ||

ಖರಕರಪ್ರತಿಬಿಂಬವಖಿಳರೊ |
ಳಿರಲದೇನೆಲ್ಲರಿಗೆಯದು ಗೋ[೧] |
ಚರವೆ ನಿರ್ಮಲ ನಿಶ್ಚಲದ ನೀರಿನಲಿ ತೋರ್ಪಂತೆ ||
ಭರಿತನಾಗಿರ್ದೆಲ್ಲರಿಗೆ ವಿ |
ಸ್ತರಿಸಿ ತೋಱದೆ ಸತ್ಯ ಸದ್ಭ |
ಕ್ತರಲಿ ಕಾಣಿಸುತಿರ್ದನಲ್ಲಮಲಿಂಗ ಲೀಲೆಯಲಿ || ೩ ||

ಗುರು ಗುಹೇಶ್ವರಲಿಂಗ ತನ್ನಯ |
ಚರಣ ಭಕ್ತರ ಹೃದಯಕಮಲಾ |
ಕರದಲಾಡುತ[೩] ಹಂಸೆಯಂತಿರುತಿರ್ದನೊಲಿದಿತ್ತ[೩] ||
ಹರುಷದಲಿ ಬಳಿಕತ್ತ ಪರಮೇ |
ಶ್ವರನೊಳಾ ಕೈಲಾಸಪುರದೊಳು |
ಸರಸಗೋಷ್ಠಿಯ ಮಾಡುತಂದಿಂ[೪]ತೆಂದಳಾ ಗಿರಿಜೆ || ೪ ||

ಎಲೆ ಸದಾಶಿವ ನನ್ನ ಸಾತ್ವಿಕ |
ಕಳೆಯ ನಿನ್ನಯ ಗಣವ ನೀನಂ |
ದಿಳೆಯಲುದಯಿಸಿಯಲ್ಲಮಪ್ರಭುಲಿಂಗನೊಲವಿಂದೆ ||
ತಿಳಿದು ನಿತ್ಯತ್ವವನು ಸಾಧಿಸಿ |
ಕೊಳಲಿಯೆಂದನಿಬರನು ಕಳುಹಿದೆ |
ಬಳಿಕಲವರೇನಾದರೆಂದಾಲಿಸಿದಳಾ ಗಿರಿಜೆ || ೫ ||

---

೧ ದೃಗ್ಗೋ ( ಕ, ಚ, ಜ. ) ೨ ಮಧ್ಯದ ( ಒ. ) ೩ ತೊಲಿದಾಡುತಿರಲಿತ್ತ ( ಒ. ) ೪ ಸಮಯದೊಳಗಿಂ ( ಇ. )

ಎನಲು ಬಸವಣ್ಣಾದಿ ಭಕ್ತರಿ |
ಗನುಪಮದ ಪದವಾದುದನು ತಾ |
ನೆನೆದ ನೆನಹಿಗೆ ಮುಂಚೆ ಕಂಡನು ಶರ್ವ ಸರ್ವಜ್ಞ ||
ಮನವೊಲಿದು ನಸುನಗೆಯ ಕಾಂತಿಯ |
ನನೆಯನಲರಿಸುತಾ ಹದನ ನಿಜ |
ವನಿತೆಗೊರೆವುತಲಿರ್ದನಾನಂದದಲಿ ಶಶಿಮೌಳಿ || ೬ ||

ದೇವಿ ನಿನ್ನಯ ಸಾತ್ವಿಕವೆ ಮಹ |
ದೇವಿವೆಸರಲಿ ಹುಟ್ಟಿ ಬಳೆದಳು |
ದೇವಗಣದೊಳು ವೃಷಭರಾಜನೆ ಬಸವವೆಸರಿನಲಿ[೧] ||
ತೀವಿ ಮಿಕ್ಕವರೆಲ್ಲರುಚಿತವ |
ಚೋವಿಳಾಸತೆ ಹೆಸರುವಡೆದಾ |
ಭೂವಳಯದಲಿ ಸಂಜನಿಸಿದರು ಕಾಂತೆ ಕೇಳೆಂದ || ೭ ||

ಜನಿಸಿ ಬಳೆದೊಂದೊಂದು ಕಾಯಕ |
ವನುವಿಡಿದು ತಾವಲ್ಲಮುಪ್ರಭು |
ವನೆ ಸದಾ ಧ್ಯಾನಿಸುತಲಿದ್ದರು ಭಕ್ತಿಭಾವದಲಿ ||
ಅನಿಬರೊಳಗೊಬ್ಬರಿಗದೊಬ್ಬರು |
ಘನವೆನಲು ಸಂಪ್ರೀತಿಯಿಂದಲಿ |
ತನುಮನಂಗಳ ಸವೆವುತಿರ್ದರು ಲಿಂಗಜಂಗಮಕೆ || ೮ ||

ಆತನಲ್ಲಮು ಸಕಲ ಸಮಯ |
ಪ್ರೀತನಲ್ಲಿಯು ಶೈವದಲಿ ಸಂ|
ಪ್ರೀತನದರೊಳು ವೀರಶೈವದಲತಿಮಹಾ ಪ್ರೀತ ||
ಈ ತೆರನನರಿದಖಿಳ ಭಕ್ತಸ |
ಮೇತವಂತಾ ವೀರಶೈವದ |
ನೀತಿಯನೆ ನಿರ್ಣಯಿಸುತಿರ್ದರು ಕಾಂತೆ ಕೇಳೆಂದ || ೯ ||

---

೧ ನಾಮದಲಿ ( ಇ, ಜ. ) ೨ ಸಲಿಸು ( ಇ, ಉ. )

ಉಳ್ಳ ಷಡುಸಮಯಗಳ ನುಡಿವಳಿ |
ಯೆಲ್ಲವೇಕೆಂದವರ ಮಾರ್ಗವ |
ನೊಲ್ಲ ನೀನೀ[೧] ಹೊಗಳಿ ಹೇಳಿದ ವೀರಶೈವದಲಿ ||
ಒಳ್ಳಿತೇನುಂಟೆಂದು ಮುಚ್ಚಿದ |
ನಲ್ಲಮನು ಹೇಳೆನುತ ತನ್ನಯ |
ವಲ್ಲಭನ ಕೇಳಿದಳು ಮಾಣದೆ ಮತ್ತೆ ಗಿರಿಜಾತೆ || ೧೦ ||

ಆದೊಡಾಲಿಸಿ ಕೇಳು ಧರ್ಮಾ |
ರ್ಥಾದಿಯಾಗಿಹ ಕಾಮ ಮೋಕ್ಷಾ |
ಮೋದವಾಗಿಹವಖಿಳ ಸಮಯಗಳಾಗಮೋಕ್ತಿಯಲಿ ||
ವೇದವಱಿಯಲು ವೀರಶೈವದ |
ಹಾದಿಯೆಂಬುದು ನಿಸ್ಪೃಹದ ಸಂ |
ಬೋಧೆಯಾಗಿಹುದೇನನೆಂಬೆನು ಗಿರಿಜೆ ಕೇಳೆಂದ || ೧೧ ||

ಕರ್ಮಮಾತ್ರವೆ ಪಾಪವೆನ್ನದೆ |
ಕರ್ಮಲಂಪಟರುಗಳು ಪಾಪದ |
ಕರ್ಮ ಪುಣ್ಯದ ಕರ್ಮವೆಂಬಿಂತೆಱಡ ಮಾಡಿದರು ||
ಕರ್ಮಮಾತ್ರವೆ ಭವದ ಬೀಜದ |
ಧರ್ಮವೆಂದಾ ವೀರಶೈವದ |
ಕರ್ಮಿಗಳು ನಿಷ್ಕರ್ಮರೆನಿಪರು ಗಿರಿಜೆ ಕೇಳೆಂದ || ೧೨ ||

ಊಹಿಸಲು ಕರ್ಮದಲಿ ಜೀವ |
ದ್ರೋಹವಾ ದ್ರೋಹದಲಿ ಭವಸಂ |
ದೋಹವಾ ಭವವುಳ್ಳ ಭವಿಗಳು ಶುದ್ಧ ನರಕಿಗಳು ||
[೩]ಮೋಹವಿಲ್ಲದೆ ಸಕಲ ಜೀವರ[೩] |
ಸ್ನೇಹವುಳ್ಳಾ ವೀರಶೈವದ |
ಗಾಹುಕಾಱರು ಪರಮ ಸುಖಿಗಳು ಗಿರಿಜೆ ಕೇಳೆಂದ || ೧೩ ||

---

೧ ನೊಲ್ಲದೆಯು ನೀ ( ಇ. ) ; ನಲ್ಲವೆಸಿಸಿಯೆ ( ಉ. ) ೨ ಧ ( ಉ. ) ೩-೩ ಹೇಹವಿಲ್ಲದೆ ಸಕಲದೊಳು ಸಿಃ ( ಜ. )

ವೀರಶೈವವನದುನಿಮಿತ್ತದ |
ಲಾರು ಹೊಕ್ಕಂಗೈಸಿ ಭಕ್ತಿಯ |
ಪಾರವೆಯ್ದಿಸಬಲ್ಲರೇ ಅವರಲ್ಲದುಳಿದವರು ||
ಧಾರುಣಿಯಲಿದನರಿದು ಕರುಣಾ |
ಕಾರನಲ್ಲಮ ತನ್ನ ಭಕ್ತರು |
ಹಾರವಿಸಿಕೊಂಬಂತೆ ಸುಳಿದನು ಗಿರಿಜೆ ಕೇಳೆಂದ || ೧೪ ||

ಬಂದು ಬಳಿಕವರವರಿಗುಚಿತಗ |
ಳಿಂದಲನುಭವಮಾರ್ಗವನು ದಯೆ |
ಯಿಂದಲುಪದೇಶಿಸಿ ಮಹಾ ಸುಜ್ಞಾನ ದೃಷ್ಟಿಯನು೧ ||
ಕಂದೆರಿಸಿ ಮಹದೇವಿಯಕ್ಕಗೆ |
ಸಂದ ನಿಜ ಶರಣರಿಗೆ ನಿತ್ಯಾ |
ನಂದ ಪದವಿಯನಿತ್ತನಲ್ಲಮ ಗಿರಿಜೆ ಕೇಳೆಂದ || ೧೫ ||

ಭವಭವದಲಜ್ಞಾನವಿಧಿಯಲಿ |
ಭುವನಭವನವ ತೊಳಲಿ ಬಳಲುವ |
ವ್ಯವಹರಣೆಯಂತಲ್ಲ ಗುರುಕೃಪೆಯಾದ ಶರಣರಿಗೆ ||
ಹವಣಿಸಲು ಬಾರದ ಪರಬ್ರ |
ಹ್ಮವನು ಮೀರಿದ ನಿರುಪಮಸ್ಥಾ |
ನವನು ಸೂರೆಯ ಕೊಟ್ಟನಲ್ಲಮ ಗಿರಿಜೆ ಕೇಳೆಂದ || ೧೬ ||

ದೇವಿ ಕೇಳ್ ನಿನ್ನಂಶದಾ ಮಹ |
ದೇವಿ ನನ್ನಂಶದ ಗಣಂಗಳು |
ದೇವಕನ್ಯೆಯರೆಲ್ಲರಲ್ಲಮನಿಂದೆ ಜಗವರಿಯೆ ||
ತೀವಿ ತಮ್ಮಯ ನಾಮ ರೂಪು |
ಕ್ರೀ೨ ವಿಳಾಸ೩ವನಿಳುಹಿ ನಿತ್ಯ೪ ನಿ |
ರಾವಲಂಬದ ಸುಖಿಗಳಾದರು ಗಿರಿಜೆ ಕೇಳೆಂದ || ೧೭ ||

---

೧ ಲಿ (ಇ, ಗ.) ೨ ಕೆ । ಳಾ (ಇ.) ೩ ಕಳಾಪ (ಕ.) ೪ ತಿಳಿದು ನಿಖಿಳ (ಜ.)

ಲೇಸು ಮತ್ತೆಯು[1] ನಿಮ್ಮವರು ಕೈ |
ಲಾಸಪದವಿಯು ಮಿಾಱೆ[2] ನಿರುಪಮ |
ವಾಸವನೆ ವೆಂಟಣಿಸಿಕೊಂಡರೆಲೈ ಮಹಾದೇವ ||
ಈ ಸುಖಂಗಳನಲ್ಲವೆನೆ ನಿ |
ರ್ಣೈಸಿ ಕೊಟ್ಟನು ಶರಣರಿಗೆ ಸಂ |
ತೋಷವಿನ್ನೇನಗಾದುದೆಂದಳು ಬಳಿಕ ಗಿರಿಜಾತೆ[3] || ೧೮ ||

ದೇವ ನೀನೆಂದಂತೆ ಘನಮಹಿ |
ಮಾವಲಂಬನು ತಪ್ಪದೈ ಪ್ರಭು |
ದೇವ ನಾನದನಱಿದೆನೀಗಳು ನಿನ್ನ ಕರುಣದಲಿ ||
ದೇವ ನಿನ್ನ ನಿಜಸ್ವರೂಪಕೆ |
ದಾವುದರಿದೆಂದೆನುತ ಪಾರ್ವತಿ |
ದೇವಿ ಸಂತೋಷದಲಿ ನುಡಿದಳು ಬಳಿಕ ಶಂಕರಗೆ || ೧೯ ||

ಇಂತು ಸತತೋತ್ಸಾಹದಿಂದಲಿ |
ಸಂತತಾನಂದೈಕಸುಖ[4]ದಲಿ |
ಕಾಂತೆ ಸಹಿತಿರುತಿರ್ದನೀಶ್ವರನತ್ತ ಬಳಿಕಿತ್ತ ||
ಚಿಂತಿತಾರ್ಥವನಖಿಳ ಭಕ್ತರ |
ತಿಂತಿಣಿಗೆ ಕೊಡುತಲ್ಲಮಪ್ರಭು |
ಸಂತಸದಲಿರುತಿರ್ದನೆಲ್ಲರ ಹೃದಯಕಮಲದಲಿ || ೨೦ ||

ಬಾಲರನು ವೃದ್ಧರನು ಭೂಮಿಾ |
ಪಾಲರನು ಬಡವರನು ಸದಮಲ |
ಶೀಲರನು ಗುಣಿಗಳನು ಗೋ ಬ್ರಾಹ್ಮರನು ಭಕ್ತರನು ||
ಲೋಲತೆಯಲಿ ಸಮಸ್ತಜಾತಿಯ |
ಜಾಲವನು ಸರ್ವರನು ಕರುಣಿಸಿ |
ಪಾಲಿಸುತಲಿರುತಿರ್ದನೆಮ್ಮಯ ಗುರು ಗುಹೇಶ್ವರನು || ೨೧ ||

---

೧ ಈಶ ಬಿನ್ನಹ ( ಇ. ) ೨ ತ್ತಿಸ್ಸೆ ( ಜ. ) ೩ ಗಿರಿಜೆ ನಸುನಗುತ ( ಇ. ) ೪ ರಸ ( ಇ. )

ಹಿರಿಯರಿಗೆ ಕಿಱಿಯರಿಗೆ ಸದಮಲ |
ಚರಿತರಿಗೆ ಚದುರರಿಗೆ ಸಜ್ಜನ |
ಶರಣರಿಗೆ ಮುಗ್ಧರಿಗೆ ಸಕಳಕಳಾವಿದಗ್ಧರಿಗೆ ||
ಗರುವರಿಗೆ ಹಿತವರಿಗೆ ಸಚರಾ |
ಚರರಿಗನುದಿನ ಕರುಣದಿಂದಲಿ |
ವರದನಾಗಲಿ ಗುರು ಗುಹೇಶ್ವರಲಿಂಗ ಲೀಲೆಯಲಿ || ೨೨ ||

ಆಲಸಿಕೆಯಿಂದಾದೊಡೋದಲು |
ನಾಲಗೆಯ ಬಱ ಬಿಟ್ಟು ಹೋಹುದು |
ಕೇಳಲನುಕರಿಸಿದೊಡೆ ಕರ್ಣೇಂದ್ರಿಯಕೆ ದಣಿ[1]ವಹುದು ||
ಆಲಿಸಿದ[2] ಪದದರ್ಥ [3]ಮನಸಿನ |
ಮೇಲೆ ನಿಲೆ ನಿತ್ಯತ್ವವಹುದೆನೆ |
ಲಾಲಿಸುವು[4]ದದನೊಲಿವೊಡೀ[4] ಪ್ರಭುಲಿಂಗಲೀಲೆಯಲಿ || ೨೩ ||

ನೋಡಿದರೆ ಭಯಭಕ್ತಿಯಲಿ ಕೊಂ |
ಡಾಡಿದರೆ ರಾಗದಲಿ ರಂಜಿಸಿ |
ಹಾಡಿದರೆ ಹಾರೈಸಿದರೆ ಕಿವಿಗೊಟ್ಟು ಕೇಳಿದರೆ ||
ಕೂಡೆ ಲೀಲೆಯನಱಿದು ಹರುಷವ |
ಮಾಡಿದರೆ ಭವಬಾಧೆಗಳನೀ |
ಡಾಡಿ ನಿತ್ಯವ ಹಡೆವರೀ ಪ್ರಭುಲಿಂಗಲೀಲೆಯನು || ೨೪ ||

ಒಂದು ಸಾವಿರದೊಂದು ಶತ ಹ |
ನ್ನೊಂದು ಪದವೆಂದೆಂಬ ಪರುಷದ |
ಸಂದ ಶಿಲೆಯನು ಬಳಸಿದಿಪ್ಪತ್ತೈದು ಗತಿಯೆಂಬ ||
ಹೊಂದಿಗೆಯ ಸೋಪಾನಗಳ ಬಲಿ |
ದಂದವಿಸಿಯಲ್ಲಮನ ಪರಮಾ |
ನಂದಲೀಲಾಮೃತಸರೋವರವಾಯ್ತು ಜಗದೊಳಗೆ[5] || ೨೫ ||

**ಅಂತು ಗತಿ ೨೫ಕ್ಕಂ ಪದ ೧೧೧೧ಕ್ಕಂ ಮಂಗಳಂ**

**— ಸಮಾಪ್ತಂ —**

---

೧ ಸುಖ ( ಇ. ) ೨ ಯೆ ( ಇ. ) ೩–೩ ಮಾಡಲು । ಮೇಲುಗತಿ ನಿತ್ಯತ್ವವಹುದಿದ । ಕೇಳಲೊದಗು ವುದೀ ಮಹಾ ( ಇ. ) ೪–೪ ದಿದನರಿವುದೀ ( ಅ. ); ನವರತದಲಿ ( ಗ. ) ೫ ಜಗಮೊಗೆಯೆ ( ಅ. ); ಜಗ ಮುಳುಗೆ (ಇ.); ಜಗಜೀವನಯೆ ( ಒ. ); ಜಂಗಮಕೆ ( ಗ. )

# ಪ್ರಭುಲಿಂಗಲೀಲೆ

## ಕಠಿಣ ಶಬ್ದಗಳ ಕೋಶ

### ಅ

ಅಕ್ಕಜ (೪-೧೯) ಅಸೂಯೆ
ಅಗಳು (೨-೬) ಕಂದಕ, ಅಗಳ್ತೆ
(೧೧-೪) ತೋಡು, ಅಗಿ
ಅಚ್ಚುಗ (೪-೨ ವ) ಮೋಹ
ಅಟಮಟಿಸು (೧೬-೩೨) ತಪ್ಪಿಸಿ-ಕೊಂಡು ಹೋಗು
ಅಡಕಿಲು (೪-೧೨) ಒಂದರ -ಮೇಲೊಂದು ಒಟ್ಟಿದ
ಅಡಬಳ (೮-೧೩) ಮಾಂಸ
ಅಣಕ (೮-೨೭) ಹಾಸ್ಯ
ಅಣಲು (೨೩-೪೧) ಬಾಯಿ
ಅಣಿವರಿ (೪-೨೭) ಸಾಲಾಗಿ ನಡೆ
ಅಣ್ಣೆ (೧೮-೫) ಶುದ್ಧ
ಅನೇಕ ವಹಣಿ (೧೩-೨೬) ಅನೇಕ -ಪ್ರಕಾರ
ಅನ್ಯಾಪದೇಶ (೧೧-೧೬) ಬೇರೆ ರೀತಿ
ಅರ್ತಿ (೩-೩೨) ಪ್ರೀತಿ
ಅಳಬಳ (೭-೩೪) ಶಕ್ತಿ
(೫-೨೨) ಇಚ್ಛೆ, ಸಾಮರ್ಥ್ಯ
ಅಳವಡು (೧೦-೨೪) ಒಪ್ಪು, ಹೊಂದು
ಅಳವಿ (೫-೧೧) ಸಾಮರ್ಥ್ಯ
ಅಳುಪು (೧೫-೨೫) ಆಶೆ
ಅಂಗಚಿತ್ತ (೫-೪೨) ಬಹುಮಾನ
ಅಂಗವಟ್ಟಿ (೫-೪) ಸೌಂದರ್ಯ
ಅಂಗೈಸು (೧೦-೨೧) ಸ್ವೀಕರಿಸು

### ಆ

ಆಡುವೊಲ (೩-೩೧) ಕ್ರೀಡಾಂಗಣ
ಆಣತಿ (೧೬-೧೪) ಆಜ್ಞೆ
ಆಯತ (೧-೨) ಸಿದ್ಧತೆ, ಸಾಧನ
ಆರವೆ (೧೩-೫೫) ಉಪವನ, ತೋಟ
ಆಲವಟ್ಟ (೨೧-೧ ವ) ಬೀಸಣಿಕೆ
ಆಲಿ (೧೧-೨೩) ದೃಷ್ಟಿ
ಆವುಜ (೪-೪೧) ವಾದ್ಯ
ಆಳವಾಡು (೭-೫೧) ತಗ್ಗಿಸು
ಆಳಿಗೊಳ್ಳು (೨೨-೨ ವ) ವಂಚಿಸು
ಆಳ್ದ (೧೩-೧೦) ಒಡೆಯ

### ಇ

ಇಕ್ಕೆ (೯-೪) ಸ್ಥಾನ
ಇಕ್ಕೆಲ (೪-೧೦) ಎರಡು ಮಗ್ಗಲು
ಇಟ್ಟಣಿಸು (೪-೪೯) ಗುಂಪಾಗು
ಇಡಿ (೧೧-೨) ತುಂಬು
ಇದ್ದೆಸೆ (೪-೨೨) ಎರಡು ಕಡೆ
ಇನಿಯ (೩-೪೫) ಗಂಡ
ಇಮ್ಮೆ (೭-೭೦) ಎರಡು ಸಾರೆ
ಇಱು (೪-೫) ಹೊಂದಿಸಿಹಾಕು
ಇಂಪು (೧-೮) ಮಾಧುರ್ಯ

### ಉ

ಉಕ್ಕಲಿಸು (೧೩-೧೪) ಕೈಮೀರು

ಉಗ್ಘಡಣೆ ( ೫-೯ ) ಸಪ್ಪಳ, ಘೋಷ
ಉಗಿ (೧೩-೨೩) ಒಡೆ
ಉಗು (೧೩-೫೯) ಸೇರು
ಉಡಿನೇವಳ ( ೫-೫ ) ಉಡಿದಾರ
ಉತ್ತರಾಯಿಗಳು (೧೦-೨೪) ಹೆರವರು
ಉದ್ದಂಡ ( ೧೩-೩ ) ಗರ್ವಿಷ್ಠ
ಉಪ್ಪವಡಿಸು(೪-೨) ನಿದ್ದೆಯಿಂದ ಏಳು
ಉಮ್ಮಳಿಕೆ ( ೫-೬೭ ) ಚಿಂತೆ, ದುಃಖ
ಉರವಣಿಸು (೧೩-೧೫) ಉದ್ಧಟತನ-ದಿಂದ ವರ್ತಿಸು
ಉಱಿಸಿಕೆ (೧೦-೨೩) ಸಹನ
ಉಱುಗು (೨೨-೩೪) ಡೊಂಕ
ಉಱುಬು ( ೭-೭೧ ) ಹೆಚ್ಚಾಗು
ಉಲುಹು ( ೩-೨೭ ) ಧ್ವನಿ

## ಊ

ಊಣೆಯ (೭-೭೬) ಕುಂದು, ತೊರತೆ
ಊಳಿಗ ( ೪-೩ ) ಸೇವೆ

## ಎ

ಎಕ್ಕಲ (೧೩-೧೧) ಹಂದಿ
ಎಗ್ಗತನ ( ೭-೨೮ ) ದಡ್ಡತನ
ಎಕ್ಕೆವಿಂಡು ( ೧೩-೪ ) ದೊಡ್ಡ - ಸಮೂಹ
ಎಡೆವಱಿ (೧೦-೨೬) ನಾಶವಾಗು
ಎಱಕ ( ೫-೧೯ ) ಪ್ರೀತಿ
ಎರದಮುಳ್ಳು (೧೦-೨ ವ) ಬೋರೆ-ಯ ಮುಳ್ಳು
ಎಱೆಯ ( ೮-೩೦ ) ಒಡೆಯ
ಎಸಕ ( ೧೯-೭ ) ರೂಪ
(೨೪-೨೩) ಕಾರ್ಯ

## ಏ

ಏಗುವುದು ( ೭-೬ ) ಏನುಮಾಡು-ವುದು
ಏಡಿಸು (೨೨-೩೫) ಹೀಯಾಳಿಸು
ಏಳಿಸು (೧೩-೨೨) ಹೀಯಾಳಿಸು
ಏಱು ( ೫-೬೮ ) ಹೊಡೆತ, ಗಾಯ

## ಐ

ಐಸಲೇ (೧೦-೧೩) ಒಳ್ಳೇಯದು, ಹಾಗೇ ಆಗಲಿ
ಐಸು ( ೫-೫ ) ಅಷ್ಟು

## ಒ

ಒಕ್ಕುದನು (೧೪-೧೧) ಹೊರಸೂಸಿದುದನ್ನು, ಹೆಚ್ಚಾದುದನ್ನು
ಒಗ್ಗು ( ೪-೫೨ ) ಗುಂಪು
ಒಚ್ಚತಗೊಳ್ (೧-೭) ಕೂಡಿಕೊಳ್ಳು, ಐಕ್ಯವಾಗು
ಒಟ್ಟಿಲ್ ( ೭-೫೯ ) ರಾಶಿ
ಒಡರಿಚು ( ೧೨-೩ ) ಹೊಂದು
ಒಡ್ಡಣೆ ( ೧೩-೩ ) ರಾಶಿ
ಒಡ್ಡವಣೆ (೧೩-೧೩) ಸಿದ್ಧತೆ, ರೀತಿ
ಒಡ್ಡೈಸು ( ೧-೪ ) ಒಟ್ಟುಗೂಡಿಸು
ಒಪ್ಪ (೧೯-೩೫) ಕಾಂತಿ
ಒಪ್ಪದೆ (೫-೨೨ ) ಚೆನ್ನಾಗಿ
ಒಬ್ಬುಳಿ (೧೮-೧೮) ಒಟ್ಟುಗೂಡುವಿಕೆ
ಒಲವರಕಾಱ (೧೫-೧೨) ಪಕ್ಷಹಿಡಿದು-ಮಾತಾಡುವವ
ಒಸೆ (೧೪-೧೬) ಸಂತೋಷಿಸು

## ಓ

ಓಗಡಿಕೆ ( ೧೮-೭ ) ಓಕರಿಕೆ
ಓಗರ ( ೪-೪೩ ) ಅನ್ನ

ಓಜೆ (೫-೫೬) ಸರಿಯಾದ ನಡತೆ
ಓತು (೯-೩೫) ಪ್ರೀತಿಪಟ್ಟು
ಓಲಗಿಸು (೨-೨೭) ಸೇವೆ ಮಾಡು
ಓಪಾದಿಯಲಿ(೫-೧೪) ಹಾಗೆ, ಅಂತೆ
ಓವರಿ (೧೮-೨೬) ಕೋಣೆ
ಓಲೈಸು (೨-೧೬) ಸೇವೆಮಾಡು

ಕ

ಕಕ್ಕುಲಿಸಿ (೧೧-೫) ಮೋಹಗೊಂಡು
ಕಚ್ಚುರಿ (೪-೪೫) ಚಟ್ಟೆ
ಕಚ್ಚುಟ (೭-೫೭) ಕೌಪೀನ
ಕಡವಸ (೭-೪೫) ಚರ್ಮ, ಕೃಷ್ಣಾಜಿನ
ಕಡಿ (೨೩-೪೧) ತುಂಡು
ಕಡುದುಱು (೩-೪೨) ಕಡಜೀರಿಗೆಯ ಹುಳ
ಕಡುಕು (೫-೭) ಕಟುಕು. ಕಿವಿಯ ಆಭರಣ
ಕಡುಗಳಲು(೮-೮) ನಿರಾಶೆಹೊಂದು
ಕಡುಹು (೧೩-೩೨) ದರ್ಪ
ಕಡೆಗಣಿಸು (೧೬-೧೮) ಪರಿಹರಿಸು
ಕತ (೮-೨೬) ನಿಮಿತ್ತ
ಕನಲು (೭-೮೧) ಸಿಟ್ಟಾಗು
ಕಬಳಿಸು (೨೩-೧೮) ನುಂಗು
ಕಬ್ಬಸೆ (೧೯-೧) ನೇಣ
ಕರ (೨-೩೭) ಹೆಚ್ಚಾದ
ಕರಗ (೪-೩೯) ನೀರಿನ ಪಾತ್ರೆ
ಕರಣಿಕ (೨೨-೧೮) ಕಾರಕೂನ
ಕಱು (೨-೨೧) ಎರಕದ ಮಾದರಿ
ಕಱುಗಟ್ಟು (೪-೯) (ಎರಕದಿಂದ) ಗಟ್ಟಿಯಾಗು
ಕಱುಬು (೫-೪೩) ಅಸೂಯೆ
ಕರ್ದಮ (೨೨-೧೧) ಕೆಸರು
ಕವಲುವಟ್ಟೆ (೩-೯) ಕೂಡಿದಹಾದಿ
ಕಳ (೩-೫) ಕಣ, ಯುದ್ಧರಂಗ
ಕಳವಳ (೬-೧೭) ಗದ್ದಲ
ಕಾಕ (೭-೩೭) ಕೆಟ್ಟಮನುಷ್ಯ
ಕಾರ್ (೫-೧೦) ಮಳೆಗಾಲ
ಕಾಸೆ (೫-೫) ಕಚ್ಚೆ
ಕಾಹುರ (೧೩-೫೨) ಉದ್ವೇಗ
ಕಾಗಬ್ಬು (೭-೭) ಕಾಡುಗಬ್ಬು, ಒಂದು ಜಾತಿಯ ಗಲಗು
ಕಿಸುಕುಳ (೧೩-೫೮) ಕಿರುಕುಳ, ತುಚ್ಛ
ಕಿಸುರು (೬-೩೪) ಅಪಾಯ, 'ದೃಷ್ಟಿ'
ಕೀನಾಶ (೨೪-೧೨) ಯಮ
ಕೀಲಣ (೮-೧೩) ಉಪಾಯ, ಮಂತ್ರ
ಕೀಲಣೆ (೭-೨೬) ಜೋಡಣೆ
ಕೀಸು (೭-೬೪) ಗೀರು, ಕೆತ್ತು
ಕುತ್ತುಱು (೭-೪೩) ಹೊದರು
ಕೂರ್ (೫-೬೫) ಅನುರಾಗಿಸು, ಪ್ರೀತಿಸು
ಕೂರಂಬು (೫-೨೧) ಹದನವಾದ ಬಾಣ
ಕೇಯೂರ (೪-೩೧) ತೋಳಬಳೆ
ಕೆತ್ತು (೫-೪೦) ನಡುಗು, ಹಾರು
ಕೇಣಿಕಾಱ (೧೭-೯) ವೃಥಾವ್ಯವಹಾರ ಮಾಡುವವ
ಕೇವಣ (೨೧-೯) ಕುಂದಣ, ಹೊಂದಿಕೆ
ಕೈಗೈ (೨೨-೧೩) ಅಲಂಕರಿಸು
ಕೈದು (೧೩-೧೬) ಆಯುಧ
ಕೈವಾರಿಸು (೩-೫) ಸ್ತುತಿಸು

ಕೊಡಕೆ (೪-೧೫) ಕಿವಿ
ಕೊಡಕೆಗಂಗಳು (೪-೪೮) ಕಿವಿಯವರೆಗೆ ವಿಶಾಲವಾದ ಕಣ್ಣುಗಳು
ಕೋಟರ (೧೧-೨೮) ಒಳಭಾಗ
ಕೋಡುಕೈ (೨೨-೩೫) ಜೋಡಿಸಿದಕ್ಕೈ
ಕೋಳುಹೋಗು (೧೩-೫) ಬಲೆಬೀಳು, ತುತ್ತಾಗು
ಕಂಡಿ (೨೨-೩೮) ಇರುವಿಕೆ, ರೀತಿ
ಕಂಬುಗ್ರೀವ (೪-೯) ಶಂಕದಂತಿರುವ ಕುತ್ತಿಗೆ
ಕಂಬಿಕಾರ್ತಿ (೪-೫೧) ಗುಡಿಯಲ್ಲಿಯ ಊಳಿಗದವಳು
ಕಂಸಾಳ (೪-೪೧) ಕಂಚಿನ ತಾಳ
ಕಾಂಚೀದಾಮು(೪-೮) ನಡುವಿನ ಪಟ್ಟಿ
ಕಿಂಕಿಲ (೧೩-೪೬) ತುಂಬಿಕೊಂಡ, ಸಂಕೀರ್ಣ
ಕೆಂಜುರಿ (೨-೧೭) ಕೆಂಪಾದ ಉರಿ
ಕ್ರೀ (೨-೩೩) ಕ್ರಿಯೆ

## ಖ

ಖಡ್ಡತನ (೧೩-೭) ದಿಟ್ಟತನ
ಖರಕರ (೨೫-೩) ಸೂರ್ಯ
ಖಂಡೆಯ (೧೯-೩೦) ಕತ್ತಿ

## ಗ

ಗರುವ (೧೧-೨೧) ಶ್ರೇಷ್ಠ
ಗಡಣ (೩-೧೧) ಸಮೂಹ
ಗಡಾವಣೆ (೫-೯) ಘೋಷ, ಸಪ್ಪಳ
ಗನ್ನಗತಕ (೧೬-೩೪) ಮೋಸ
ಗಮಕ (೩-೩೪) ಗತಿ, ಚಪಲತೆ
ಗಮಕ (೭-೨೬) ಕುಣಿಯುವ ಬಗೆ
ಗವಾಕ್ಷ (೪-೬೦) ಸಣ್ಣ ಕಿಡಕಿ
ಗಸಣೆ (೭-೩೮) ವಿಚಾರ, ಚಿಂತೆ, ಗೊಡವೆ.
ಗಾಡಿ (೧೧-೨೧) ರೀತಿ, ಸೊಬಗು
ಗಾಬು (೫-೬೬) ತಪ್ಪು
ಗಾವಳಿಗ (೫-೬೫) ಬಡಾಯಿಗಾರ
ಗಾವಿಲ (೧೩-೪೦) ಹೆಡ್ಡ
ಗಾಹು (೧೭-೩೦) ಕಪಟ
ಗಿಡಿಬಿಡಿ (೩-೧೧) ಒಂದು ಬಗೆಯ ವಾದ್ಯ
ಗುಡಿ (೨-೭) ಪತಾಕೆ, ನಿಶಾನಿ
ಗುಡ್ಡ (೧೩-೪) ಶಿಷ್ಯ, ಹುಂಬ
ಗಂಡೆ (೫-೧೫) ಬಾವು, ಗಂಟು

## ಘ

ಘಸಣೆ (೧೩-೬೪) ಉದ್ಯೋಗ

## ಚ

ಚಢಾಳಿಸು (೨-೧೦) ಹೆಚ್ಚಾಗು
ಚಲ್ಲಣ (೪-೨೯) ಚಡ್ಡಿ
ಚಾಟು (೭-೫೩) ಮುಖಸ್ತುತಿಯ ಮಾತುಗಳು
ಚಿಮ್ಮುರಿ (೫-೬) ಬೆನ್ನಿಗೆ ಕೈಕಟ್ಟುವದು
ಚ್ಚೈ (೩-೨೯) ಚನ್ನಾಗಿ
ಚಿಂದಿ (೫-೬) ಅರಿವಿಯ ಪಟ್ಟಿ

## ಜ

ಜಡಿ (೧೩-೧೪) ಬೆದರಿಸು
ಜಗಳಿ (೪-೪೧) ಒಂದು ತರದ ತಾಳ
ಜಾವಳಿಗ (೫-೩೯) ಸಾಮಾನ್ಯ ಮನುಷ್ಯ
ಜಿನುಗ (೭-೫೭) ಅಲ್ಪ, ಕೀಳ

ಜುಣುಗು (೧೯-೩೬) ಜಾರಿಹೋಗು
ಜೋಗವಿಸು (೫-೭೨) ಸಿದ್ಧಮಾಡು
ಜೋಡು (೧೦-೧೯) ಕವಚ
ಜೋಹ (೭-೩೦) ವೇಷ
ಜಂಕಿಸು (೩-೩೨) ಬೆದರಿಸು
ಜಂಗುಳಿ (೩-೩೧) ಸಮೂಹ
ಜಂಜಡ (೬-೧೪) ತ್ರಾಸ
ಜೊಂಪಿಸು (೧೬-೧೫) ಮೈಮರೆ, ನಡುಗು

ಟ

ಟೊಣೆ (೨೨-೩೦) ಮೋಸಮಾಡು

ಠ

ಠವಣೆ (೨-೨೨) ಲೆಕ್ಕ

ಡ

ಡಗೆ (೧೪-೪) ಬಿಸಿಲಿನತಾಪ, ನೀರಡಿಕೆ
ಡಾವಣಿ (೩-೧೦) ಅನೇಕ ದನಗಳನ್ನು ಕಟ್ಟುವಒಂದು ಹಗ್ಗ
ಡಾಳಕತನ (೫-೩೬) ಬಣ್ಣದ ಮಾತು

ತ

ತಕ್ಕೆ (೨-೨೨) ಬಾಹುಲ್ಯ
ತತ್ತಡೆ (೭-೮೧) ಸಂಭವಿಸಿದರೆ
ತತ್ತವಸರ (೧೪-೧೭) ಇರುವ ಕೆಲಸ
ತಮಂಧ (೩-೨೨) ಕಗ್ಗತ್ತಲೆ
ತರಹರ (೩-೧೭) ಸಮಾಧಾನ, ಶಾಂತಿ
ತಬ್ಬಿಬ್ಬು (೭-೨೬) ಗಾಬರಿ
ತಲ್ಲಣ (೩-೧೮) ಅಂಜಿಕೆ
ತವನಿಧಿ (೧೯-೧೦) ತಪೋನಿಧಿ (?)
ತಳಿತ (೪-೬೨) ಅರಳಿದ
ತಳುವು (೧೪-೧೫) ತಡ, ವಿಳಂಬ
ತಿಟ್ಟವಿಡು (೬-೮) ರೂಪುಗೊಳ್ಳು
ತುತ್ತು (೨೩-೨೭) ನುಂಗು
ತುರಿಯ (೫-೧೦) ವಾದ್ಯ
ತುಱುಗು (೧೪-೪) ತುಂಬಿರು
ತೂಪಿಱಿ (೩-೨೬) (ಮಂತ್ರಿಸಿ) ಊದು
ತೆತ್ತಿಗ (೪-೨೫) ಸೇವಕ, ಆಪ್ತ
ತೆತ್ತಿಸು (೪-೧೪) ಜೋಡಿಸು, ಹೊಂದಿಸು, ಕೆಚ್ಚು
ತೆರೆ (೧೭-೧೮) ಮೈಯ ಸುಕ್ಕು
ತೊಡೆ (೧೩-೩೨) ನಾಶಮಾಡು
ತೊನೆ (೨೨-೧ ವ) ಹೊಯಿದಾಡಲಿ
ತೊಱೆ (೧೭-೪) ನದಿ
ತೋರ (೪-೯) ದೊಡ್ಡ
ತೋಟಿ (೧೩-೭) ಜಗಳ

ದ

ದರ್ಶನ (೨೦-೨೭) ತತ್ವಜ್ಞಾನ
ದಸರಿದೊಡಕು (೧೨-೨೨) (ರೇಶಿಮೆಯ) ಹುರಿಯಂತೆ ತೊಡಕಾದುದು
ದಳದುಳ (೧೦-೧೭) ಬಲ್ಸೂರೆ
ದಾಯ (೧-೩) ಉಪಾಯ, ಸಾಧನ
ದಾಯಿಗ (೧-೧೧) ಸಾಧಕ, ಭಕ್ತ
ದಾರವಟ್ಟ (೨-೬) ಅಗಸೆಯ ಬಾಗಿಲು, ಗೋಪುರ
ದೀವಸಿ (೧೩-೫೯) ಧೀರ
ದುಗುಡ (೫-೬೭) ಚಿಂತೆ, ದುಃಖ
ದುಗುಲ (೩-೨೬) ದುಕೂಲ, ಸೀರೆ

ದುಮ್ಮಾನ (೮-೧೦) ದುಃಖ
ದೇಸಿಗ (೮-೩) ಮನೆಮಾರು ಇಲ್ಲದವ
ದೊತಾರತನ (೧೩-೧೨) ಹಟಮಾರಿತನ
ದಂಡಿ (೨೧-೨೧) ಸಮತೋಲ
(೨೨-೨೮) ಅತಿರೇಕ, ಹೆಚ್ಚಳ
ದಂಡಿಗೆ (೪-೨೭) ಪಲ್ಲಕ್ಕಿ
ದಂದುಗ (೨೦-೩೫) ಪೀಡೆ, ಕಷ್ಟ

## ಧ

ಧಾವತಿ (೭-೬೪) ಶ್ರಮ
ಧೂಪಿಸು (೭-೪೪) ದಣಿ, ಸಂಕಟಪಡು

## ನ

ನಟ್ಟುವಿಗ (೭-೩೭) ನಾಟ್ಯಶಿಕ್ಷಕ
ನಾಗವಾಸ (೫-೧೭) ನರ್ತಕಿಯರ ಸ್ಥಾನ
ನಿಗಡ (೩-೫) (ಆನೆಯನ್ನು ಕಟ್ಟುವ) ಸರಪಳಿ
ನಿಧಾನ (೧೨-೬) ಆಧಾರ
ನಿಬ್ಬರ (೭-೭) ವಿಶೇಷವಾದ
ನಿಱಿಗೆ (೪-೫೪) ಶೋಭೆ
ನಿಪ್ಪಸರ (೧೯-೩೫) ಉರವಣೆ
ನಿರವಯ (೧೭-೧೩) ಅಖಂಡ
ನೀಱ (೨೧-೩೦) ಚೆಲುವ, ಪ್ರಿಯ
ನೆಗಳ್ (೧-೧೯) ಮಾಡು, ಉಂಟಾಗು, ಪ್ರಕಟವಾಗು
ನೆಮ್ಮು (೭-೬೦) ಆಸರಮಾಡಿಕೊಳ್ಳು
ನೆರವು (೧೬-೩೭) ಸಹಾಯ
ನೆರೆ (೩-೧೩) (ಕೂದಲು) ಬೆಳ್ಳಗಾಗು
ನೆಱತೆ (೮-೩೦) ಪೂರ್ಣತೆ
ನೇವುರ (೪-೭) ಪೈಜಣ
ನುಂಪು (೨೨-೨೧) ನುಣುಪು, ಒಪ್ಪ

## ಪ

ಪಟಲ (೧೫-೫ ವ) ತೆರೆ
ಪಟು (೧೨-೧೫) ತೀಕ್ಷ್ಣ, ದಕ್ಷ
ಪತಂಗ (೨೧-೨೫) ಸೂರ್ಯ
ಪತಿಕರಿಸು (೫-೩೩) ಸ್ವೀಕರಿಸು, ಸಹಾಯಮಾಡು
ಪರಿಣಮಿಸು (೧೨-೪) ನಮಸ್ಕಾರಮಾಡು
ಪರಿವಿಡಿ (೪-೨೧) ಕ್ರಮ, ತರ
ಪರಿವೇಷ್ಟಿಸು (೪-೧೦) ಸುತ್ತುಗಟ್ಟು
ಪರುಠವಣೆ (೨-೩) ಸರಿಯಾದ ವ್ಯವಸ್ಥೆ
ಪರುಠವಿಸು (೧-೭) ಪ್ರಸಾರಮಾಡು
ಪಲ್ಲಟಿಸು (೩-೧೩) ಕ್ರಮತಪ್ಪು, ವಿಕಾರವಶವಾಗು
ಪಾಡು (೪-೫೮) ರೀತಿ
ಪಾಯಕ (೨೨-೪೪) ಕಾಲಾಳು
ಪಾಯವಟ್ಟ (೪-೭) ಪೆಂಡೆಯ, ಕಾಲಿನಾಭರಣ
ಪುರೀಷ (೧೯-೧) ಮಲ
ಪೈಜೆ (೨-೪೧) ಪಂಥ
ಪ್ರಸ್ತಾವ (೩-೧೫) ಸಮಯ, ಸಂದರ್ಭ

## ಬ

ಬನ್ನ (೧೬-೩೪) ತೊಂದರೆ
ಬಣಗು (೨೨-೩೬) ಯಃಕಶ್ಚಿತ, ಕ್ಷುಲ್ಲಕ

ಬಲ್ಲವಿಕೆ (೧೨-೧೭) ಚಾತುರ್ಯ, ತಿಳುವಳಿಕೆ
ಬಳಲುವ (೪-೩೨) ಸಡಲಿದ
ಬಾಣಸ (೮-೧೩) ಅಡಿಗೆ
ಬಾಯ್ದೆರೆ (೨-೩೦) ತುಟಿ
ಬಾರಿ (೭-೩೯) ಹೊಡೆತ, ಸರತಿ
ಬಿದ್ದಿನ (೨೨-೨೬) ಅತಿಥಿ, ಬೀಗ
ಬಿನುಗು (೧೬-೪೯) ಕ್ಷುಲ್ಲಕ
ಬೀಯ (೧-೧೧) ವ್ಯಯ, ವೆಚ್ಚ
ಬುಲ್ಲವಣೆ (೧೫-೪) ಹೆಚ್ಚುವಿಕೆ
ಬೆಗಡು (೫-೩೫) ಭಯ
ಬೆಱಿತು (೧೬-೩೮) ಅಹಂಕಾರದಿಂದ ಮೈಮರೆದು
ಬೇವಸ (೫-೨೪) ಚಿಂತೆ
ಬೋವಗಾರಿಗೆ (೫-೧೭) ಹಿರಿಯತನ
ಬೋಳೆಯರು (೭-೪೬) ದೇವತೆಗಳು
ಬೋಳೈಸು (೫-೩೫) ಸಮಾಧಾನಪಡಿಸು
ಬಿಂದ (೫-೧೭) ಸಮೂಹ

ಭ

ಭಣಿತೆ (೧೩-೪೦) ರೀತಿ
ಭರಭಾರ (೧೬-೭) ಹೆಚ್ಚಾದ ಭಾರ
ಭಾರ್ಗವ (೪-೧೩ ಅ) ಶುಕ್ರ
ಭಾರಂಕ (೮-೮) ದುಃಖಭಾರ
ಭಾವಕ (೧-೮) ಪಂಡಿತ, ಸಹೃದಯ
ಭುಲ್ಲವಣೆ (೬-೧೧) ಹೆಚ್ಚುಗೆ
ಭುಲ್ಲವಿಸು (೨-೩೭) ಗರ್ವದಿಂದ ಉಬ್ಬು
ಭದ್ರ (೨೨-೨ ವ) ಮದ್ದಾನೆ

ಮ

ಮಕರಿಸು (೭-೩೬) ಹೆಚ್ಚಾಗು
ಮಗಿಲು (೨೨-೩ ವ) ಮನೆಯ ಚಪ್ಪರದ ನೆತ್ತಿ
ಮಗ್ಗು (೧೩-೨೬) ವಶೀಕರಣ ರೀತಿ
ಮಡಲು (೫-೮) ಉಡಿ
ಮನಕತ (೭-೮೨) ಸಿಟ್ಟು, ದುಃಖ
ಮಱವೆ (೫-೨೫) ಅಜ್ಞಾನ
ಮಲಯಜ (೯-೩೧) ಗಂಧದಮರ
ಮಳಲೊಟ್ಟಿಲು (೧೬-೩ ವ) ಉಸುಕಿನ ರಾಸಿ
ಮಿತ್ತು (೨-೨೨) ಕೊಲ್ಲುವ ಶಕ್ತಿ
ಮುಕ್ಕುಹೋಗು (೫-೪೯) ಭಂಗವಾಗು
ಮುಡುಬ (೧೧-೨೪) ಹೆಳವ
ಮುಡುಹು (೧೯-೩೩) ಭುಜ
ಮುತ್ತು (೩-೧೩) ಮುದಿಯಾಗಿ
ಮುರಿ (೧೩-೩೩) ತಿರುಗು
ಮೂದಲಿಸು (೮-೧೫) ಜರೆ
ಮೆಲಕಲಿಸಿ (೧೨-೨) ತಿನ್ನಲಿಕ್ಕೆ ಕಲಿಸಿ
ಮೊಗಸು (೧-೧೬) ಪ್ರಯತ್ನಮಾಡು, ಶ್ರಮಬಡು
ಮೊಗ್ಗರವಾಯ್ (೧೩-೧೧) ಗುಂಪಾಗಿ ಮೇಲೆ ಬೀಳು
ಮೋಡಿ (೧೯-೩೪) ರೀತಿ
ಮುಂಗುಡಿ (೪-೨೭) ಮುಂಭಾಗ

ಯ

ಯೂಪ (೨೦-೩೮) ಯಜ್ಞಪಶುವನ್ನು ಕಟ್ಟುವ ಕಂಬ
ಯೋಗವಟ್ಟಿಗೆ (೭-೪೫) ಧ್ಯಾನಕಾಲದಲ್ಲಿ ಬೆನ್ನು ಮೊಲಕಾಲು ಗಳ ಮೇಲೆ ಹೊರುವ ವಸ್ತ್ರ

ರ

ರಾಘೆ (೧೩-೭೦) ತೊಡೆ
ರೂಹಿಡು ( ೪-೨೨ ) ಕಾಣು, ರೂಪ ವನ್ನು ಅರಿ

ಱ

ಱೋಡಾಡು ( ೭-೬೧ ) ತಿರಸ್ಕಾರ - ಮಾಡು

ಲ

ಲಾಕುಳ ( ೭-೪೫ ) ಯೋಗದಂಡ
ಲಾಗು ( ೧-೯ ) ಜಾಗ್ರತೆ
ಲಾವಕ ( ೫-೬೪ ) ಚಾಡಿಕೋರ
ಲುಳಿ ( ೩-೨೫ ) ಹೊಳಪು
ಲೋಚು ( ೭-೫೭ ) ಕೂದಲನ್ನು ಕೀಳಿಸಿಕೊಳ್ಳುವ ( ಜೈನಧರ್ಮದ) ಪದ್ಧತಿ

ವ

ವರ್ಮ ( ೧೫-೧೪) ಮರ್ಮ
ವಹಣಿ ( ೫-೯ ) ಸೊಬಗು, ವಿಡಾಯ
ವಾಘೆ (೧೩-೭೦) ಕಡಿವಾಣ
ವಾರುವ (೧೮-೧೯) ಕುದುರೆ
ವಾಸಿ ( ೭-೬೪ ) ಪಂಥ, ನಿಶ್ಚಯ
ವಾಸಿಗ ( ೫-೧೩ ) ಭೃತ್ಯ, ವಿಧಾವಂತ
ವಿಡಾಯ ( ೧-೧೧ ) ಆಡಂಬರ
ವಿಧಿ ( ೧-೧೨ ) ನೇಮ, ರೀತಿ, ವಿಧಾನ
ವಿಧಾವಂತ ( ೫-೨ ) (ಬಾಡಿಗೆ ಹಣಕ್ಕಾಗಿ) ದುಡಿಯುವವ
ವಿನಿಯೋಗ (೩-೩೫) ಊಳಿಗ, ಸೇವೆ
ವಿಸಟಂಬರಿ (೧೪-೯) ಯಥೇಚ್ಛವಾಗಿ ಹರಿ
ವೆಗ್ಗಳಿಸಿ ( ೩-೧೩ ) ಹೆಚ್ಚಾಗಿ
ವೇದಿಸು ( ೪-೪) ಪ್ರಕಟಮಾಡು
ವೇಘೆ ( ೧೭-೨ ) ಗುರಿ
ವೈಹಾಳಿ ( ೧೦-೪ ) ಕುದುರೆಯ ಸವಾರಿ
ವಂಕದಾರ (೧೪-೧೨) (ವಕ್ರದ್ವಾರ), ಬಾಗಿಲು

ಸ

ಸಕೀಲ (೧೨-೧೬) ಸಂಬಂಧ, ಕೂಡುವಿಕೆ
ಸಯವಾದ ( ೧೪-೭ ) ಹೊಂದಿದ, ಪಾತ್ರವಾದ
ಸರಿಸ ( ೪-೨೧ ) ಸಮೀಪ
ಸಲ್ಲವಿಡು ( ೫-೧೪ ) ಬಿಟ್ಟುಬಿಡು
ಸವ್ಯಾಪಸವ್ಯ (೧೯-೩೪) ಎಡಬಲ
ಸಸಿನೆ ( ೪-೫ ) ಚೆನ್ನಾಗಿ, ಸರಿಯಾಗಿ
ಸಾರಯ (೮-೨ ವ) ಮೋಕ್ಷ
ಸಾರೆ (೧೧-೩೨) ಸಮೀಪ
ಸೀಗುರಿ ( ೧-೧೫ ) ಚೌರಿ
ಸುಘಾಳ ( ೩-೨೫ ) ಚೆಂದ
ಸುಮಾನ ( ೩-೨ ) ಆನಂದ
ಸುಯಿಧಾನ (೧೭-೨೨) ರಕ್ಷಿಸುವುದ
ಸೊಡರಕ್ಕಿ ( ೩-೨೬ ) ಅಕ್ಕಿ ಸುಟ್ಟ ಕಾಡಿಗೆ
ಸೊಡ್ಡಳ (೨೨-೨ ವ) ಶಿವ
ಸೊಮ್ಮು ( ೩-೩೦ ) ಐಶ್ವರ್ಯ

ಸೋಹೆ ( ೫-೪೩ ) ಕುರುಹು
ಸೌರಂಭ (೩-೨) ಸಂಭ್ರಮ, ಆನಂದ
ಸಂಕೋಚ (೧೨-೧೮) ಸಂಕ್ಷೇಪ
ಸಂಘಟ (೧೬-೩೨) ಹಂಚಿಕೆ
ಸಂವರಿಸು ( ೪-೨೪ ) ಸಿದ್ಧಮಾಡು, ಸರಿಮಾಡು
ಸಾಂಗತ್ಯ ( ೩-೧೯ ) ಸಂಗತಿ, ಕೂಟ

## ಹ

ಹದುಳ ( ೨-೩೯ ) ಸುರಕ್ಷಿತ
ಹಣ್ಣಿದ ( ೭-೨೩ ) ಜೋಡಿಸಿದ, ಸಿದ್ಧಮಾಡಿದ
ಹರವರಿ ( ೮-೩೧ ) ಪ್ರಕಟನೆ
ಹಱುವು (೧೦-೧೦) ಉಪಾಯ
ಹಱುಗೋಲ (೧೨-೧೪) ಡೋಣಿ
ಹಳವಿಗೆ ( ೪-೨೧ ) ಧ್ವಜ
ಹಾರು ( ೨-೧೬ ) ನಿರೀಕ್ಷಿಸು
ಹಿಳುಕು ( ೫-೧೧ ) ಬಾಣದ ಹಿಡಿಕೆ. ಪುಂಖ
ಹಿಸುಣತೆ (೧೬-೪೦) ಚಾಡಿಕೋರತನ
ಹೀಹಾಳಿ ( ೭-೨೬ ) ತಿರಸ್ಕಾರ
ಹುಗಿಲು ( ೧೮-೮ ) ಸೀಳುವಿಕೆ
ಹುದು (೧೬-೪೨) ಹೊಂದಿಕೊಳ್ಳುವುದು
ಹೂಣಿಕೆ ( ೨-೪೦ ) ಪಂಥ
ಹೂಸಿಹುಂಡ (೧೫-೧೨) ಡಾಂಬಿಕಾಚಾರಿ
ಹೆಕ್ಕಳ ( ೧೧-೫ ) ಹೆಚ್ಚಳ
ಹೆಟ್ಟುಗೆ ( ೯-೩ ) ಸಖಿ, ಗೆಳತಿ, ವನಿತೆ
ಹೆಱೆ ( ೪-೩೦ ) ಚಂದ್ರ
ಹೊರಳಿ ( ೨-೨ ) ಸಮೂಹ
ಹೊಲಬು ( ೧-೧೨ ) ರೀತಿ
ಹೋರಟೆ ( ೧೧-೫ ) ಹೋರಾಟ, ಪೇಚಾಟ
ಹಂಗು (೧-೧ ವ) ನೆರವು, ಸಹಾಯ
ಹಂದೆ (೧೬-೩೭) ಹೇಡಿ

# ಒಪ್ಪೋಲೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೨ | ೨೩ | ಖಳಱಿ | ಖಳರಿ |
| ೩ | ೧೯ | ಸಾಂಪ್ರ | ಸಂಪ್ರ |
| ೪ | ೧೪ | ಗಾಎನುತ | ಗಾಯೆನುತ |
| ೯ | ೨೨ | ಲಿಱುಳ | ಲಿರುಳ |
| ೧೪ | ೨೩ | ಸುಧಾರಕ | ಸುಧಾಕರ |
| ೧೫ | ೧೫ | ನಯಂಗ | ನಯನಂಗ |
| ೧೭ | ೧೪ | ಜ್ಞಾನ | ಜ್ಞಾನಿ |
| ೨೪ | ೧೨ | ದೂರ್ವಾಸ | ದುರ್ವಾಸ |
| ೨೮ | ೮ | ಹೋಱು | ಹೇಱು |
| ೩೫ | ೨೧ | ಕಱುಗಟ್ಟು | ಕರುಗಟ್ಟು |
| ೩೫ | ೧೫ | ಕಱುಹಿನ | ಕುರುಹಿನ |
| ೪೦ | ೭ | ವಿಳಾಸಿ | ವಿಳಾಸಿನಿ |
| ೫೮ | ೨ | ಸಕಂ | ಸಂಕ |
| ೬೧<br>೮೨ | ೧೪<br>೮ | ತೊಱುವ | ತೋಱುವ |
| ೮೯ | ೨ | ಚೋಹ | ಜೋಹ |
| ೯೦ | ೧೩ | ಮಟ್ಟಿದ | ಮುಟ್ಟಿದ |
| ೯೧ | ೧೦ | ಹಾಎನುತ | ಹಾಯೆನುತ |
| ೭೮<br>೧೨೦ | ೧ | ಱೂಢಿ | ರೂಢಿ |
| ೧೨೧ | ೯ | ಗ್ರುಹ | ಗೃಹ |
| ೧೨೬ | ೪ | ಹಱುವ | ಹರುವ |
| ೧೩೮ | ೧೯ | ಇದೇ | ಇದೆ |
| ೧೪೩ | ೧೪ | ಅಗಲದ | ಅಗಲಿದ |
| ೧೪೯ | ೩ | ತಾಳೋಷ್ಟ್ರ | ತಾಳೋಷ್ಠ |

* ಮುಂದೆ ಬಂದಲ್ಲೆಲ್ಲ ಇದೇರೀತಿ ತಿದ್ದಿಕೊಳ್ಳಬೇಕು.

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೫೧ | ೬ | ವಿಮ್ಮ | ನಿಮ್ಮ |
| ೧೫೭ | ೭ | ನೆಳಸಿದಾತಂ | ನೇಳಿಸಿದವಂ |
| ೧೬೦ | ೧೮ | ಬೆರೂಱು | ಬೇರೂಱು |
| ೧೬೨ | ೯ | ಲುಯುುತ್ತಮಾ | ಲುತ್ತಮಾ |
| ೨೦೭ | ೨೦ | ತೊಱು | ತೊಱಿ |
| ೨೨೨ | ೩ | ಭ್ರಹ್ಮ | ಬ್ರಹ್ಮ |
| ,, | ೪ | ದೋವಱ | ದೋವರಿ |
| ೨೨೫ | ೧೪ | ಕಬ್ಬಸು | ಕಬ್ಬಸೆ |
| ೨೩೪ | ೧ | ನೊಡ | ನೋಡ |
| ೨೮೪ | ೨೧ | ದಂಡೆ | ದಂಡಿ |
| ೨೮೯ | ೧೯ | ಒಡಬ | ಬಡಬ |

**ವಚನ:** ಜಯಜಯಶಾಹಾಂತ ಪ್ರಭುವೆ । ಜಯತು ನಿರ್ಗುಣ ನಿಧಿಯೆ ।
ಜಯಸಂಪತ್ತುಸಾಹಿತ್ಯದೋಲಗಪ್ರಿಯ । ಜಯ ಬಸವಪ್ರಭುದೇವಾ ।
ಜಯಕಾಲ ಜಯಶೀಲ । ಜಯಪಾಲ ಜಯಲೋಲ ।
ಜಯಜಯ ಜಯವೆಂದು ಗಣಸ್ತೋಮ ಪೊಗಳುತಿದೆ ।
ಜಯಪ್ರಭುವೆ ನಿಮ್ಮ ಪಾದ ಪದ್ಮಂಗಳಿಗೆ । ಶರಣೆಂದು ಜಯ ಜಯವೆಂದು
ಸ್ತುತಿಸುತ್ತಿರಲು॥

( ಶ್ರೀ। ವೇ। ಬುದ್ಧಯ್ಯಸ್ವಾಮಿ ಪುರಾಣಿಕ ಇವರ ಪ್ರತಿಯಲ್ಲಿ ೨೫ನೆಯ ಗತಿಯ
ಮೊದಲಿಗಿದ್ದ ವಚನ)

